# ಮುನ್ನುಡಿ.

---

### ಓಂ ನಮಸ್ಸೂರ್ಯಾಯ.

ಶ್ರುತ್ಯುಕ್ತವಾದ ಕರ್ಮಗಳಲ್ಲಿ ನಿತ್ಯ, ನೈಮಿತ್ತಿಕ, ಕಾಮ್ಯ ಎಂಬ ಮೂರು ಪ್ರಕಾರಗಳಿವೆ. ನಿತ್ಯಕರ್ಮವೆಂದರೆ ಫಲದೃಷ್ಟಿಯಿಲ್ಲದೆ, ಜನ್ಮಾಂತರಗಳಲ್ಲಿ ಮಾಡಿದ ಪಾಪಕ್ಷಯಕ್ಕಾಗಿಯೇ ಅನುಷ್ಠಾನಮಾಡಬೇಕಾದ ಕರ್ಮಗಳು. ಅವುಗಳನ್ನು ಆಯಾ ಕಾಲದಲ್ಲಿ ಮಾಡದಿದ್ದರೆ ಹೊಸದಾದ ಪಾಪಗಳು ಸಂಭವಿಸುವುವು. ಆ ಪಾಪದ ಪರಿಹಾರಕ್ಕಾಗಿಯೂ, ಮತ್ತೆ ಪಾಪರಾಶಿಯು ಹುಟ್ಟದಂತೆಯೂ ಅದೇ ಕರ್ಮಗಳನ್ನೇ ವಿಶೇಷ ವಿಧಿಯಿಂದ ಮಾಡಬೇಕಾಗಿ ಬರುವುದು. ಯಜ್ಞನಾಶವಾಗುವ ಸನ್ನಿವೇಶ, ಮನೆಮಠಗಳು ದಗ್ಧವಾಗುವ ಸಂದರ್ಭ, ಅಥವಾ ಆಗಾಗ ಕಾಲನಿಯಮವಿಲ್ಲದೆ ಒದಗುವ ಗ್ರಹಣ, ಉತ್ಪಾತಾದಿ ಕಾಲಗಳು, ಇಂತಹ ಸಮಯದಲ್ಲಿ ನಡೆಸಬೇಕೆಂದು ವಿಧಾಯಕವಾಗಿರುವ ಕರ್ಮಗಳಿಗೆ ನೈಮಿತ್ತಿಕ ಕರ್ಮಗಳೆಂದು ಹೆಸರು. ಈ ಕರ್ಮಾಚರಣೆಯಿಂದ ಆಯಾ ಸಂದರ್ಭಕ್ಕೆ ಕಾರಣವಾಗಿರುವ ಪಾಪವು ಪರಿಹಾರವಾಗಿ ಮುಂದೆ ಅಂತಹ ತೊಂದರೆಗಳು ತಪ್ಪುವುವು. ಇನ್ನು ಕಾಮ್ಯ ಕರ್ಮಗಳೆಂದರೆ, ಸ್ವರ್ಗ, ಪಶು, ಧನ, ಧಾನ್ಯ ಮುಂತಾದುವುಗಳನ್ನು ಬಯಸಿ ತತ್ಪ್ರಯುಕ್ತವಾಗಿ ಆಚರಿಸುವ ಕರ್ಮಗಳೆಂದು ತಿಳಿಯಬೇಕು. ಮಾನವನು ಈ ಜನ್ಮದಲ್ಲಿ ಅನುಭವಿಸುವ ಸುಖದುಃಖಗಳೆಲ್ಲಕ್ಕೂ ಪೂರ್ವಜನ್ಮದಲ್ಲಿ ಮಾಡಿದ ಪುಣ್ಯ ಪಾಪ ಕರ್ಮಗಳೇ ಕಾರಣ. ಪ್ರಾಚೀನ ಕರ್ಮಮೂಲವಿಲ್ಲದೆ ಈಗಿನ ಯಾವ ಸುಖದುಃಖವೂ ಉಂಟಾಗಲಾರದು. ಇವುಗಳೆಲ್ಲವೂ ಕಾಮ್ಯಕರ್ಮಗಳ ಫಲವೆಂದರಿಯಬೇಕು. ಫಲೋದ್ದೇಶಕವಾಗಿ ಮಾಡಿದ ಕರ್ಮಗಳಿಂದ ಇಷ್ಟಫಲವು ನೆರವೇರದಿದ್ದರೆ ಅದಕ್ಕೆ ಪ್ರಬಲ ಪ್ರತಿಬಂಧಕವಿರಬೇಕು. ಒಂದುವೇಳೆ ಆ ಫಲವು ಈ ಜನ್ಮದಲ್ಲಿ ಬರದಿದ್ದರೆ ಜನ್ಮಾಂತರದಲ್ಲಾದರೂ ದೊರೆಯುವುದು. ಸ್ವರ್ಗ ಮುಂತಾದ ಫಲಗಳಂತೂ ಜನ್ಮಾಂತರದಲ್ಲಿಯೇ ದೊರೆಯತಕ್ಕವುಗಳು. ಅಂತಹ ತಿಳಿವಳಿಕೆಯಿಂದಲೇ ಕಾಮ್ಯಕರ್ಮಾದಿಗಳಲ್ಲಿ ತೊಡಗಬೇಕೆಂದು ವಿದ್ವಾಂಸರ ಅಭಿಪ್ರಾಯ.

ಕಾಮ್ಯಕರ್ಮಗಳಲ್ಲಿ ಜ್ಯೋತಿಷ್ಟೋಮಾದಿ ಯಾಗಗಳು ಸ್ವರ್ಗಫಲಕ ವಾಗಿರುವಂತೆ ಶ್ಯೇನಯಾಗ, ರಾತ್ರಿ, ಶ್ರಾದ್ಧಾದಿಗಳು ಶತ್ರುನಾಶನಾರ್ಥವಾಗಿ ವಿಧಾಯಕ ವಾಗಿವೆ. ಅವೂ ಶ್ರುತ್ಯುಕ್ತವಾದವುಗಳೇ.

ಆದರೆ ಅವು ಅನುಷ್ಠಾನಾರ್ಹಗಳಲ್ಲ. ಕರ್ಮಗಳಲ್ಲಿ ಸಾತ್ವಿಕ, ರಾಜಸ, ತಾಮಸ ಗಳೆಂಬ ಭೇದಗಳನ್ನು ಕಲ್ಪಿಸಿ, ಅವುಗಳನ್ನು ತಾಮಸವರ್ಗಕ್ಕೆ ಸೇರಿಸಿ, ಅಂಥ ಕರ್ಮಗಳನ್ನು ದೂರೀಕರಿಸಿರುವರು. ಅವುಗಳ ಆಚರಣೆಯಿಂದ ಪಾಪಸಂಘಟನೆ ಯಾಗುವುದೆಂದೂ ತೀರ್ಮಾನಿಸಿರುವರು. ಆದರೆ ಅಂತಹ ಪಾಪರಾಶಿಯು ಪ್ರಾಯಶ್ಚಿತ್ತಾದಿಗಳಿಂದ ಪರಿಷ್ಕೃತವಾಗುವುದೆಂದು ಭಾವಿಸಿ, ರಾಜಾಜ್ಞೆ, ಜನತೆಗೆ ಉಪಕಾರ ಮಾಡುವ ದೃಷ್ಟಿ, ಪ್ರಬಲವ್ಯಾಧಿನಾಶ ಮುಂತಾದುವುಗಳನ್ನು ಗುರಿಯಾಗಿಟ್ಟು ಕೆಲವರು ಅವನ್ನು ನಡೆಸಿರುವರು. ಪುರಾಣೇತಿಹಾಸಗಳಲ್ಲಿ ಇಂತಹ ಆಭಿಚಾರಿಕ ಕರ್ಮಗಳನ್ನು ನಡೆಸಿರುವುದಕ್ಕೆ ಆಧಾರಗಳು ದೊರೆಯುತ್ತವೆ. ಮೇಲೆ ಹೇಳಿದ ಧ್ಯೇಯ ಸಾಧನೆ ಯಿಂದ ಅದು ಅನುಚಿತವಲ್ಲವೆಂಬುದನ್ನೂ ನಿರೂಪಿಸಿರುವರು. ಶತ್ರುನಾಶ, ವ್ಯಾಧಿ ನಾಶ ಇವುಗಳಿಂದ ಶರೀರವನ್ನು ದೃಢವಾಗಿಟ್ಟಿದ್ದು, ತನ್ಮೂಲಕ ಯೋಗಮಾರ್ಗವನ್ನ ವಲಂಬಿಸಿ, ಸುಲಭವಾಗಿ ಮುಕ್ತಿಯನ್ನು ಸಂಪಾದಿಸಬಹುದೆಂದು ಆ ಪಕ್ಷದವರು ಸಿದ್ಧಾಂತಮಾಡಿದ್ದಾರೆ.

ಪ್ರಕೃತ ಸಾಂಬಪುರಾಣದಲ್ಲಿ ಸಾಂಬನು ಕುಷ್ಠರೋಗ ನಿವಾರಣಾರ್ಥವಾಗಿ, ಮಿತ್ರವನದಲ್ಲಿ ಸೂರ್ಯನನ್ನು ನಾರದರ ಮಾತಿನಂತೆ ಆರಾಧಿಸಿ, ಸೂರ್ಯಾನುಗ್ರಹದಿಂದ ತನ್ನ ವ್ಯಾಧಿಯನ್ನು ಕಳೆದುಕೊಂಡನು ಎಂಬುದರಿಂದ ಕಥೆಯು ಪೂರ್ಣವಾಗುವುದು. ಆದರೆ ಪುರಾಣಕಾರರು ಸಂದರ್ಭೋಚಿತವಾಗಿ ಈ ಗ್ರಂಥದ ಕೊನೆಯ ಅಧ್ಯಾಯ ಗಳಲ್ಲಿ, ಶತ್ರುನಾಶಕರವಾದ, ಹಾಗೂ ಪ್ರಾಣಿ, ವ್ಯಾಧಿ ಇವುಗಳನ್ನು ಸ್ತಂಭನಮಾಡುವ ಹಲವಾರು ಆಭಿಚಾರಿಕ ಕ್ರಿಯೆಗಳನ್ನು ವರ್ಣಿಸಿರುವರು. ಮಂತ್ರ ಶಾಸ್ತ್ರದಿಂದ ಸುಲಭವಾಗಿ ತಿಳಿಯಬಹುದಾದ ಈ ವಿಷಯಗಳನ್ನು ಇಲ್ಲಿ ವಿವರಿಸಿರುವಷ್ಟು ಮಾತ್ರ ದಿಂದಲೇ ಯಾರೂ ಪೂರ್ಣವಾಗಿ ಅರಿಯಲಾರರು. ಗುರುಪರಂಪರೆಯಿಂದ ಕರ್ಮಸ್ವರೂಪವನ್ನೂ, ಆಚರಣೆಯ ಕ್ರಮವನ್ನೂ ಅರಿತವರಿಗೆ ಮಾತ್ರ ಈ ಪುರಾಣದ ಆಯಾ ಭಾಗಗಳನ್ನು ವಿವರಿಸಲು ಸಾಧ್ಯ. ಮಂತ್ರಜ್ಞನಾದರೂ ತಂತ್ರಜ್ಞನಲ್ಲದಿದ್ದರೆ, ಈ ಭಾಗವು ಅರ್ಥವೂ ಆಗುವುದಿಲ್ಲ. ಆದರೂ ಅದನ್ನು ಅನುಷ್ಠಾನಕ್ಕೆ ತರುವಂತಿಲ್ಲ.

ಇಲ್ಲಿ ಪ್ರತಿಪಾದಿಸಿರುವ ಅಂಶಗಳು, ಕ್ರಮವರಿತು ಉಪದೇಶ ಸರಣಿಯಿಂದ ಬಂದಿಲ್ಲ. ಕರ್ಮಗಳ ಸಾರಾಂಶ ಮಾತ್ರ ಸೂತ್ರಪ್ರಾಯದಂತೆ ವರ್ಣಿತವಾಗಿದೆ. ಮಧ್ಯೆ ಯೋಗಮಾರ್ಗವನ್ನೂ ಸಾಧಕನಿಗೆ ಮುಕ್ತಿಸಾಧನವನ್ನಾಗಿ ಜೋಡಿಸಿರುವರು. ಇಂತಹ ವಿಷಯಗಳನ್ನು, ಶಾಸ್ತ್ರಜನ್ಯಜ್ಞಾನದಿಂದಲೂ, ಸದ್ಗುರುವಿನ ಅನುಭವ ಪೂರಿತವಾದ ಉಪದೇಶದಿಂದಲೂ, ಅರಿತು ಅನುಷ್ಠಿಸಬೇಕೇ ಹೊರತು, ಕೇವಲ ಗ್ರಂಥಪಠನೆಯಿಂದ ನಿಜವಾಗಿಯೂ ಸಾಧ್ಯವಾಗಲಾರದು. ಮತ್ತು ಈ ವಿಷಯಗಳನ್ನು ಕನ್ನಡಕ್ಕೆ ಸುಲಭವಾತಿನಿಂದ ಪರಿವರ್ತಿಸುವುದೂ ದುಸ್ತರವೆನಿಸಬಹುದು. ಇಲ್ಲಿ ಉಕ್ತವಾಗಿರುವ ಸೂರ್ಯವ್ರತಾದಿಗಳು, ಈಗ ಪ್ರಸಿದ್ಧವಾಗಿರುವ ಕ್ರಮದಂತೆ ಪ್ರತಿಪಾದಿತ ಗಳಾಗಿಲ್ಲ. ಇದರಲ್ಲಿ ಸೂಕ್ಷ್ಮರೂಪದಿಂದ ತೋರಿಸಿರುವ, ಸೂರ್ಯವ್ರತಗಳನ್ನು ಭವಿಷ್ಯ ಮಹಾಪುರಾಣದಲ್ಲಿ ವಿವರವಾಗಿ ಪ್ರಯೋಗ ಸರಣಿಯನ್ನನುಸರಿಸಿ ಪ್ರತಿಪಾದಿಸಿರು ವರು. ಕೇವಲ ಉಪಾಸಕರು ವಿಶೇಷ ಫಲಾಪೇಕ್ಷೆಯಿಂದ ಮಾಡುವ ವ್ರತಗಳು ಮಾತ್ರ ಈ ಪುರಾಣದಲ್ಲಿ ಕಂಡುಬರುತ್ತವೆ. ಅಲ್ಲದೆ ಪರಿವರ್ತನೆಯ ಕಾಲದಲ್ಲಿ ನನಗೆ ದೊರೆತ ಎರಡು ಪ್ರತಿಗಳಲ್ಲಿಯೂ ಮುದ್ರಣದೋಷಗಳು ಬಹುವಾಗಿದ್ದುವು. ಇದರಿಂದಲೂ ಹಿಂದೆ ಜನಸಾಮಾನ್ಯದಲ್ಲಿ ಈ ವ್ರತಾಚರಣೆಗಳು ರೂಢಿಯಲ್ಲಿರಲಿಲ್ಲ ವೆಂದು ಗೊತ್ತಾಗುವುದು. ಇನ್ನೂ ಕೆಲವು ಕಾರಣಗಳಿಂದ ಊಹೆಮಾಡಿದರೆ ಇಲ್ಲಿಯ ವ್ರತಗಳು ಪರಂಪರೆಯಲ್ಲಿ ಅನುಷ್ಠಿತಗಳಾಗಿದ್ದಂತೆ ಕಂಡುಬರುವುದಿಲ್ಲ.

ಸಂಪ್ರದಾಯಶೀಲರೂ, ಆಸ್ತಿಕವರೇಣ್ಯರೂ ಎನಿಸಿ, ಕರ್ಣಾಟಕ ಸಿಂಹಾಸನಾ ಧೀಶ್ವರರಾಗಿರುವ ನಮ್ಮನ್ನಾಳುವ ಶ್ರೀಮನ್ಮಹಾರಾಜರು, ಶ್ರೀ **ಜಯಚಾಮ ರಾಜೇಂದ್ರ ಒಡೆಯರ್ ಬಹದ್ದೂರ್**, ಜಿ. ಸಿ. ಬಿ., ಜಿ. ಸಿ. ಎಸ್. ಐ. ಮಹಾ ಪ್ರಭುಗಳವರ ಸಂಪೂರ್ಣ ಪ್ರೋತ್ಸಾಹದಿಂದ ಇಂತಹ ಅಮೂಲ್ಯ ಗ್ರಂಥಗಳು ಪ್ರಕಾಶಕ್ಕೆ ಬಂದು ಜ್ಯೋತಿಯನ್ನು ಬೀರುವಂತಾದುವು. ಹೀಗೆ ಸದ್ಗುಣ ಶಿರೋಮಣಿಗಳೆನಿಸಿದ ಪ್ರಭುವರ್ಯರಿಗೂ, ಅವರ ಕುಟುಂಬವರ್ಗಕ್ಕೂ ತೇಜೋ ರಾಶಿಯಾದ ಸೂರ್ಯಪರಮಾತ್ಮನು ಆಯುರಾರೋಗ್ಯಾದಿ ಸಕಲ ಸನ್ಮಂಗಳಗಳನ್ನೂ ದಯಪಾಲಿಸಿ, ಸರ್ವದಾ ಸಲಹುತ್ತಿರಲಿ ಎಂದು ಭಕ್ತಿಪೂರ್ವಕವಾಗಿ ಸರ್ವೇಶ್ವರನನ್ನು ಪ್ರಾರ್ಥಿಸುತ್ತೇನೆ.

ಇತಿ ಸಜ್ಜನವಿಧೇಯ,

ಶ್ರೀ ವ್ಯಯಸಂವತ್ಸರದ
ಅಧಿಕ ಶ್ರಾವಣ ಕೃಷ್ಣ ಪಂಚಮಿ,
ತಾ|| 7—8—1947.

**ಎಚ್. ಗಂಗಾಧರಶಾಸ್ತ್ರೀ,**

ಆಸ್ಥಾನ ವಿದ್ವಾನ್. ಮೈಸೂರು.

# ವಿ ಷ ಯಾ ನು ಕ್ರ ಮ ಣಿ ಕೆ .



ಅಧ್ಯಾಯ | ಪುಟಗಳು

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ

# ಏಕೋನಚತ್ವಾರಿಂಶೋಽಧ್ಯಾಯಃ



॥ ಬೃಹದ್ಬಲ ಉವಾಚ ॥

**ಸಮಾಸವ್ಯಾಸಯೋಗೇನ ಪುರಾಣಮಿದಮುವ್ಯಯಂ ।**
**ಶ್ರಾವಿತೋಽಹಂ ತ್ವಯಾ ಬ್ರಹ್ಮನ್ಗುರೋ ನಿಶ್ರೇಯಸಂ ಪರಂ ॥ ೧ ॥**

**ತಥಾಪಿ ಸಂಶಯೋಽಸ್ಮಾಕಂ ನಾದ್ಯಾಪಿ ವಿಗತಃ ಪ್ರಭೋ ।**
**ಸಾಂಬಂ ಪ್ರತಿ ಮಹಾಭಾಗ ತನ್ಮೇ ಬ್ರೂಹಿ ಮಹಾಮುನೇ ॥ ೨ ॥**

---

## ಮೂವತ್ತೊಂಬತ್ತನೆಯ ಅಧ್ಯಾಯ.

೧. "ಎಲೈ ಬ್ರಹ್ಮಜ್ಞಾನಿಯಾದ ಗುರುವೇ; ಪರಮ ಶ್ರೇಷ್ಠವೂ, ಮೋಕ್ಷಪ್ರದವೂ, ನಾಶರಹಿತವೂ ಆಗಿರುವ ಈ ಸೂರ್ಯಪುರಾಣವನ್ನು (ಸೂರ್ಯಸಂಬಂಧವಾದ ಕಥೆಯನ್ನು) ಸಂಕ್ಷೇಪವಾಗಿಯೂ ಮತ್ತು ಕೆಲವು ವಿಷಯಗಳನ್ನು ವಿಸ್ತಾರವಾಗಿಯೂ ನೀನು ನನಗೆ ಹೇಳಿರುವೆ.

೨-೩. ಆದರೂ ನನಗೆ ಸಾಂಬನ ವಿಷಯದಲ್ಲಿ ಕೇಳಬೇಕಾದ ಅನೇಕ ವಿಷಯಗಳು ಇನ್ನೂ ಸಂದೇಹವಾಗಿಯೇ ಇರುವುವು. ಎಲೈ ಮಹಾಮುನಿಯೆ, ಮಹಾತ್ಮನಾದ ಸೂರ್ಯದೇವನಿಂದ ಆ ಜಾಂಬವತೀ ಕುಮಾರನಾದ ಸಾಂಬನು ದೀಕ್ಷಿತನಾದ ಬಗೆಹೇಗೆ? ಪರಮಧರ್ಮಸ್ವರೂಪನಾದ ಆ ಸಾಂಬನು ಸೂರ್ಯದೇವ

ಕಥಂ ಸ ದೀಕ್ಷಿತಸ್ತೇನ ಭಾಸ್ಕರೇಣ ಮಹಾತ್ಮನಾ ।
ಸಾಂಬಃ ಪರಮಧರ್ಮಾತ್ಮಾ ತನ್ಮಮಾಖ್ಯಾತುಮರ್ಹಸಿ ॥ ೩ ॥

॥ ವಸಿಷ್ಠ ಉವಾಚ ॥

ಏಕಾಗ್ರಂ ಮಾನಸಂ ಕೃತ್ವಾ ವೃತ್ತಿಂ ಸಮ್ಯಗ್ವ್ಯವಸ್ಥಿತಾಂ ।
ಶ್ರದ್ಧಯಾ ಪರಯಾ ಯುಕ್ತಃ ಶೃಣು ಯತ್ತತ್ಸಮೀಹಿತಂ ॥ ೪ ॥

ಪುರಾಣಸ್ಯೋತ್ತರಂ ರಾಜನ್ಯದುಕ್ತಂ ಭಾಸ್ಕರೇಣ ತು ।
ತತ್ತೇಽಹಂ ಸಂಪ್ರವಕ್ಷ್ಯಾಮಿ ದೀಕ್ಷಾಮಂಡಲಮುತ್ತಮಮ್ ॥ ೫ ॥

ಸಾಂಬಂ ಪ್ರತಿ ಮಹಾಬಾಹೋ ಯದುಕ್ತಂ ಭಾಸ್ಕರೇಣ ತು ।
ತನ್ಮಹಾಮಂಡಲಂ ನಾಮ ತತ್ತ್ವಂ ಮಂತ್ರವಿಭೂಷಿತಂ ॥ ೬ ॥

---

ನಿಂದ ಪಡೆದ ಆ ದೀಕ್ಷಾವಿಧಾನವನ್ನು ನನಗೆ ದಯೆಯಿಟ್ಟು ತಿಳಿಸಬೇಕು, ಈ ವಿಷಯದಲ್ಲಿ ನೀನೇ ಸಮರ್ಥನು," ಎಂದು ಬೃಹದ್ಬಲರಾಜನು ವಸಿಷ್ಠಮಹರ್ಷಿಗಳನ್ನು ಕುರಿತು ಮತ್ತೆ ಪ್ರಾರ್ಥಿಸಿದನು.

೪-೫. ಆಗ ವಸಿಷ್ಠಮುನಿಯು "ಅಯ್ಯಾ, ರಾಜನೆ; ಏಕಾಗ್ರಚಿತ್ತವುಳ್ಳವನಾಗಿ ಮನೋವೃತ್ತಿಯನ್ನು ಸ್ಥಿರವಾಗಿ ನಿಲ್ಲಿಸಿಕೊಂಡು ಅತ್ಯಂತ ಶ್ರದ್ಧೆಯಿಂದ ಕೇಳುವವನಾಗು. ಸೂರ್ಯನ ಪುರಾಣಶ್ರವಣವಾದ ನಂತರ ತೃಪ್ತನಾದ ಸೂರ್ಯದೇವನೇ ಸಾಂಬನಿಗೆ ವಿಸ್ತರಿಸಿದ ಶ್ರೇಷ್ಠವಾದ ದೀಕ್ಷಾವಿಧಿಯನ್ನು ನಿನಗೆ ಈಗ ತಿಳಿಸುತ್ತೇನೆ," ಎಂದು ಇಂತೆಂದನು.

೬. ಮಹಾ ಬಲಿಷ್ಠನಾದ ಬೃಹದ್ಬಲನೆ; ಸೂರ್ಯದೇವನು ಸಾಂಬನನ್ನು ಕುರಿತು ಉಪದೇಶಮಾಡಿದ ದೀಕ್ಷಾವಿಧಿಗೆ ಮಹಾಮಂಡಲವೆಂದು ಹೆಸರು. ಇದು ಅನೇಕ ಮಂತ್ರಗಳಿಂದ ಅಲಂಕರಿಸಲ್ಪಟ್ಟಿದೆ. ಸೂರ್ಯಾರಾಧನೆ ಮಾಡಲು ರಚಿತವಾದ ಮಂಡಲ ಕ್ರಮವನ್ನು ವಿವರಿಸುವುದೇ ಈ ಮಹಾ ಮಂಡಲದ ತತ್ತ್ವ.

ಯಥಾ ವ್ಯವಸ್ಥಿತಾತ್ಸ್ಥಾನಾದ್ಭೂಮಿಂ ನಿಷ್ಕ್ರಮ್ಯ ಶೋಧಯೇತ್ ।
ಯಾಮ್ಯಮಾಹೇಂದ್ರವಾರುಣ್ಯಕೌಬೇರಂ ಚ ಯಥಾಕ್ರಮಂ ॥ ೭ ॥

ಮಾಹೇಂದ್ರೇ ವಿಜಯೋ ನಿತ್ಯಮರ್ಥಪ್ರಾಪ್ತಿಶ್ಚ ನಿಶ್ಚಲಾ ।
ಶತ್ರೂಣಾಂ ನಿಧನಂ ಚೈವ ಮಿತ್ರಲಾಭಶ್ಚ ದಕ್ಷಿಣೇ ॥ ೮ ॥

ಪ್ರತಿಪಕ್ಷೋನ್ನತಿರ್ವ್ಯಾಧಿರ್ನಿಯಮೋನ ಜಲಾಧಿಪೇ ।
ಸೌಮ್ಯೇ ಶಾಂತಿಃ ಸುತಾವಾಪ್ತಿಃ ಪ್ರಜಾ ಮೋದತಿ ವಿಜ್ವರಾಃ ॥ ೯ ॥

ಆಗ್ನೇಯಃ ಶೋಷಕಃ ಪ್ರೋಕ್ತೋ ನೈರ್ಋತ್ಯಃ ಪಾಪಸಂಕರಃ ।
ಮಾರುತಶ್ಚಾವ್ಯವಸ್ಥಾನನ್ಮೈಶಾನ್ಯಂ ಜ್ಞಾನಲಂಭಕಂ ॥ ೧೦ ॥

---

೭. ಮಂಡಲವನ್ನು ರಚಿಸಲು ನಿಶ್ಚಿತವಾಗಿರುವ ಭೂಮಿಯ ದಕ್ಷಿಣ, ಪೂರ್ವ, ಪಶ್ಚಿಮ, ಮತ್ತು ಉತ್ತರ, ಈ ನಾಲ್ಕು ದಿಕ್ಕುಗಳಲ್ಲಿಯೂ ಕ್ರಮವಾಗಿ ಚೆನ್ನಾಗಿ ಭೂಶೋಧನೆ ಮಾಡಬೇಕು.

೮-೯. ಪೂರ್ವದಿಕ್ಕಿನಲ್ಲಿ (ಇಂದ್ರದಿಕ್ಕಿನಲ್ಲಿ) ಮಂಡಲವನ್ನು ರಚಿಸಿದರೆ ವಿಜಯವೂ ಶಾಶ್ವತವಾದ ದ್ರವ್ಯಪ್ರಾಪ್ತಿಯೂ ಉಂಟಾಗುವುದು. ದಕ್ಷಿಣದಿಕ್ಕಿನಲ್ಲಿ ನಿರ್ಮಿಸಿದರೆ ಶತ್ರುನಾಶವೂ ಮಿತ್ರಪ್ರಾಪ್ತಿಯೂ ದೊರಕುವುದು. ವರುಣ ದಿಕ್ಕಿನಲ್ಲಿ ಅಂದರೆ ಪಶ್ಚಿಮದಲ್ಲಿ ಮಂಡಲ ನಿರ್ಮಾಣದಿಂದ, ಶತ್ರುಪಕ್ಷದ ಅಭಿವೃದ್ಧಿಯು ಯಜಮಾನನಿಗೆ ರೋಗಾದಿಗಳೂ ಉಂಟಾಗುವುವು. ಉತ್ತರದಿಕ್ಕಿನ ಮಂಡಲದಿಂದ ಪುತ್ರ ಪ್ರಾಪ್ತಿಯುಂಟಾಗುವುದು. ಮತ್ತು ಪ್ರಜೆಗಳೆಲ್ಲರೂ ರೋಗಭೀತಿಯಿಲ್ಲದೆ ಸುಖವಾಗಿರುವರು.

೧೦. ಹೀಗೆ, ಇಂದ್ರ, ಯಮ, ವರುಣ ಮತ್ತು ಕುಬೇರ ಈ ನಾಲ್ಕು ದಿಕ್ಕುಗಳಲ್ಲಿ ಮಂಡಲ ರಚನೆಯ ಶುಭಾಶುಭಫಲಗಳನ್ನು ಹೇಳಿ, ಈಗ ಉಳಿದ ನಾಲ್ಕು ವಿದಿಕ್ಕುಗಳಲ್ಲಿ ಫಲವನ್ನು ಹೇಳುವೆನು ಕೇಳು.

ಆಗ್ನೇಯದಿಕ್ಕಿನಲ್ಲಿ ಮಂಡಲವನ್ನು ರಚಿಸಿದರೆ ಕಾರ್ಯನಾಶವಾಗುವುದು. ನೈಋತ್ಯದಲ್ಲಿ ಪಾಪ ಸಾಂಕರ್ಯವುಂಟಾಗುವುದು. ವಾಯುವ್ಯದಿಕ್ಕಿನಲ್ಲಿ ಕಾರ್ಯವು ಸರಿಯಾಗಿ ನಡೆಯದೆ ಅವ್ಯವಸ್ಥೆಗೊಳಗಾಗುವುದು. ಈಶಾನ್ಯದಿಕ್ಕಿನಲ್ಲಿ ಮಂಡಲವನ್ನು ನಿರ್ಮಿಸುವುದರಿಂದ ಜ್ಞಾನಲಾಭವುಂಟಾಗುವುದು.

**ತೇಷಾಂ ನಿರೂಪಿತಂ ಸ್ಥಾನಂ ಯಥಾ ಕಾಮಂ ಸಮಾಹಿತಾಃ ।**
**ದೃಷ್ಟದೋಷಪರಿಕ್ರಾಂತಾಂ ಭೂಮಿಂ ಕುರ್ವಂತಿ ಸಾಧಕಾಃ ॥ ೧೧ ॥**

**ರತ್ನಿಮಾತ್ರಮಧಃ ಖಾತಾಂ ಸಮಂತಾತ್ಸಂಚವಿಂಶಕಂ ।**
**ಕೃತ್ವಾ ತು ಸುಸಮಂ ದೇಶಂ ಪ್ರಾಗುದಕ್ಪ್ಲವನಂ ಶುಭಂ ॥ ೨೨ ॥**

**ಪ್ರಾಗ್ವಂಶಂ ತತ್ರ ಕುರ್ವೀತ ಬ್ರಹ್ಮವೃಕ್ಷಮಯಂ ಶುಭಂ ।**
**ಪರಿತಃ ಕಾರಯೇದ್ಭೂಮಿಂ ಸುಸಮಾಂ ಶೋಭನಾಂಸ್ತಥಾ ॥ ೧೩ ॥**

**ಉದುಂಬರಮಯಂ ಕೃತ್ವಾ ಲಾಂಗಲಂ ಸುಸಮಾಹಿತಃ ।**
**ಸೌವರ್ಣಮುಖಸಂಯುಕ್ತಂ ತೇನ ಭೂಮಿಂ ತು ವಾದಯೇತ್ ॥ ೧೪ ॥**

**ತತಃ ಸಮತಲಂ ಕೃತ್ವಾ ಸುಧಾಲೇಪೇನ ಲೇಪಯೇತ್ ।**
**ಸೇಚಯೇತ್ಪಂಚಗವ್ಯೇನ ರಕ್ತಚಂದನವಾರಿಣಾ ॥ ೧೫ ॥**

---

೧೧. ಈ ರೀತಿ ಭೂಮಿಯ ಲಕ್ಷಣವನ್ನು ಆಯಾ ದಿಕ್ಕಿನಲ್ಲಿ ಕ್ರಮವಾಗಿ ಹೇಳಿಯಾಯಿತು. ಸಾಧಕರು ಹಿಂದೆ ಹೇಳಿದ ದೋಷಗಳಾವುವೂ ಇಲ್ಲದೇ ಇರುವ ಭೂಮಿಯನ್ನು ಅರಿಸಿ ಅಲ್ಲಿ ಕೆಲವು ನಿಯಮದಿಂದ ಕಾರ್ಯಸಾಧನೆ ಮಾಡುವರು.

೧೨-೧೩. ಮಂಡಲ ರಚನೆಮಾಡುವ ಭೂಮಿಯನ್ನು ಈ ರೀತಿ ಉತ್ತು ಸಮೀಕರಣ ಮಾಡಬೇಕು. ನೇಗಿಲಿನ ಗುಳವು ಮುಷ್ಟಿಬದ್ಧವಾದ ಮೊಳದಷ್ಟು (ರತ್ನಿ) ನೆಲದೊಳಕ್ಕೆ ಹೋಗುವಂತಿರಬೇಕು. ಇಪ್ಪತ್ತೈದುಮೊಳ ಉದ್ದ ಮತ್ತು ಅಗಲದ ಭೂಮಿಯನ್ನು ಪೂರ್ವ ಅಥವಾ ಉತ್ತರದಿಗಭಿಮುಖವಾಗಿ ಉಳಬೇಕು. ಆ ನೇಗಿಲಿನ ಮರವು ಬ್ರಹ್ಮವೃಕ್ಷಗಳಲ್ಲಿ ಒಂದಾಗಿ ಪೂರ್ವದೈರ್ಘ್ಯವನ್ನು ಹೊಂದಿರಬೇಕು. ಇಂತಹ ಸಾಧನೆಯಿಂದ ಭೂಮಿಯನ್ನು ಸಮೀಕರಣ ಮಾಡಬೇಕು.

೧೪. ಅಥವಾ ಅತ್ತೀಮರದಿಂದ ನೇಗಿಲನ್ನುಮಾಡಿಸಿ, ಅದಕ್ಕೆ ಸುವರ್ಣದ ಗುಳವನ್ನು ಹಾಕಿ ಅದರಿಂದ ಭೂಮಿಯನ್ನು ಉಳಬಹುದು.

೧೫. ಆಮೇಲೆ ಈ ರೀತಿ ಉತ್ತಿರುವ ಭೂಮಿಯನ್ನು ಮಟ್ಟ ಮಾಡಿ ಅದಕ್ಕೆ ಸುಣ್ಣ ಗಾರೆ ಹಾಕಿಸಬೇಕು. ಅನಂತರ ಪಂಚಗವ್ಯದಿಂದಲೂ ಕೆಂಪುಚಂದನದ ನೀರಿನಿಂದಲೂ ಸಹ ಆ ಸ್ಥಳವು ನೆನೆಯುವಂತೆ ಚುಮುಕಿಸಬೇಕು.

**ಚಂದನೇನ ಪುನರ್ಲೇಪೋ ರಕ್ತೇನ ತು ವಿಧೀಯತೇ ।**
**ಯಥಾ ನ ಸ್ಫುಟತೇ ಭೂಮಿಸ್ತಥಾ ಕುರ್ಯಾತ್ಪ್ರಯತ್ನತಃ** ॥ ೧೬ ॥

**ಸ್ಫುಟಿತಾ ದೂಷಿತಾ ಭೂಮಿಃ ಕ್ವಚಿನ್ನಿಮ್ನಾ ದರಿದ್ರತಾ ।**
**ಉಚ್ಛ್ರಿತಾ ಛಿದ್ರಿತಾ ಚೈವ ಸರ್ವಾಪದಭಿಶಂಸಿನೀ** ॥ ೧೭ ॥

**ಏವಂ ಸಮಾಹಿತಾಂ ಕೃತ್ವಾ ಮನೋಹ್ಲಾದಕರೀಂ ಶುಭಾಂ ।**
**ಆಪ್ತೈಃಶುದ್ಧೈಶ್ಚ ಶುಚಿಭೀರಕ್ಷಾಂ ಕುರ್ವೀತ ಯತ್ನತಃ** ॥ ೧೮ ॥

**ತಸ್ಯಾಶ್ಚೋತ್ತರಪಾರ್ಶ್ವೇಣ ಕುರ್ಯಾದ್ಗುರುಗೃಹಂ ಮಹತ್ ।**
**ಸಂಭಾರಸಂಭೃತಃ ಶಿಷ್ಯೋ ಗುರೋರಾತ್ಮಾನಮರ್ಪಯೇತ್** ॥ ೧೯ ॥

---

೧೬. ಪುನಃ ರಕ್ತಚಂದನವನ್ನು ಲೇಪನ ಮಾಡಿ ಭೂಮಿಯು ಬಿರಿಯದಂತೆ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

೧೭. ಭೂಮಿಯು ಬಿರಿದರೆ ಅದು ದುಷ್ಟವೆನಿಸುವುದು. ಭೂಮಿಯು ಒಂದೇ ಸಮನಾಗಿರದೆ ಒಂದು ಕಡೆ ಹಳ್ಳ ಮತ್ತೊಂದುಕಡೆ ಎತ್ತರವಾಗಿದ್ದರೆ ದಾರಿದ್ರ್ಯ ವುಂಟಾಗುವುದು. ಭೂಮಿಯು ಮೊದಲಿನ ಮಟ್ಟಕ್ಕಿಂತ ಎತ್ತರವಾಗಿ ಬಿರಿದು ಚೂರುಚೂರಾಗಿದ್ದರೆ ಸಕಲ ವಿಪತ್ತುಗಳನ್ನೂ ಉಂಟುಮಾಡುವುದು.

೧೮. ಈ ರೀತಿ ಭೂಮಿಯನ್ನು ಎಚ್ಚರಿಕೆಯಿಂದ ಮನಸ್ಸಿಗೆ ಸಂತೋಷ ವುಂಟಾಗುವಂತೆ ಪರಿಶೋಧಿಸಿ, ಆಪ್ತರೂ ಪರಿಶುದ್ಧರೂ ಆದ ಜನಗಳಿಂದ ಅದನ್ನು ಪ್ರಯತ್ನಪೂರ್ವಕವಾಗಿ ರಕ್ಷಿಸುವಂತೆ ಏರ್ಪಡಿಸಬೇಕು.

೧೯. ಹೀಗೆ ಪರಿಶೋಧಿಸಿದ ಭೂಮಿಯ ಉತ್ತರಭಾಗದಲ್ಲಿ ಗುರುವಿಗೋಸ್ಕರ ಒಂದು ಮನೆಯನ್ನು ನಿರ್ಮಿಸಬೇಕು. ಶಿಷ್ಯನಾದವನು ಸಕಲ ಸಲಕರಣೆಗಳಿಂದಲೂ ಯುಕ್ತನಾಗಿ ತನ್ನ ಗುರುವಿಗೆ ತನ್ನನ್ನೇ ಸಮರ್ಪಿಸಬೇಕು. ಅಂದರೆ ಗುರುವಿಗೆ ವಿನೀತನಾಗಿ ನಡೆಯಬೇಕು.

ವಿಶುದ್ಧಕುಲಸಂಭೂತಂ ವೇದವೇದಾಂಗಪಾರಗಂ ।
ಆತ್ಮವಿದ್ಯಾರತಂ ದಾಂತಂ ದೇವದ್ವಿಜಪರಾಯಣಂ ॥ ೨೦ ॥

ಅಪ್ರವ್ರಜಿತಧರ್ಮಾಣಂ ತ್ರಯೀಮಾರ್ಗವ್ಯವಸ್ಥಿತಂ ।
ಮಾನವಂ ಧರ್ಮವೇತ್ತಾರಮುಗ್ರಜನ್ಮತ್ರಿಕಾಲಿಕಂ ।
ಗುರುಮೇವಂ ವಿಧಂ ವಿದ್ಯಾಚ್ಛಿಷ್ಯಂ ವಕ್ಷ್ಯಾಮ್ಯತಃ ಪರಂ ॥ ೨೧ ॥

ಗುರೋರ್ಗುಣಸಮಃ ಶಿಷ್ಯಸ್ತಸ್ಯ ಕಾರ್ಯೇ ವ್ಯವಸ್ಥಿತಃ ।
ಚೋದಿತೋ ಭಕ್ತಿತತ್ತ್ವೇನ ಧರ್ಮಪ್ರಾಪ್ತಿಫಲಂ ಪ್ರತಿ ॥ ೨೨ ॥

ವರ್ಜಯೇದ್ಧೀನಜಾತೀಂಶ್ಚ ನಾಸ್ತಿಕಾನಶುಚೀನ್ನರಾನ್ ।
ದೇವಂ ದ್ವಿಜಂ ಗುರುಂ ವಾಪಿ ಯೇ ಚ ನಿಂದಂತಿ ಸರ್ವದಾ ॥ ೨೩ ॥

ಸಗುಣಾ ನಿರ್ಗುಣಾ ವಾಪಿ ಯಸ್ಯ ಭಕ್ತಿಃ ಪ್ರತಿಷ್ಠಿತಾ ।
ಅನುಗ್ರಾಹ್ಯಃ ಸಗುರುಣಾ ನಿತ್ಯಭೂತಾರ್ಥಕಾರಿಣಾ ॥ ೨೪ ॥

---

೨೦-೨೧. ಆ ಗುರುವಾದರೋ ಸತ್ಕುಲೀನನಾಗಿರಬೇಕು. ವೇದ ವೇದಾಂಗಗಳನ್ನು ತಿಳಿದವನಾಗಿರಬೇಕು. ಬ್ರಹ್ಮವಿದ್ಯೆಯಲ್ಲಿ ನುರಿತವನಾಗಿ, ದೇವದ್ವಿಜರಲ್ಲಿ ಭಕ್ತಿಯುಳ್ಳವನಾಗಿ, ಉದಾರನೂ, ಧರ್ಮಜ್ಞನೂ, ಬ್ರಹ್ಮಾನುಷ್ಠಾನಪರನೂ ಆಗಿರಬೇಕು. ಇಂತಹವನನ್ನು ಗುರುವನ್ನಾಗಿ ಭಾವಿಸಬೇಕು.

೨೨-೨೩. ಶಿಷ್ಯನಾಗುವವನು ಗುರುವಿನ ಗುಣವನ್ನು ಅನುಸರಿಸಿ ನಡೆಯಬೇಕು. ಗುರುವು ಅಪ್ಪಣೆಮಾಡಿದ ಕಾರ್ಯದಲ್ಲಿ ಭಕ್ತಿಯಿಂದ ಮುಂದುವರಿಯಬೇಕು. ಧರ್ಮಪ್ರಾಪ್ತಿಕರವಾದ ಕಾರ್ಯದಲ್ಲಿ ಆಸಕ್ತನಾಗಿರಬೇಕು. ಹೀನಜಾತಿಯಲ್ಲಿ ಹುಟ್ಟಿದವನೂ, ನಾಸ್ತಿಕನೂ, ಅಶುಚಿಯಿಂದಿರುವವನೂ, ದೇವದ್ವಿಜರುಗಳನ್ನು ಸರ್ವದಾ ನಿಂದಿಸುವವನೂ ಶಿಷ್ಯನಾಗಲು ಅನರ್ಹನು.

೨೪. ಆದರೆ ಯಾವ ಶಿಷ್ಯನು ಗುರುವಿನಲ್ಲಿ ಅತ್ಯಂತ ಭಕ್ತಿಯುಳ್ಳವನೋ ಆತನು ಗುಣಿಯಾಗಲಿ, ಗುಣರಹಿತನಾಗಲಿ. ಅವನನ್ನು ಶಿಷ್ಯನಂತೆ ಪರಿಗ್ರಹಿಸಿ ಸದ್ಗುರುವು ಅವನಿಗೆ ದಿವ್ಯಮಂತ್ರರಹಸ್ಯವನ್ನು ಉಪದೇಶಮಾಡಬಹುದು.

ಮಹಾಮಂಡಲವೇತ್ತಾ ತು ಹ್ಯಾಚಾರ್ಯೋ ಯತ್ರ ತಿಷ್ಠತಿ ।
ತತ್ರ ತಿಷ್ಠತೇ ದೇವೋಽಸೌ ಲೋಕನಾಥೋ ಜಗತ್ಪತಿಃ ॥ ೨೫ ॥

ತತ್ರ ಪುಣ್ಯಾ ಜನಪದಾಃ ಪ್ರಜಾಶ್ಚ ನಿರುಪದ್ರವಾಃ ।
ನರಾಣಾಮಧಿಪಸ್ತತ್ರ ಕೃತಕೃತ್ಯೋ ಮಹೀಯತೇ ॥ ೨೬ ॥

ಜ್ಞಾತ್ವಾ ತು ಪರಮಂ ಜ್ಞಾನಂ ಸರ್ವದೀಕ್ಷಾಸಮನ್ವಿತಃ ।
ಸರ್ವವೇದಪವಿತ್ರಶ್ಚ ಗೃಹ್ಯಶಾಸ್ತ್ರಾತ್ಮಕಸ್ಸದಾ ॥ ೨೭ ॥

ಅವಿಕಲ್ಪಂ ವಿಕಲ್ಪಂ ಚ ಯೋಗಂ ಸರ್ವಾರ್ಥಸಾಧಕಂ ।
ಕನ್ಯಾಕರ್ತಿತಸೂತ್ರೇಣ ಅರ್ಕತೂಲಮಯೇನ ವಾ ॥ ೨೮ ॥

ವರ್ತಯೇತ್ತ್ರಿವೃತಂ ಸೂತ್ರಂ ಗ್ರಂಥಿಕೇಶವಿವರ್ಜಿತಂ ।
ದೇವಸ್ಯತ್ವೇತಿ ಮಂತ್ರೇಣ ತ್ರಿರಾದಿತ್ಯೇನ ವಾ ಪುನಃ ॥ ೨೯ ॥

---

೨೫-೨೬. ಈ ದೀಕ್ಷಾವಿಧಿಯನ್ನು ನಡೆಸುವ ಆಚಾರ್ಯನು ಮೊದಲು ಈ ಮಹಾ ಮಂಡಲವಿಧಿಯನ್ನು ತಿಳಿದವನಾಗಿರಬೇಕು. ಮಹಾ ಮಂಡಲವನ್ನರಿತ ಮಹಾತ್ಮನು ಇರುವ ಸ್ಥಳದಲ್ಲಿಯೇ ಲೋಕನಾಥನಾದ ಸೂರ್ಯದೇವನು ವಾಸಿಸುವನು. ಅಲ್ಲದೆ ಆ ದೇಶದಲ್ಲಿಯೇ ಜನರೂ, ರಾಜರೂ, ಉಪದ್ರವಾದಿಗಳಿಂದ ರಹಿತರಾಗಿ ಕೃತಕೃತ್ಯರೆನಿಸುವರು.

೨೭-೨೮. ಈ ಮಂಡಲವಿಧಿಯ ದೀಕ್ಷೆಯನ್ನು ತೆಗೆದುಕೊಳ್ಳುವವನು ಜ್ಞಾನಿಯಾಗಿರಬೇಕು. ಸಕಲ ವೇದಾರ್ಥಗಳನ್ನೂ, ಗೃಹ್ಯ ಸೂತ್ರಾದಿಗಳನ್ನೂ, ತಿಳಿದು ಪವಿತ್ರನೆನಿಸಿರಬೇಕು. ವಿಕಲ್ಪಾವಿಕಲ್ಪವಾಗಿ ತಿಳಿಸುವ ಯೋಗಶಾಸ್ತ್ರಾಭ್ಯಾಸಾದಿಗಳಿಂದ ಸಿದ್ಧನೆನಿಸಬೇಕು. ಇಂತಹವನು ಮೊದಲು ಮಂಗಳಸೂತ್ರದಿಂದಾಗಲೀ ಎಕ್ಕದ ಗಿಡದ ಹತ್ತಿಯಿಂದಾಗಲೀ ನಿರ್ಮಿತವಾದ ಸೂತ್ರವನ್ನು ಸಂಪಾದಿಸಬೇಕು.

೨೯-೩೦. ಆ ಸೂತ್ರವನ್ನು ಮೂರು ಎಳೆಯನ್ನಾಗಿ ಮಾಡಿ ಸೇರಿಸಿ ಹೊಸಿಯಬೇಕು ಮಧ್ಯೆ ಗ್ರಂಥಿಯಾಗಲೀ, ಕೇಶವಾಗಲೀ ಸೇರಕೂಡದು. ದೇವಸ್ಯತ್ವಾ

ಪ್ರೋಕ್ಷಯೇತ್ರಿವೃತಂ ಸೂತ್ರಂ ತತಃ ಕರ್ಮ ಸಮಾಚರೇತ್ ।
ಹೇಮಪಾತ್ರಂ ಪ್ರಗೃಹ್ಯಾದೌ ರೌಪ್ಯಮೌದುಂಬರಂ ಕ್ರಮಾತ್ ।
ಅರ್ಘ್ಯಂ ದತ್ವಾ ದಿಗೀಶೇಭ್ಯೋ ಯಥಾಪೂರ್ವಂ ಕ್ರಮೇಣ ತು ॥ ೩೦ ॥

ಮಧ್ಯೇ ನಾರಾಯಣಾಖ್ಯಾಯ ಸೂರ್ಯಾಯ ಪರಮಾತ್ಮನೇ ।
ತೇಜೋ ಬುದ್ಬುದರೂಪಾಯ ಅರ್ಘ್ಯಪಾತ್ರಂ ನಿವೇದಯೇತ್ ॥ ೩೧

ಧೂಪಮೇವಂ ಕ್ರಮೇಣೈವ ಬಲಿಂ ಚಾಪಿ ಸುಸಂಸ್ಕೃತಂ ।
ತಿಲಾಂಸ್ತ್ರಿಮಧುರೋಪೇತಾಂ ಜುಹುಯಾತ್ಕರ್ಮಸಿದ್ಧಯೇ ॥ ೩೨ ॥

ಓಂ ಇಂದ್ರಾಯ ಪರಮಾತ್ಮನೇ ಸ್ವಾಹಾ
ಓಂ ಅಗ್ನಯೇ ಶುಚಿಷ್ಮತೇ ಸ್ವಾಹಾ
ಓಂ ಯಮಾಯ ಧರ್ಮಾತ್ಮನೇ ಸ್ವಾಹಾ

---

ಪ್ರಸವೇ, ಎಂಬ ಮಂತ್ರದಿಂದಾಗಲಿ, ತ್ರಿರಾದಿತ್ಯ ದೇವತಾಕವಾದ ಮಂತ್ರದಿಂದಾಗಲಿ, ಆ ಸೂತ್ರಕ್ಕೆ ಜಲವನ್ನು ಪ್ರೋಕ್ಷಿಸಿ, ಶುದ್ಧಿಗೊಳಿಸಿ, ಅದನ್ನು ಧರಿಸಿ ಕರ್ಮಾರಂಭ ಮಾಡಬೇಕು. ಅನಂತರ ಚಿನ್ನದ ಅಥವಾ ಬೆಳ್ಳಿಯ ಅಥವಾ ಉದುಂಬುರ ವೃಕ್ಷದ (ಅತ್ತಿಯಮರದ) ವಿಕಾರವಾದ ಪಾತ್ರೆಯಲ್ಲಿ ವಿಧಿವತ್ತಾಗಿ ದಿಕ್ಪಾಲಕರ ಪೂಜೆಯನ್ನು ನೆರವೇರಿಸಬೇಕು.

೩೧-೩೨. ಮಧ್ಯಭಾಗದಲ್ಲಿ ಪರಮಾತ್ಮನಾದ ಸೂರ್ಯನಾರಾಯಣನಿಗೆ ಅರ್ಘ್ಯ ಪಾತ್ರೆಯನ್ನು ಅರ್ಪಿಸಬೇಕು. ಭಗವಂತನಾದ ಸೂರ್ಯದೇವನು ಕೇವಲ ತೇಜೋ ರಾಶಿಯೆಂದೇ ಭಾವಿಸಬೇಕು. ಅನಂತರ ಧೂಪದಿಂದ ನೈವೇದ್ಯಾದಿಗಳಿಂದ ದಿಕ್ಪಾಲಾದಿಯಾಗಿ ಸೂರ್ಯನಾರಾಯಣದೇವನನ್ನು ಪೂಜಿಸಿ, ಕಲ್ಪೋಕ್ತವಾಗಿ ಪಾಯಸ ಸಹಿತವಾದ ಎಳ್ಳಿನಿಂದ ಹೋಮ ಮಾಡಬೇಕು. ಇದರಿಂದ ಕರ್ಮವು ಫಲಪ್ರದವಾಗುವುದು.

ಹೋಮಕಾಲದಲ್ಲಿ ಪರಮಾತ್ಮರೂಪಿಯಾದ ಇಂದ್ರನಿಗೂ ಶುಚಿಷ್ಮಂತನಾದ ಅಗ್ನಿಗೂ, ಧರ್ಮಾತ್ಮಕನಾದ ಯಮನಿಗೂ, ಕಾಲಾತ್ಮಕನಾದ ನಿಋೃತಿಗೂ, ಸಲಿಲ

ಓಂ ನೈಋತಯೇ ಕಾಲಾತ್ಮನೇ ಸ್ವಾಹಾ
ಓಂ ವರುಣಾಯ ಸಲಿಲಾತ್ಮನೇ ಸ್ವಾಹಾ
ಓಂ ವಾಯವೇ ಸ್ಪರ್ಶಾತ್ಮನೇ ಸ್ವಾಹಾ
ಓಂ ಸೋಮಾಯಾಮೃತಾತ್ಮನೇ ಸ್ವಾಹಾ
ಓಂ ಈಶಾನಾಯ ಜ್ಞಾನಾತ್ಮನೇ ಸ್ವಾಹಾ

ಓಂ ಪರಾಯ ವಿದ್ಮಹೇ ತೇಜೋರೂಪಾಯ ಧೀಮಹಿ ।
ತನ್ನಸ್ತೇಜಃ ಪ್ರಚೋದಯಾತ್ ॥

ಮಹಾಮಂತ್ರಮಿಮಂ ಪುಣ್ಯಂ ಮಹಾಮಂಡಲಸಂಭವಂ ।
ಸ್ಮರಂತಿ ಯೇ ಸದಾ ರಾಜನ್ ತೇ ಭವಂತಿ ಹಿತದ್ವಿಜಾಃ ॥ ೩೪ ॥

ಶರೀರಮಂಡಲಸ್ಯೇದಂ ಮಹಾಮಂತ್ರಂ ಪ್ರಕೀರ್ತಿತಂ ।
ತಸ್ಮಾನ್ಮಹತ್ತ್ವಮೇವೋಕ್ತಂ ಮಂಡಲಸ್ಯ ಪುರಾತನೈಃ ॥ ೩೫ ॥
ಕರ್ಣಿಕಾಷ್ಟಾಂಗುಲಾ ಪ್ರೋಕ್ತಾ ಕೇಸರಂ ತತ್ಸಮಂ ಸ್ಮೃತಂ ।
ಕರ್ಣಿಕಾಕೇಸರೈಸ್ತುಲ್ಯಾ ಪದ್ಮಸ್ಯ ಪರಿಕೀರ್ತಿತಾ ॥ ೩೬ ॥

---

ತ್ಮಕನಾದ ವರುಣನಿಗೂ, ಸ್ಪರ್ಶಾತ್ಮಕನಾದ ವಾಯುವಿಗೂ, ಅಮೃತಾತ್ಮಕನಾದ ಸೋಮನಿಗೂ, ಜ್ಞಾನಾತ್ಮಕನಾದ ಈಶಾನನಿಗೂ, ಸ್ವಾಹಾಕಾರದಿಂದ ಹೋಮ ಮಾಡಬೇಕು.

೩೪-೩೫. ಮೇಲೆ ಹೇಳಿದ ಮಂತ್ರವೇ ಮಹಾ ಮಂಡಲಕ್ಕೆ ಸಂಬಂಧಿಸಿದ ಮೂಲಮಂತ್ರ. ಇದನ್ನು ಸ್ಮರಿಸುವ ದ್ವಿಜರೇ ನಿಜವಾಗಿ ಲೋಕಹಿತಕಾರಕರು. ಶರೀರಾಕಾರದಲ್ಲಿರುವ ಮಹಾ ಮಂಡಲಕ್ಕೆ ಇದನ್ನೇ ಮಹಾ ಮಂತ್ರವೆಂದು ಹೇಳಿರುವುದರಿಂದ ಈ ಮಂತ್ರಕ್ಕೆ ಅಷ್ಟು ಮಹತ್ತ್ವವು ಪ್ರಾಪ್ತವಾಗಿರುವುದು.

೩೬. ಮಹಾ ಮಂಡಲದ ಮಧ್ಯಭಾಗದಲ್ಲಿ ಒಂದು ಕಮಲದ ಆಕಾರವನ್ನು ನಿರ್ಮಿಸಬೇಕು. ಆ ಕಮಲಕ್ಕೆ ಮಧ್ಯದ ದಿಂಡನ್ನು ಅಷ್ಟಾಂಗುಲ ಪ್ರಮಾಣವುಳ್ಳದ್ದನ್ನಾಗಿ ರಚಿಸಬೇಕು. ಹಾಗೆಯೇ ಅದಕ್ಕೆ ಅದೇ ಅಳತೆಯಿಂದ ಕೇಸರಗಳನ್ನೂ ಕಲ್ಪಿಸಬೇಕು. ಮಧ್ಯದ ದಿಂಡು ಎಷ್ಟುದ್ದವಾಗಿರುವುದೋ ಕೇಸರಗಳೂ ಅದೇ ಪ್ರಮಾಣಉದ್ದದಲ್ಲಿರಬೇಕು.

ಪದ್ಮತುಲ್ಯಃ ಸ್ಮೃತೋ ದ್ವಾರಃ ಪ್ರಕೋಷ್ಠೋ ದ್ವಾರತುಲ್ಯಕಃ ।
ವೀಥಿಃ ಪ್ರಕೋಷ್ಠಕೈಸ್ತುಲ್ಯಾ ಸ್ಥಿತಿರೇಷಾ ಪ್ರಕೀರ್ತಿತಾ ॥ ೩೭ ॥

ಸಿತಂ ರಕ್ತಂ ತಥಾ ಪೀತಂ ಹರಿತಂ ಕೃಷ್ಣಮೇವ ಚ ।
ಆಲಿಖೇನ್ಮಂಡಲಂ ಮಂತ್ರೀ ಗಾಯತ್ರ್ಯಾ ಪರಿಮಂತ್ರಿತಂ ॥ ೩೮ ॥

ಅಷ್ಟಹಸ್ತಂ ಸಮಂತಾತ್ತು ಬಾಹ್ಯತೋ ಮಂಡಲಾಕೃತಿಃ ।
ತದರ್ಧೇನ ಪುನರ್ಮಧ್ಯೇ ವಾಪೀತುಲ್ಯಂ ಪುರಂ ಲಿಖೇತ್ ॥ ೩೯ ॥

ತನ್ಮಧ್ಯೇ ತು ಲಿಖೇತ್ಪದ್ಮಂ ಪತ್ರದ್ವಾದಶಭೂಷಿತಂ ।
ಮೂರ್ತಿದ್ವಾದಶಕಂ ತೇಷು ನಿವಿಶೇತ್ತು ವಿಧಾನವಿತ್ ॥ ೪೦ ॥

---

೩೭. ಪದ್ಮದಂತೆ ದುಂಡಾಗಿಯೂ ವಿಶಾಲವಾಗಿಯೂ ಮಂಡಲದ ದ್ವಾರವನ್ನು ರಚಿಸಬೇಕು. ಆ ಮಂಡಲದ ಒಳ ಕೋಣಗಳೂ ಮಧ್ಯದ ವೀಥಿಯೂ, ಪದ್ಮದ ಅಳತೆಗೆ ಸರಿಸಮನಾಗಿರಬೇಕು. ಇದೇ ಮಂಡಲದ ರಚನಾಕ್ರಮ.

೩೮. ಆ ಮಂಡಲವು, ಬಿಳುಪು, ಕೆಂಪು, ಹಳದಿ, ಕಪ್ಪು ಈ ಬಣ್ಣಗಳಿಂದ ಕೂಡಿರಬೇಕು. ಈ ವರ್ಣಗಳನ್ನು ಗಾಯತ್ರೀ ಮಂತ್ರೋಚ್ಚಾರಣೆಯಿಂದಲೇ ಆ ಮಂಡಲಕ್ಕೆ ಸಂಯೋಜನ ಮಾಡಬೇಕು.

೩೯-೪೦. ಆ ಮಂಡಲದ ಒಟ್ಟು ಸುತ್ತಳತೆಯು ಎಂಟು ಮೊಳವಿರಬೇಕು ಹೊರಭಾಗದ ನೋಟಕ್ಕೆ ಅದು ಮಂಡಲದಂತೆ ಕಾಣುತ್ತಿರಬೇಕು. ಒಳಭಾಗದಲ್ಲಿ ನಾಲ್ಕು ಮೊಳದ ಸುತ್ತಳತೆಯಲ್ಲಿ ಭೂಮಿಯ ಆಕಾರದಂತೆ ಒಂದು ಪುರವನ್ನು ನಿರ್ಮಿಸಬೇಕು. ಆಪುರದ ಮಧ್ಯದಲ್ಲಿ ಹಿಂದೆ ಹೇಳಿದಂತೆ ಕಮಲವಿರಬೇಕು. ಆ ಕಮಲಕ್ಕೆ ಹನ್ನೆರಡು ದಳಗಳಿರಬೇಕು. ಆ ಹನ್ನೆರಡು ಎಸಳುಗಳಲ್ಲಿಯೂ ಹನ್ನೆರಡು ದೇವತೆಗಳನ್ನೂ ಆವಾಹನೆ ಮಾಡಬೇಕು.

ಚತುರಸ್ರಂ ಪುನಃ ಕೃತ್ವಾ ಬಾಹ್ಯತೋಽಸ್ರಪಮಾಲಿಖೇತ್ ।
ವಜ್ರಂ ಶಕ್ತಿಂ ಚ ದಂಡಂ ಚ ಖಡ್ಗಪಾಶಂ ತಥೈವ ಚ ।
ಧ್ವಜಂ ಗದಾಂ ತ್ರಿಶೂಲಂ ಚ ಯಥಾರೂಪಂ ವ್ಯವಸ್ಥಿತಂ ॥ ೪೧ ॥

ನರೋ ವಿಶ್ವಾತ್ಮಕಶ್ಶಂಭುರ್ನಮಸ್ಕಾರೋ ವಷಟ್ಕೃತಃ ।
ಸಂಬುದ್ಧೋ ವಿಶ್ವಕರ್ತಾ ಚ ನಿಸ್ಕಲೋ ಜ್ಞಾನಸಂಭವಃ ॥ ೪೨

ಮಾನೋನ್ಮಾನೋ ಮಹಾನ್ಸತ್ಯೋ ದ್ವಾದಶೈತೇ ಪ್ರಕೀರ್ತಿತಾಃ ।
ಆಧಾರಭೂತಾಸ್ಸರ್ವಸ್ಯ ಜಗನ್ನಾಥಾ ವ್ಯವಸ್ಥಿತಾಃ ॥ ೪೩ ॥

ಅಭೀಷವೇ ಇದಂವಿಷ್ಣು ರ್ಧಾಮಚ್ಛಂದೋ ಮನೋಜ್ಯೋತಿ ।
ಶ್ಚತ್ವಾರಿಶೃಂಗಾಸ್ತೇ ಪ್ರಾಣಾಯ ಅಗ್ನಿಮೀಡೆ ಇಷೇ ।
ತ್ವೋರ್ಜೇತ್ವಾ ಅಗ್ನ ಅಯಾಹಿ ಶನ್ನೋದೇವೀ ।
ಕೃತ್ತಿವಾಸಾ ಬ್ರಹ್ಮಜಜ್ಞಾನಮಿತಿ ಯದ್ದೇವಾ ದ್ವಾದಶಮೂರ್ತಯಃ ॥೪೪॥

---

೪೧. ಹೊರಭಾಗದ ಪ್ರತ್ಯೇಕವಾದ ಚತುರಸ್ರಾಕಾರದ ಒಂದು ಮಂಡಲದಲ್ಲಿ ವಜ್ರ, ಶಕ್ತಿ, ದಂಡ, ಕತ್ತಿ. ಪಾಶ, ಧ್ವಜ, ಗದೆ, ತ್ರಿಶೂಲ, ಮುಂತಾದ ಆಯುಧ ಗಳ ಯಥಾವತ್ತಾದ ಆಕಾರವನ್ನು ಬರೆಯಬೇಕು.

೪೨-೪೩. ದ್ವಾದಶ ದಳಗಳಲ್ಲಿಯೂ. ನರ, ವಿಶ್ವಾತ್ಮಕ, ಶಂಭು ನಮಸ್ಕಾರ, ವಷಟ್ಕೃತ, ಸಂಬುದ್ಧ, ವಿಶ್ವಕರ್ತಾ ನಿಸ್ಕಲ, ಜ್ಞಾನಸಂಭವ, ಮಾನ, ಉನ್ಮಾನ ಎಂಬ ಹನ್ನೆರಡು ದೇವತೆಗಳನ್ನೂ ಈ ಮಂಡಲಕ್ಕೆ ಆಧಾರಭೂತರನ್ನಾಗಿ ತಿಳಿದು ಸ್ಥಾಪಿಸಬೇಕು.

೪೪. ಮೇಲೆ ಹೇಳಿದ ದ್ವಾದಶ ಮೂರ್ತಿಗಳಿಗೂ ಕ್ರಮವಾಗಿ "ಅಭೀಷವೇ" ಇದಂವಿಷ್ಣುಃ" "ಧಾಮಚ್ಛಂದೋ" "ಮನೋಜ್ಯೋತಿ" "ಚತ್ವಾರಿಶೃಂಗಾ" "ತೇ ಪ್ರಾಣಾಯ" "ಅಗ್ನಿಮೀಳೆ ಪುರೋಹಿತಂ" "ಇಷೇತ್ವೋರ್ಜೇತ್ವಾ" "ಅಗ್ನ ಆಯಾಹಿ" "ಶನ್ನೋದೇವಿ" "ಕೃತ್ತಿವಾಸ" "ಬ್ರಹ್ಮಜಜ್ಞಾನಂ" ಎಂಬ ಈ ಹನ್ನೆರಡು ಮಂತ್ರಗಳು ಸ್ತುತಿರೂಪವಾಗಿ ಉಕ್ತವಾಗಿವೆ.

ಮಧ್ಯೇ ಮೂರ್ತಿರ್ಮಹಾಕಾಲೀ ಕಲ್ಪಿಕಾ ಚ ಪ್ರಬೋಧಿನೀ ।
ನೀಲಾಂಬರಾ ಘನಾಂತಸ್ಥಾ ಅಮೃತಾ ಚ ಪ್ರಕೀರ್ತಿತಾ ॥ ೪೫ ॥

ಶುಕ್ಲೋ ಜಯಂತೋ ವಿಜಯೋ ಹ್ಯನೇಕವರ್ಣೋ ಹುತಾಶನಃ ।
ಹುತಾರ್ಚಿರ್ವ್ಯಾಪಕಶ್ಚೈವ ಅಶ್ವಾಃ ಸಪ್ತ ಪ್ರಕೀರ್ತಿತಾಃ ॥ ೪೬ ॥

---

೪೫-೪೬. ಈ ದ್ವಾದಶ ದೇವತೆಗಳ ಮಧ್ಯದಲ್ಲಿ, ಮಹಾಕಾಲೀ, ಕಲ್ಪಿಕಾ, ಪ್ರಬೋಧಿನೀ, ನೀಲಾಂಬರ, ಘನಾಂತಸ್ಥಾ, ಅಮೃತಾ, ಮುಂತಾದ ದೇವಿಯರ ಭೇದಗಳನ್ನು ಕಲ್ಪಿಸಬೇಕು.

ಹಾಗೆಯೇ ಶುಕ್ಲ, ಜಯಂತ, ವಿಜಯ, ಅನೇಕವರ್ಣ, ಹುತಾಶನ, ಹುತಾರ್ಚಿ, ವ್ಯಾಪಕ ಎಂಬ ಹೆಸರಿನ ಏಳು ಕುದುರೆಗಳನ್ನೂ ಗುರ್ತಿಸಬೇಕು.

| | |
|---|---|
| ಓಂ ಹಾರಿಣ್ಯೈ ಸ್ವಾಹಾ | ಇಡಾ |
| ಓಂ ವಿಹಾರಿಣ್ಯೈ ಸ್ವಾಹಾ | ಸುಷುಮ್ನಾ |
| ಓಂ ಆನಂದಾಯೈ ಸ್ವಾಹಾ | ವಿದುಃ |
| ಓಂ ಭಾವಿನ್ಯೈ ಸ್ವಾಹಾ | ಸಂಜ್ಞಾ |
| ಓಂ ಮೋಹಿನ್ಯೈ ಸ್ವಾಹಾ | ಪ್ರಮರ್ದಿನೀ |
| ಓಂ ಜ್ವಾಲಿನ್ಯೈ ಸ್ವಾಹಾ | ಪ್ರಕರ್ಷಿಣೀ |
| ಓಂ ತಾಪಿನ್ಯೈ ಸ್ವಾಹಾ | ಮಹಾಕಾಲೀ |
| ಓಂ ಕಲ್ಪಾಯೈ ಸ್ವಾಹಾ | ಕಲ್ಪಿತಾ |
| ಓಂ ಕ್ರುದ್ಧಾಯೈ ಸ್ವಾಹಾ | ಪ್ರಬೋಧಿನೀ |
| ಓಂ ಮೃತ್ಯವೇ ಸ್ವಾಹಾ | ನೀಲಾಂಬರಾ |
| ಓಂ ಹರಾತ್ಯೈ ಸ್ವಾಹಾ | ಘನಾ |
| ಓಂ ದ್ರುಮಾಯ ಸ್ವಾಹಾ | ಶುಕ್ಲಾ |
| ಓಂ ಶುದ್ಧಾಯ ಸ್ವಾಹಾ | ಜಯಂತಃ |
| ಓಂ ಮಹಾಘೋರಣಾಯ ಸ್ವಾಹಾ | ವಿಜಯಃ |
| ಓಂ ಚಿತ್ರಾಯ ಸ್ವಾಹಾ | ಅನೇಕವರ್ಣಃ |
| ಓಂ ರುದ್ರಾಯ ಸ್ವಾಹಾ | ಹುತಾಶನಃ |
| ಓಂ ಸಂಬಲಿತಾಯ ಸ್ವಾಹಾ | ಹುತಾರ್ಚಿಃ |
| ಓಂ ಮಹಾಶಿಖಾಯ ಸ್ವಾಹಾ | ವ್ಯಾಪಕಃ |
| ಓಂ ಜ್ವಲಿತ ಚಂಡಲೋಚನಾಯ | ಅರುಣೋರಥಸ್ಥಾನೇ |

ಏವಮಾಲಿಖ್ಯ ವಿಧಿವನ್ಮಂಡಲಂ ಶಾಸ್ತ್ರಪೂರ್ವಕಂ ।
ಪೂರ್ವಪ್ರತಿಷ್ಠಿತೇ ವಹ್ನೌ ಸಂಸ್ಕಾರಂ ಕಾರಯೇತ್ಪುನಃ ॥ ೪೭ ॥
ಪರಿಸಮೂಹನಂ ತತ್ರ ಗಾಯತ್ರ್ಯಾ ಚೋಪಲೇಪನಂ ।
ಶನ್ನೋ ಭವಂತು ವನಸ್ಪದಿತ್ಯುಲ್ಲೇಖನಬಿಂದುನಾ ॥ ೪೮ ॥
ಅಭ್ಯುಕ್ಷಣಂ ಬಿಂದುನಾ ।
ಆದ್ಯಾಕ್ಷರಸಂಯುಕ್ತೇನ ಅಗ್ನೇಃ ಸ್ಥಾಪನಮುತ್ತಮಂ ।
ತತ್ತ್ವಮಧ್ಯೇ ಪ್ರಣವೋ ಭವೇತ್ ।
ಕೃತ್ವಾ ವಹ್ನಿಕ್ರಿಯಾಮೇತಾಂ ಯಥಾವದನುಪೂರ್ವಶಃ ।
ಸುಯುಜೇತ್ ಕ್ಷೀರಸಂಯುಕ್ತಂ ಚರುಂ ದ್ವಾದಶಸಂಜ್ಞಿತಂ ।
ಸಂವೃತ್ಯಾರ್ಥಂ ತು ಗಾಯತ್ರ್ಯಾ ಹೋಮಯೇಜ್ಜಾತವೇದಸಂ ॥ ೪೯ ॥
ಯಥೋದ್ದಿಷ್ಟೇನ ಮಂತ್ರೇಣ ಸೂತ್ರಾನ್ ಪ್ರತಿಜುಹುಯಾತ್ ।
ಹೋಮಾಂತೇ ಪ್ರಾಶನಂ ಕೃತ್ವಾ ಗುರುಂ ದೇವಂ ಪ್ರಪೂಜಯೇತ್ ।

---

೪೭-೪೮. ಮೇಲೆ ಹೇಳಿದ ರೀತಿಯಲ್ಲಿ ಆಯಾ ಮಂತ್ರಗಳನ್ನೂ, ಆಯಾ ದೇವತೆಗಳ ಹೆಸರನ್ನೂ, ಮಹಾಮಂಡಲದಲ್ಲಿ ಕ್ರಮವಾಗಿ ಬರೆಯಬೇಕು. ಅನಂತರ ಪೂರ್ವದಿಕ್ಕಿನಲ್ಲಿ ಗಾಯತ್ರಿಯಿಂದ ಉಪಲೇಪನಾದಿಯಾಗಿ ಪ್ರತಿಷ್ಠಿತವಾದ ಅಗ್ನಿಯಲ್ಲಿ ಪರಿಸಮೂಹನ, ಪರ್ಯುಕ್ಷಣಾದಿಗಳನ್ನೂ ನಡೆಸಿ, "ಶನ್ನೋಭವಂತು ವನಸ್ಪತೇ" ಎಂಬ ಮಂತ್ರದಿಂದ ಉಲ್ಲೇಖನಾದಿಗಳನ್ನು ಮಾಡಬೇಕು.

೪೯. ಆದ್ಯಾಕ್ಷರ ಸಂಯುಕ್ತವಾದ ಓಂಕಾರದಿಂದ (ಪ್ರಣವದಿಂದ) ಅಗ್ನಿಯನ್ನು ಸ್ಥಾಪಿಸಬೇಕು. ಮಹಾಮಂಡಲ ಮಧ್ಯದಲ್ಲಿ ಪ್ರಣವಾಕ್ಷರವನ್ನು ಬರೆಯಬೇಕು. ಅಂತೂ ವಿಧಿವತ್ತಾಗಿ, ಅಗ್ನಿ ಪ್ರತಿಷ್ಠಾಪನಾದಿಗಳನ್ನು ನೆರವೇರಿಸಿ, ಕ್ಷೀರಾನ್ನವನ್ನು ದ್ವಾದಶ ಸಂಖ್ಯೆಯಲ್ಲಿ (ಸೂರ್ಯ) ಗಾಯತ್ರೀಮಂತ್ರದಿಂದ ಹೋಮ ಮಾಡಬೇಕು. ಇದೇ ಹೋಮಕ್ರಮ.

೫೦. ಅಲ್ಲದೆ ಹಿಂದೆ ಹೇಳಿದ ಮಂತ್ರಗಳಿಂದ ಹೋಮಮಾಡಿ, ಅದೇ ದೇವತೆಗಳಿಗೆ ಉದ್ದೇಶತ್ಯಾಗವನ್ನು ಹೇಳುತ್ತಾ ಹೋಮ ಸಮಾಪ್ತಿ ಮಾಡಬೇಕು.

ಪೂಜಯಿತ್ವಾ ವಿಶೇಷೇಣ ವಿಧಾನೋಕ್ತೇನ ಕರ್ಮಣಾ ॥ ೫೦ ॥

ಸಹ ತೇನೈವ ವಿಧಿನಾ ಪ್ರಾಗ್ವಂಶೇ ಪ್ರಾಕ್ಸಮಾಹಿತೇ ।
ಪ್ರಭಾತೇ ಕೃತಪುಣ್ಯಾಹೌ ದ್ವೌ ತೌ ವ್ರತಪರಾಯಣೌ ॥ ೫೧ ॥

ಮಂಡಲಾಲಿಖನಂ ಕುರ್ಯಾತ್ ಯತ್ಪೂರ್ವಮಭಿಚೋದಿತಂ ।
ವಿತಾನಧ್ವಜಮಾಲಾಭಿಃ ಕಲಶೈಶ್ಚ ವಿಭೂಷಿತಂ ॥ ೫೨ ॥

ದರ್ಪಣೈರ್ವಿಮಲೈಶ್ಚೈವ ಛತ್ರೈರ್ವಸ್ತ್ರಾವಕುಂಠಿತೈಃ ।
ಯೋಗ್ಯೈರ್ನಾನಾವಿಧೈರ್ಮಧ್ಯೈರ್ಮಹಾಬಲ್ಯುಪಹಾಸಕೈಃ ॥ ೫೩ ॥

ಪೂಜಾಂ ಕುರ್ವೀತ ನಿಯತೋ ಗುರುಮಂತ್ರಪರಾಯಣಃ ।
ಕೃತ್ವಾ ಕುಶೋತ್ತರಾಂ ವೇದೀಂ ಚತುರಂಗುಲಮುಚ್ಛ್ರಿತಾಂ ॥ ೫೪ ॥

---

ಹೋಮಾಂತ್ಯದಲ್ಲಿ ಹೋಮಶೇಷ ಪ್ರಾಶನೆಮಾಡಿ, ಗುರುವನ್ನೂ, ಇಷ್ಟದೇವರನ್ನೂ ಪೂಜಿಸಿ ತೃಪ್ತಿಪಡಿಸಬೇಕು.

೫೧-೫೨. ಈ ಮಹಾ ಮಂಡಲ ರಚನೆಯನ್ನು ಮಾಡುವ ದಿನ, ಪ್ರಾತಃ ಕಾಲದಲ್ಲಿ ಶುದ್ಧಮನಸ್ಕನಾಗಿ, ಗುರುಶಿಷ್ಯರಿಬ್ಬರೂ, ಪುಣ್ಯಾಹ ವಾಚನದಿಂದ ಪರಿಶುದ್ಧರಾಗಿ ಹಿಂದೆ ಹೇಳಿದಂತೆ ಮಂಡಲರಚನೆಯನ್ನು ಮಾಡಬೇಕು. ಆ ಮಂಡಲದ ಸುತ್ತಲೂ, ಮೇಲ್ಕಟ್ಟು, ಧ್ವಜ, ಮಾಲೆ, ಕಲಶ, ಇವುಗಳನ್ನಿಟ್ಟು ಮಂಡಲವನ್ನು ಅಲಂಕರಿಸಬೇಕು.

೫೩-೫೪. ಇಷ್ಟದೇವತಾ ಪೂಜೆಯನ್ನೂ, ಗುರು ಪೂಜೆಯನ್ನೂ. ಛತ್ರಿ, ಕಲಶ, ಕನ್ನಡಿ ಇನ್ನೂ ಅನೇಕ ವಿಧವಾದ ಉಪಚಾರದ್ರವ್ಯಗಳಿಂದ ನಡೆಸಬೇಕು. ಅಲ್ಲದೆ ಶ್ರೇಷ್ಠವಾದ ಮಂತ್ರಪಾರಾಯಣಾದಿಗಳಿಂದ ಆ ಪೂಜಾವಿಧಿಯನ್ನು ಮುಗಿಸಿ, ಮಂಡಲದ ಪಶ್ಚಿಮ ಭಾಗದಲ್ಲಿ ಚತುರಂಗುಲ ಪ್ರಮಾಣದಲ್ಲಿ ಎತ್ತರವಾದ ಮತ್ತು ಉತ್ತರಾಗ್ರವಾಗಿ ಹಾಸಿದ ದರ್ಭೆಗಳುಳ್ಳ ಒಂದು ವೇದಿಕೆಯನ್ನು ನಿರ್ಮಿಸಬೇಕು.

ಪಶ್ಚಿಮೇ ಮಂಡಲದ್ವಾರೇ ಶಿಷ್ಯಂ ತತ್ರಾಧಿವಾಸಯೇತ್ ।
ದ್ರುಪದಾಪ್ರಥಮಂ ಪ್ರೋಕ್ತಮಿದಮಾಪೋದ್ವಿತೀಯಕಂ ॥ ೫೫ ॥

ತೃತೀಯಃ ಭಿರ್ದೇವತಾಭ್ಯಶ್ಚ ಭಾಸ್ಕರಾರ್ಚಿಸ್ತ್ರಿಭಿಃ ಪರೈಃ ।
ಕೃತ್ವಾಭಿಷೇಕಂ ಮಂತ್ರೋಕ್ತಂ ಪುನಃ ಕೃತ್ವಾ ಪ್ರದಕ್ಷಿಣಂ ॥ ೫೬ ॥

ಪ್ರವಿಷ್ಟೇ ಮಂಡಲಂ ಶಿಷ್ಯೇ ತತ್ತ್ವನ್ಯಾಸಂ ಪ್ರಕಲ್ಪಯೇತ್ ।

ಓಂ ಅಂ ಶಿರಃ ಓಂ ಆಂ ಹೃದಯಂ
ಓಂ ಇಂ ನಾಭ್ಯಾಂ ಓಂ ಈಂ ಚಕ್ಷುಷೀ
ಓಂ ಈಂ ಓಂ ನಾಸಿಕಾಯಾಂ ಓಂ ಫಟ್
ಓಂ ಕರ್ಣಯೋಃ ಓಂ ಹುಂ ಓಂ ಆಸ್ಯೇ
ಓಂ ಕ್ಷಂ ಓಂ ಜಿಹ್ವಾಯಾಂ ಓಂ ಕ್ಷಾಂ
ಓಂ ಶಿಖಾಯಾಂ ಓಂ ಕ್ಷಂ ಓಂ ಸರ್ವಗಾತ್ರೇಷು

ನ್ಯಾಸಮೇವಂ ವಿಧಂ ಕೃತ್ವಾ ದಾಪಯೇದಷ್ಟಪುಷ್ಪಿಕಂ ।
ಓಂ ಭೂತಾತ್ಮನೇ ಗೋಪತಯೇ ಸ್ವಾಹಾ ಪದ್ಮಮಧ್ಯೇ ।

ಓಂ ಖದ್ಯೋತಾಯ ಸ್ವಾಹಾ ಪೂರ್ವತಃ
ಓಂ ಸಸತ್ಯಾಯ ಸ್ವಾಹಾ ದಕ್ಷಿಣತಃ

---

೫೫-೫೬. ಆ ವೇದಿಕೆಯ ಮೇಲೆ ಶಿಷ್ಯನನ್ನು ಕೂರಿಸಬೇಕು. ದ್ರುಪದಾ ಗಾಯತ್ರೀಮಂತ್ರದಿಂದಲೂ, ಇದಮಾಪಃ ಎಂಬ ಮಂತ್ರದಿಂದಲೂ, ಸೂರ್ಯದೇವತಾಕವಾದ ಉದ್ಯನ್ನದ್ಯೇತಿ ಎಂಬ ಮೂರು ಋಙ್ಮಂತ್ರಗಳಿಂದಲೂ, ಮಂತ್ರಾಭಿಷೇಕ ಮಾಡಬೇಕು. ಅನಂತರ ಮಹಾಮಂಡಲಕ್ಕೆ ಪ್ರದಕ್ಷಿಣಾದಿಗಳನ್ನು ನೆರವೇರಿಸಬೇಕು.

ಶಿಷ್ಯನು ಮಹಾ ಮಂಡಲವನ್ನು ಪ್ರವೇಶಮಾಡಿದ ಮೇಲೆ ಈ ರೀತಿ ಶಿರಸ್ಸೇ ಆದಿಯಾದ ಅಂಗನ್ಯಾಸ ಮಾಡಬೇಕು. ಪ್ರತಿ ಅವಯವಕ್ಕೂ ಮೇಲೆ ಹೇಳಿದ ಒಂದೊಂದು ಮಂತ್ರವನ್ನೂ ಉಚ್ಚರಿಸುತ್ತಾ ಅಯಾಯಾ ಅಂಗಗಳನ್ನೂ ಸ್ಪರ್ಶ ಮಾಡಬೇಕು.

ಓಂ ಅನ್ಯುತಾಯ ಸ್ವಾಹಾ ಪಶ್ಚಿಮತಃ
ಓಂ ವಕ್ಷಸ್ಥಮಾಯ ಸ್ವಾಹಾ ಉತ್ತರತಃ
ಓಂ ಅವ್ಯಕ್ತಾಯ ಸ್ವಾಹಾ ಆಗ್ನೇಯ್ಯಾಂ
ಓಂ ಕ್ಷಯಾಯ ಸ್ವಾಹಾ ನೈಋರ್ತ್ಯಾಂ
ಓಂ ಅಕ್ಷಯಾಯ ಸ್ವಾಹಾ ವಾಯವ್ಯಾಂ
ಓಂ ಸಂಘಾತಿನೇ ಸ್ವಾಹಾ ಐಶಾನ್ಯಾಂ

ಅಷ್ಟಮೂರ್ತೀನಾಂ ಚೋದಿತೈರ್ಮಂತ್ರೈಃ ।
ರಶ್ಮಿಭಿಸ್ಸಮುದಾಹೃತಂ ।
ಏವಂ ಕೃತಮಂತ್ರನ್ಯಾಸಮಭಿಷಿಕ್ತಂ ದೀಕ್ಷಾ ।
ಯೋಗೇನ ಯೋಜಯೇತ್ ।

ಓಂ ಪಾವಕಾಯ ಶುಚಯೇ ಸ್ವಾಹಾ (ಯಜ್ಞೋಪವೀತಂ)
ಓಂ ಧರ್ಮರಾಜಾಯ ಸ್ವಾಹಾ (ದಂತಕಾಷ್ಠಂ)
ಓಂ ದುರುಕ್ತದುರಿತಪರಿಧಾನಿ ಸ್ವಾಹಾ (ಮೇಖಲಾಂ)

---

ಆ ರೀತಿ ನ್ಯಾಸಾಚರಣೆಯಾದ ಮೇಲೆ ಎಂಟುಸಾರಿ ಎಂಟು ದಿಕ್ಕುಗಳಿಗೂ ಮೇಲೆಹೇಳಿದ ಎಂಟು ಸ್ವಾಹಾಂತವಾದ ಮಂತ್ರಗಳಿಂದ ಪುಷ್ಪಾರ್ಚನೆ ಮಾಡಬೇಕು.

ಅಥವಾ ಈ ಸಂದರ್ಭದಲ್ಲಿ ಈಶ್ವರನ ಅಷ್ಟಮೂರ್ತಿಗಳಾದ ಸೂರ್ಯ, ಚಂದ್ರ, ವರುಣ, ಅಗ್ನಿಯೇ ಮೊದಲಾದ ಎಂಟುದೇವತೆಗಳ ಮಂತ್ರಗಳನ್ನಾಗಲೀ ಉಚ್ಚರಿಸಿ ಅಂತೂ ನ್ಯಾಸಾಚರಣಾನಂತರ ಅಭಿಷಿಕ್ತನಾದ ಶಿಷ್ಯನಿಗೆ ದೀಕ್ಷಾವಿಧಿಯನ್ನು ಕೊಡಬೇಕು.

ಈ ಮಂತ್ರಗಳಿಂದ, ಯಜ್ಞೋಪವೀತ, ದಂತಕಾಷ್ಠ, ಮೇಖಲಾ ಇವುಗಳನ್ನು ಧರಿಸಬೇಕು.

**ಯಜ್ಞೋಪವೀತಂ-ಕಾಲ್ಯಮಾವಿಕತ್ವಚೋದ್ಭವಂ**

**ದಂತಕಾಷ್ಠಂ ಪಾಲಾಶಮೌದುಂಬರಂ ಖಾದಿರಂ ಚ ದಂಡಂ**

**ಮೇಖಲಾ ದರ್ಭಮೌಂಜೀಮೌರ್ವೀ ಬಿಲ್ವಜಾಃ**

ಓಂ ಸರಸ್ವತ್ಯೈ ಸ್ವಾಹಾ ಓಂ ವೇದವತ್ಯೈ ಸ್ವಾಹಾ

ಓಂ ಚರ್ಯಾವತ್ಯೈ ಸ್ವಾಹಾ ಓಂ ಸತ್ಯವತ್ಯೈ ಸ್ವಾಹಾ

ಓಂ ಧ್ರುವಾವತ್ಯೈ ಸ್ವಾಹಾ ಓಂ ಸ್ವಭಾವತ್ಯೈ ಸ್ವಾಹಾ

ಓಂ ಪ್ರತಿಷ್ಠಾವತ್ಯೈ ಸ್ವಾಹಾ

**ಏಭಿರ್ಮಂತ್ರೈಃ ಸಮಿದ್ಧೇಽಗ್ನೌ ಉಪವಿಶ್ಯ ಘೃತಾಹುತಯಃ ।**

**ಪಾಕಯಜ್ಞಪಾತ್ರೇಣ ಸಪ್ತಾಹುತಯಃ ।**

**ಪೂರ್ವೋಕ್ತಮಂತ್ರೇಣ ಜುಹುಯಾತ್ ।**

**ಏವಂ ಕೃತ್ವಾ ವಿಧಾನಂ ತು ಶಿಷ್ಯಂ ಗುರುರಗ್ನಿಕುಂಡಾದ್ಭಸ್ಮಾದಾಯ ।**

**ಪಂಚಭಿಃ ಸ್ಥಾನೈರ್ಮೂರ್ಧ್ನಾ ಲಭೇತ್ ।**

---

ಈ ದೀಕ್ಷೆಗೆ ಯಜ್ಞೋಪವೀತವನ್ನು, ಕುರಿಯ ಉಣ್ಣೆಯಿಂದ ರಚಿಸಿರಬೇಕು. ಹಲ್ಲುಜ್ಜುವ ಕಡ್ಡಿಯನ್ನೂ, ಮುತ್ತುಗ, ಅತ್ತಿ, ಕಗ್ಗಲಿ, ಮುಂತಾದ ವೃಕ್ಷಗಳಿಂದ ತರಬೇಕು. ದಂಡವು ಕಗ್ಗಲಿಯದಾಗಿರಬೇಕು.

ಸರಸ್ವತ್ಯೈ ಎಂಬ ಹಿಂದೆ ಹೇಳಿದ ಸ್ವಾಹಾಕಾರಾಂತ ಪದಗಳಿಂದ, ಸಂಸ್ಕೃತವಾದ ಅಗ್ನಿಯಲ್ಲಿ ಸಮಿದಾಜ್ಯಗಳಿಂದ ಹೋಮಮಾಡಬೇಕು. ಪಾಕಯಜ್ಞಪ್ರೋಕ್ತವಾದ ಸಪ್ತಾಹುತಿಗಳನ್ನೂ ಅನಂತರ ನೆರವೇರಿಸಬೇಕು. ಇದಾದಮೇಲೆ ಗುರುವು ಅಗ್ನಿಕುಂಡದಿಂದ ಭಸ್ಮವನ್ನು ತೆಗೆದು ಶಿಷ್ಯನಿಗೆ ಲಲಾಟಾದಿ ಪಂಚಸ್ಥಾನಗಳಲ್ಲಿಯೂ ಶಿರಸ್ಸಿಗೂ, ಲೇಪನ ಮಾಡಬೇಕು.

ಓಂ ಚಿತ್ರಾಯ ಸ್ವಾಹಾ ಪೂರ್ವಮಧ್ಯೇ
ಓಂ ಖಿಮವಿಷ್ಣವೇ ಸ್ವಾಹಾ ಪೂರ್ವತಃ
ಓಂ ಹಿಂಸಾಯ ಸ್ವಾಹಾ ದಕ್ಷಿಣತಃ
ಓಂ ವಿದಿತಾಯ ಸ್ವಾಹಾ ಪಶ್ಚಿಮತಃ
ಓಂ ಲಿಖಿನೇ ಸ್ವಾಹಾ ಉತ್ತರತಃ
ಓಂ ಸೋಮವತ್ಯೈ ಸ್ವಾಹಾ
ಓಂ ಸುಭಗೇ ಸ್ವಾಹಾ
ಓಂ ಪ್ರೇತವತೇ ಸ್ವಾಹಾ
ಓಂ ವಾಜನವತೇ ಸ್ವಾಹಾ

ಓಂ ಸಭೂತಿನೇ ಸರ್ವಗಾತ್ರೇಷು ಭಸ್ಮಾವಕಿರೇತ್ ।
ಕೃತದೀಕ್ಷಾವಿಧಾನಸ್ಯ ಏತಾ ಆಹುತಯೋ ।
ದಿಗ್ವಿದಿತಾ ಸುಹೋತವ್ಯಾಃ ಹೋಮಾಂತೇ !
ಗುರವೇ ಗೃಹಸಮೇತಂ ಸರ್ವೋಪಕರಣಂ ।
ದದ್ಯಾತ್ ತದಾ ಪ್ರಾರ್ಥಿತಂ ಚೇತಿ ।

ಇತಿ ಶ್ರೀ ಸಾಂಬಪುರಾಣೇ ಏಕೋನಚತ್ವಾರಿಂಶೋಧ್ಯಾಯಃ.

---

ಈ ರೀತಿಯಾದ ಮಂತ್ರೋಚ್ಚಾರಣಗಳಿಂದ ಅಗ್ನಿಯ ಭಸ್ಮವನ್ನೂ ಸರ್ವ ದಿಕ್ಕುಗಳಿಗೂ ಸರ್ವಾಯವಗಳಿಗೂ, ಲೇಪನ ಮಾಡಬೇಕು.

ಎಲೈ, ರಾಜನೇ, ಈ ರೀತಿ ದೀಕ್ಷಾವಿಧಿಯಿಂದ ದೀಕ್ಷಿತನಾದ ಶಿಷ್ಯನು, ವಿಧಿವತ್ತಾಗಿ ಸಕಲ ಹೋಮಗಳನ್ನೂ ಮುಗಿಸಿ, ಗುರುವನ್ನೂ ಆರಾಧಿಸಿ, ಅವನಿಗೆ, ಗೃಹದಾನವನ್ನು ಸೋಪಸ್ಕರವಾಗಿ ನೆರವೇರಿಸಿ, ಪ್ರಾರ್ಥನೆ ಮಾಡಿಕೊಳ್ಳಬೇಕು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಮೂವತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಚತ್ವಾರಿಂಶೋಽಧ್ಯಾಯಃ



ಅತಃ ಪರಂ ಪ್ರವಕ್ಷ್ಯಾಮಿ ಯಜ್ಞಸ್ಥಾನವಿಧಿಂ ಶುಭಂ ।
ಅಧಿಯಜ್ಞೋಽಸ್ತಿ ಯಜ್ಞಾನಾಂ ಯಜ್ಞಾಂಗೋ ಯಜ್ಞಸಂಭವಃ ॥ ೧ ॥

ಯಜ್ಞಮೂರ್ತಿಂ ನಮಸ್ಕೃತ್ಯ ತ್ವಾಂ ಯಜ್ಞೇನ ಯಜಾಮಹೇ ।
ಜ್ವಾಲಾಮಾಲಾಕುಲಪ್ರಖ್ಯೇ ಸರ್ವಕಾರಣಸಂಭವೇ ॥ ೨ ॥

ವಿಗ್ರಹೇ ದೇವದೇವಸ್ಯ ವರ್ಣಸ್ಥಾನಂ ನಿಬೋಧ ಮೇ ।
ಹೃದಯೇ ಸಿದ್ಧಿರಾದ್ಯಸ್ತು ರವೇಃ ಸಕಲನಿಷ್ಕಲಾ ॥ ೩ ॥

---

## ನಲವತ್ತನೆಯ ಅಧ್ಯಾಯ.

೧. ರಾಜನೇ, ಇಲ್ಲಿಂದ ಮುಂದೆ, ಯಜ್ಞಸ್ಥಾನಗಳನ್ನು ಅಂದರೆ ಪೂಜ್ಯ ವಿಗ್ರಹದಲ್ಲಿರುವ ಪೂಜಾಸ್ಥಾನಗಳನ್ನು ಹೇಳುವೆನು ಕೇಳು. ಪರಬ್ರಹ್ಮವಸ್ತುವಾದ ಸೂರ್ಯದೇವನು ಯಾವಾಗಲೂ ಯಜ್ಞಾಂಗಗಳಿಂದ ಕೂಡಿದವನು ಮತ್ತು ಯಜ್ಞ ಸಂಭವನು. ಇಂತಹವನ ಪೂಜೆಯೇ ಯಜ್ಞಶ್ರೇಷ್ಠವೆನಿಸಿರುವುದು.

೨-೩. ಅಂತಹ ಯಜ್ಞಮೂರ್ತಿಯಾದ ಶ್ರೀ ಸೂರ್ಯನಾರಾಯಣನನ್ನು ವಂದಿಸಿ, ನಿನಗೆ ಆ ಯಜ್ಞವಿಧಿಯನ್ನು ತಿಳಿಸುವೆನು ಎಂದು ಜ್ವಾಲಾಮಯವಾದ ಮತ್ತು ಸಕಲ ಕಾರಣವಸ್ತುಗಳಿಂದಲೂ ಕೂಡಿರುವ ಸೂರ್ಯವಿಗ್ರಹದಲ್ಲಿರುವ ವರ್ಣ ಸ್ಥಾನವನ್ನು ವಿವರಿಸಲಾರಂಭಿಸಿದನು. ಅದರಲ್ಲಿ ಆದ್ಯಾಕ್ಷರಗಳಾದ ಅ, ಆ ಕಾರಗಳು ಸೂರ್ಯದೇವನ ಹೃದಯಪ್ರದೇಶವಾಗಿರುವುದು.

ಕರ್ಮನಿರ್ವಾಣಗಾವೇತೌ ಅಕಾರೌ ಪರಿಕೀರ್ತಿತೌ ।
ಇ ಈ ವಿದ್ಯೇಶಯೋಗೀಶೌ ನಾಭೇಸ್ತಸ್ಯ ಬಭೂವತುಃ ॥ ೪ ॥

ಉಊಭಾವಾದಿಬೀಜೇ ತು ಊರುಭ್ಯಾಂ ಚಾಸ್ಯ ಧೀಮತಃ ।
ಋ ೠ ಋತಂ ಚ ಸತ್ಯಂ ಚ ಪದ್ಭ್ಯಾಂ ತಸ್ಯ ಬಭೂವತುಃ ॥ ೫ ॥

ಧರ್ಮಾದಿವರ್ಗವಿಪುಲಂ ಲುಕಾರಂ ಗ್ರಹಣಾರ್ಣವಂ ।
ಏಐದೇವಸ್ಯ ಮಾತರೌ ಶ್ಲೋಕೇ ಅಂ ಅಃ ಮಹದ್ವ್ಯೋಮಮೂರ್ತಿದ್ವ್ರ್

ಕಖೌ ಸ್ಯಂದನಮಿತ್ಯುಕ್ತಂ ಗಘೌ ಮಂಡಲಕೀರ್ತಿತೌ ।
ಙಕಾರಸ್ಸಾರಥಿಃ ಸಾಕ್ಷಾತ್ ದೇವದೇವಸ್ಯ ಧೀಮತಃ ॥ ೭ ॥

ಚಕಾರೇ ಪಿತರೋ ನಿತ್ಯಂ ಛಕಾರೇ ದೇವದಾನವಾಃ ।
ಜಕಾರೇ ಚ ಜಗತ್ಸರ್ವಂ ಝಕಾರೇ ಬಂಧನಕ್ರಿಯಾ ॥ ೮ ॥

---

೪-೫. ಅ, ಆ ಕಾರಗಳು ಸಕಲ ಕರ್ಮಗಳಿಗೂ ನಿರ್ವಾಹಕಗಳಾಗಿ ದೇವ ದೇವನ ಹೃದಯದಿಂದ ಉತ್ಪನ್ನವಾಗಿರುವುವು. ಇ, ಈ ಕಾರಗಳು, ವಿದ್ಯಾಧಿಪತಿ ಮತ್ತು ಯೋಗೀಶ ರೆನಿಸಿ, ದೇವರ ನಾಭಿಯಿಂದ ಜನಿಸಿರುವುವು. ಉ, ಊ, ಕಾರಗಳು ಸಕಲ ಭಾವಗಳಿಗೂ ಆದಿ ಭೂತಗಳೆನಿಸಿ ಊರುಗಳಿಂದಾಗಿರುವುವು. ಋ, ೠಕಾರಗಳು ನಿಶ್ಚಯ ಮತ್ತು ಸತ್ಯಾತ್ಮಕಗಳಾಗಿ ಕಾಲಿನಿಂದ ಹುಟ್ಟಿರುವುವು.

೬-೭. ಔಕಾರವು ಧರ್ಮಾದಿ ಚತುರ್ವರ್ಗಗಳೆನಿಸಿ ಸಕಲ ಜ್ಞಾನಕ್ಕೂ ನಿಧಿಯಂತಿರುವುದು. ಏ, ಐಕಾರಗಳು ದೇವದೇವನ ಉತ್ಪತ್ತಿಸ್ಥಾನಗಳು. ಅಂ ಅಃ ಎಂಬಲ್ಲಿರುವ ಅನುಸ್ವಾರ ವಿಸರ್ಗಗಳು ಮಹದ್ರೂಪದಿಂದಲೂ, ವ್ಯೋಮರೂಪ ದಿಂದಲೂ ವಿರಾಜಿಸುವುವು. ಕ, ಖ ಈ ಅಕ್ಷರಗಳು ದೇವರ ರಥವಾಗಿರುವುವು. ಗ, ಘ ಈ ಅಕ್ಷರಗಳೇ ಮಂಡಲಗಳು. ಙಕಾರವೇ ಸಾಕ್ಷಾದ್ದೇವನಿಗೆ ಸಾರಥಿಯಾಗಿ ರುವುದು.

೮-೯. ಚಕಾರದಲ್ಲಿ ಸಮಸ್ತ ಪಿತೃಗಳೂ, ಛಕಾರದಲ್ಲಿ ದೇವದಾನವರೂ, ಜಕಾರದಲ್ಲಿ ಸಕಲ ಜಗತ್ತೂ, ಝಕಾರದಲ್ಲಿ ಸಕಲ ಬಂಧನಗಳೂ, ಞಕಾರದಲ್ಲಿ ಆ

ಅಸ್ಯ ಪಾಶನಸಂಭೂತಿರ್ಞಕಾರಃ ಪರಿಹಾಸಯೇತ್ ।
ಟಕಾರಸ್ತ್ರೋಟಯೇತ್ಪಾಶಾಶ್ಠಕಾರಸ್ತಿರ್ಯಗೋ ಭವೇತ್ ॥ ೯ ॥

ಡಕಾರೋನುಗ್ರಹಸ್ಥಾನಂ ಢಕಾರೇಃ ಕ್ರೋಧ ಉಚ್ಯತೇ ।
ಣಕಾರಾ ವಾಲಖಿಲ್ಯಾದ್ಯಾ ಭೃಗ್ವಾದ್ಯಾಶ್ಚ ಮಹಾತಪಾಃ ॥ ೧೦ ॥

ತಕಾರೇ ಸಿದ್ಧಗಂಧರ್ವಾಸ್ಥಕಾರೇ ಪುಣ್ಯಸಂಭವಃ ।
ದಮಃ ಪ್ರೋಕ್ತೋ ದಕಾರೇಣ ಧಕಾರೋ ಬ್ರಹ್ಮಗೋಚರಃ ॥ ೧೧ ॥

ನಕಾರೇ ಸರ್ವತೋನಂತಃ ಪಕಾರೋಕ್ಷರಸಂಭವಃ ।
ಫಕಾರಸ್ತ್ವಶುಭಂ ಹಂತಿ ಬಕಾರೇಣ ಶುಭಂ ಸ್ಮೃತಂ ॥೧೨ ॥

ಭಕಾರೋ ಭೇದಕಃ ಪ್ರೋಕ್ತೋ ಮಕಾರಃ ಸರಿತಾಂ ಪತಿಃ ।
ಯಕಾರೋ ಗ್ರಹನಕ್ಷತ್ರಾಣಿರೇಫಃ ಪ್ರೋಕ್ತಃ ಪ್ರದಾಹಕಃ ॥ ೧೩ ॥

---

ಬಂಧನಗಳ ನಿವಾರಣೋಪಾಯಗಳೂ ಇರುವುವು. ಟಕಾರವು ಸಕಲ ಪಾಶಗಳನ್ನೂ ನಿವಾರಿಸುವುದು. ಠಕಾರವು ತಿರ್ಯಗ್ಜಂತುಗಳನ್ನೊಳಗೊಂಡಿರುವುದು.

೧೦-೧೨. ಡಕಾರವು, ಅನುಗ್ರಹ ಸ್ಥಾನವು. ಢಕಾರದಿಂದ ಕ್ರೋಧೋತ್ಪತ್ತಿಯು. ವಾಲಖಿಲ್ಯಾದಿ ಮಹರ್ಷಿಗಳೂ, ಭೃಗುಋಷಿಯೇ ಮೊದಲಾದ ತಾಪಸರೂ ಣಕಾರದಿಂದ ಹುಟ್ಟಿರುವರು. ತಕಾರದಿಂದ ಸಿದ್ಧಗಂಧರ್ವರೂ, ಥಕಾರದಿಂದ ಪುಣ್ಯಕರ್ಮಗಳೂ, ದಕಾರದಿಂದ ದಮವೂ, ಧಕಾರದಿಂದ ಬ್ರಹ್ಮಜ್ಞಾನವೂ, ನಕಾರದಿಂದ ಅನಂತವಾದ ಸಕಲ ವಸ್ತುಗಳೂ, ಪಕಾರದಿಂದ ನಾಶರಹಿತವಾದ ವಸ್ತುಗಳೂ, ಫಕಾರದಿಂದ ಅಮಂಗಳ ನಾಶವೂ, ಬಕಾರದಿಂದ ಮಂಗಳವೂ ಆವಿರ್ಭವಿಸಿರುವುವು.

೧೩-೧೪. ಭಕಾರವು ಸರ್ವವಸ್ತು ಭೇದಕವಾಗಿರುವುದು. ಮಕಾರವು ಸಮುದ್ರಾತ್ಮಕವಾದದ್ದು. ಯಕಾರದಿಂದಲೇ ಸಕಲ ಗ್ರಹನಕ್ಷತ್ರಗಳ ಆವಿರ್ಭಾವ

ಲಕಾರೋ ವಿಷಯಾಸ್ವಾದೀ ವಕಾರಸ್ತು ಭವೋದ್ಭವಃ ।
ಶಕಾರಶ್ಶೋಷಯೇದ್ದೋಷಾನ್ ಷಕಾರೋ ಬೀಜಮುಚ್ಯತೇ ॥ ೧೪ ॥

ಸಕಾರೇ ಛಂದಸಾಂ ಜನ್ಮ ಹಕಾರೇ ಬ್ರಹ್ಮಶಾಶ್ವತಂ ।
ಕ್ಷತ್ರಂ ಪರಮನಿರ್ವಾಣಮಭಯಂ ಕಾಮದಂ ಪ್ರಭುಂ ॥ ೧೫ ॥

ಯತ್ತದೇಕಾಕ್ಷರಂ ಜ್ಞಾನಂ ಶಾಂತಂ ಸಮ್ಯಕ್ಪ್ರತಿಷ್ಠಿತಂ ।
ಕ್ಷಕಾರೇಣ ಕ್ಷಯಂ ಯಾತಿ ಜಗತ್ಸ್ಥಾವರಜಂಗಮಂ ॥ ೧೬ ॥

ಅಕ್ಷಯಶ್ಚಾವ್ಯಯಶ್ಚೈವ ಕ್ಷಕಾರಃ ಪರಿಪಠ್ಯತೇ ।
ಶುಭಾಹ್ಯೇತೇ ತಪಃ ಪ್ರೋಕ್ತಾ ಬೀಜಾಃ ಸೂರ್ಯಸ್ಯ ನಿತ್ಯಶಃ ॥ ೧೭ ॥

ಯಥಾ ಕರ್ಮಣಿ ಯೋಗೇನ ವರ್ಣಾಹ್ಯೇತೇ ಪ್ರಕೀರ್ತಿತಾಃ ।
ತಥಾ ಫಲಪ್ರದಾಸ್ಸರ್ವೇ ಭವಂತಿ ಪರ್ಯುಪಾಸಿತಾಃ ॥ ೧೮ ॥

---

ರೇಫವೇ ದಾಹಕವಾಗಿರುವುದು. ವಿಷಯ ಸುಖಗಳನ್ನು ಅನುಭವಿಸುವುದೇ ಲಕಾರ. ಸಕಲ ಸಂಸಾರಗಳ ಉತ್ಪತ್ತಿಯೇ ವಕಾರದಿಂದ. ಸಕಲ ದೋಷಗಳನ್ನೂ ಶಕಾರವು ನಾಶಮಾಡುವುದು. ಸಕಲ ಕಾರ್ಯಗಳಿಗೂ ಷಕಾರವು ಕಾರಣಭೂತವಾಗಿದೆ.

೧೫-೧೬. ವೇದಗಳು ಗೋಚರಿಸಿದುದು ಸಕಾರದಲ್ಲಿ. ಶಾಶ್ವತನಾದ ಬ್ರಹ್ಮನ ವಾಸಸ್ಥಾನವೇ ಹಕಾರ. ಪರಮ ಮೋಕ್ಷ ರೂಪವಾಗಿ, ಭಯ ರಹಿತನಾಗಿರುವ ಪ್ರಭುವೇ ಕ್ಷಕಾರ. ಅದೇ ಜ್ಞಾನದಾಯಕವಾಗಿಯೂ ಶಾಂತಿಪ್ರದವಾಗಿಯೂ ಇರುವ ಅಕ್ಷರ. ಅದೇ ಕ್ಷಕಾರದಲ್ಲಿಯೇ ಈ ಸ್ಥಾವರ ಜಂಗಮಾತ್ಮಕವಾದ ಜಗತ್ತೆಲ್ಲಾ ನಾಶವನ್ನೈದುವುದು.

೧೭-೧೮. ಈ ಕ್ಷಕಾರವೇ ನಾಶರಹಿತವಾದದ್ದಾಗಿಯೂ, ಶಾಶ್ವತ ಸ್ಥಿತಿಯುಳ್ಳದ್ದಾಗಿಯೂ ಇರುವುದು. ಎಲೈ ರಾಜನೆ, ಈ ರೀತಿ ಸೂರ್ಯದೇವನ ಬೀಜಾಕ್ಷರ ಸ್ವರೂಪಗಳನ್ನೂ ಅವುಗಳಿಗಿರುವ ಶಕ್ತಿಯನ್ನೂ ನಿನಗೆ ತಿಳಿಸಿರುವೆನು. ಯಾವಯಾವ ಅಕ್ಷರಗಳು ಯಾವ ಕಾರ್ಯಗಳಲ್ಲಿ ನಿಯುಕ್ತವಾಗಿರುವುವೋ, ಅದೇ ವಿಧವಾದ ಫಲಗಳನ್ನು ಅವು ಭಕ್ತರಿಗೆ ಕೊಡತಕ್ಕದ್ದಾಗುವುವು.

॥ ಬೃಹದ್ಬಲ ಉವಾಚ ॥

ಯದುಕ್ತಂ ವರ್ಣಜಾತೀನಾಂ ಫಲಂ ಕರ್ಮ ಸಮುದ್ಭವಂ ।
ತನ್ನಶಕ್ಯಂ ಸಮಾಖ್ಯಾತುಂ ಚಿತ್ತೇನಾಸ್ಥಿರವೃತ್ತಿನಾ ॥ ೧೯ ॥

ದೀಕ್ಷಾವಸಾನೇ ಸಾಂಬಸ್ಯ ಯದುಕ್ತಂ ಭಾಸ್ಕರೇಣ ತು ।
ತನ್ಮೇ ಬ್ರೂಹಿ ಮಹಾಮಂತ್ರಂ ಸರ್ವಕಾಮಾರ್ಥಸಾಧನಂ ॥ ೨೦ ॥

॥ ವಸಿಷ್ಠ ಉವಾಚ ॥

ಶೃಣು ರಾಜನ್ಮಹಾಮಂತ್ರಂ ಭೂತಸಂಹಾರಕಾರಕಂ ।
ಉತ್ಪತ್ತಿವ್ಯಂಜಕಂ ಚೈವ ಜಗತಶ್ಚ ಪರಾಭವಂ ॥ ೨೧ ॥

ಭಾಸ್ಕರಂ ಕರ್ಣಿಕಾಭೂತಂ ವ್ಯಾಪಕಂ ಪೂರ್ವಪಶ್ಚಿಮೇ ।
ಯಾಮ್ಯೇ ಸೌಮ್ಯೇ ತಥಾ ವಿಷ್ಣುರ್ಬ್ರಹ್ಮಾಐಶಾನನೈರೃತೇ ॥ ೨೨ ॥

---

೧೯-೨೦. ಹೀಗೆ ಹೇಳಿದ ವಸಿಷ್ಠಮಹರ್ಷಿಗಳ ಮಾತುಗಳನ್ನು ಕೇಳಿ ರಾಜನಾದ ಬೃಹದ್ಬಲನು "ಮಹರ್ಷಿಗಳೇ, ವರ್ಣಜಾತಿಗಳಿಂದ ಹುಟ್ಟುವ ಫಲಾಫಲ ಗಳನ್ನು ಕೇಳಿದೆನು. ಚಂಚಲ ಮನಸ್ಕರಾದವರಿಂದ ಇದನ್ನು ತಿಳಿಸಲು, ಮತ್ತು ತಿಳಿಯಲು ಸಾಧ್ಯವಾಗುವುದೇ ಆದರೆ, ಭಗವಂತನಾದ ಸೂರ್ಯದೇವನು ದೀಕ್ಷಾವ ಸಾನದಲ್ಲಿ ಸಾಂಬನಿಗೆ ಬೋಧಿಸಿದ, ಸರ್ವ ಕಾಮಪ್ರದವಾದ ಮಹಾ ಮಂತ್ರವನ್ನು ನನಗೆ ಉಪದೇಶಿಸಬೇಕು" ಎಂದು ಮತ್ತೆ ಕೇಳಿಕೊಂಡನು.

೨೧-೨೨. ಆಗ ವಸಿಷ್ಠಮಹರ್ಷಿಯು ಬೃಹದ್ಬಲನಿಗೆ ಹೀಗೆ ಉಪದೇಶಿಸ ತೊಡಗಿದನು. "ಅಯ್ಯಾ ರಾಜನೇ ನೀನು ಕೇಳಿದಂತೆ ಆ ಮಹಾ ಮಂತ್ರವನ್ನು ಉಪದೇಶಿಸುವೆನು ಕೇಳು. ಅದು ಸಮಸ್ತ ಭೂತಸಂಹಾರಕಾರಕವಾದದ್ದು. ಅಲ್ಲದೆ ಜಗತ್ತಿನ ಸೃಷ್ಟಿ, ಸ್ಥಿತಿಗಳಿಗೆ ಮೂಲಕಾರಣವಾದದ್ದು. ಒಂದು ಕಮಲದಲ್ಲಿ ಮಧ್ಯದ ಕರ್ಣಿಕೆಯಂತೆ ಸೂರ್ಯದೇವನು ಪೂರ್ವ ಪಶ್ಚಿಮ ದಿಕ್ಕುಗಳನ್ನು ವ್ಯಾಪಿಸಿ ನಿಂತಿರು ವನು. ಬ್ರಹ್ಮ ವಿಷ್ಣ್ವಾದಿಗಳು, ದಕ್ಷಿಣೋತ್ತರಗಳಲ್ಲಿ ನೆಲಸಿರುವರು. ಅಲ್ಲದೇ

**ರುದ್ರಮಾಗ್ನೇಯಮಾಯುಮೇಕ್ಯ ಪದ್ಮಮೇತತ್ಪ್ರಕೀರ್ತಿತಂ ।**
**ಸರ್ವಾತ್ಮಕಮಹಾಮಂತ್ರಮುದ್ಧೃತಂ ಸಾಂಬಕಾರಣಂ ॥ ೨೩ ॥**

**ಓಂ ಆಂ ಊಂ ಹೂಂ ಜೂಂ ದುಂ ದೂಂ ಓಂ-ಓಂ**

**ಏತತ್ತು ಪರಮಂ ಗುಹ್ಯಮೇತತ್ತು ಪರಮಂ ಪದಂ ।**
**ಏತತ್ತು ಪರಮಂ ಜ್ಞಾನಮೇತತ್ತು ಪರಮಂ ಪದಂ ॥ ೨೪ ॥**

**ವ್ಯಾಪಕಾಭಯಸಂಯುಕ್ತೋ ಯದಾಹ್ಯಾಯುಃ ಪ್ರದೋ ರವಿಃ ।**
**ರುದ್ರಯುಕ್ತೋ ವ್ಯಾಧಿಹರೋ ಧನದೋ ವಿಷ್ಣುಯೋಜಿತಃ ॥ ೨೫ ॥**

**ಸರ್ವಾನ್ ಸಂಸಾಧಯೇದರ್ಥಾನ್ ಯೋಜಿತಃ ಪರಮೇಷ್ಠಿನಾ ।**
**ಆಕಾಶಮಧ್ಯಪಾತಾಲಮಂಜನಂ ರೋಚನಾದಿಕಂ ॥ ೨೬ ॥**

---

ರುದ್ರನೂ, ಇತರ ದೇವತೆಗಳೂ ಈಶಾನ್ಯಾದಿ, ಸಕಲ ದಿಕ್ಕುಗಳಲ್ಲಿಯೂ ತೋರುವರು. ಈಗ ಹೇಳುವ ಈ ಮಹಾಮಂತ್ರವು ಸರ್ವದೇವಾತ್ಮಕವಾಗಿರುವುದರಿಂದಲೇ ಸೂರ್ಯದೇವನು ಸಾಂಬನಿಗೆ ಉಪದೇಶಮಾಡಿದನು.

೨೪-೨೫. ಮೇಲೆಹೇಳಿದ ಮಹಾಮಂತ್ರವೇ ದಿವ್ಯಮಂತ್ರವೆನಿಸಿದ ಸೂರ್ಯಮಂತ್ರ. ಇದು ಬಹಳ ಗೂಢವಾದದ್ದು. ಬಹು ಪವಿತ್ರವಾದದ್ದು ಮತ್ತು ಜ್ಞಾನಪ್ರದವಾದದ್ದು. ಈ ಮಂತ್ರ ಪುರಶ್ಚರಣೆಯಿಂದ ಭಗವಂತನಾದ ಸೂರ್ಯದೇವನು ಭಕ್ತರಿಗೆ ಅಭಯವನ್ನೂ, ಆಯುಸ್ಸನ್ನೂ ದಯಪಾಲಿಸುವನು. ಸರ್ವದಾ ರುದ್ರಯುಕ್ತನಾಗಿರುವುದರಿಂದ ಭಕ್ತರ ಸಕಲ ವ್ಯಾಧಿಗಳನ್ನೂ ನಾಶಗೈಯ್ಯುವನು. ವಿಷ್ಣುಯುಕ್ತನಾಗಿರುವುದರಿಂದ ಐಶ್ವರ್ಯಪ್ರದನಾಗುವನು.

೨೬-೨೮. ಈ ಮಂತ್ರದಲ್ಲಿ ಬ್ರಹ್ಮಸಂಬಂಧವಿರುವುದರಿಂದ ಸಕಲ ಅರ್ಥಗಳನ್ನೂ, ಲೋಕತ್ರಯಗಳ ಸಾರಾಸಾರ ವಸ್ತುಗಳ ಪರಿಚಯವನ್ನೆಲ್ಲಾ ಪಡೆಯಬಹುದು. ರುದ್ರಸಂಬಂಧವಿರುವುದರಿಂದ ಪ್ರಪಂಚದ ಜನತೆಗೆ ಭಯಜನಕಸಾಮರ್ಥ್ಯವನ್ನು ಪಡೆಯಬಹುದು. ವಿಷ್ಣುಸಂಬಂಧವಿರುವುದರಿಂದ ಬೃಹಸ್ಪತಿಯ ಮಾತು

ರುದ್ರೇಣಾತ್ಯಂತಸಂರುದ್ಧಃ ಶತ್ರೂಣಾಂ ಭಯವರ್ಧನಃ ।
ವಿಷ್ಣುನಾ ಸ್ತಂಭಯೇತ್ಸೈಪ್ರಂ ವಾಚಂ ವಾಚಸ್ಪತೇರಪಿ ॥ ೨೭ ॥

ನವ ವರ್ಣಾಃ ಶರೀರಸ್ಯ ಭಾಸ್ಕರಾಸ್ತ್ರಂ ಚ ದುರ್ಧರಂ ।
ಷಡಂಗಂ ಸಂಪ್ರವಕ್ಷ್ಯಾಮಿ ತನ್ನಿಬೋಧ ಯಥಾಕ್ರಮಂ ॥ ೨೮ ॥

ಓಂ ಡುಂ ಹೂಂ ಹೃದಯಾಯನಮಃ
ಓಂ ಕ್ಷೂಂ ಓಂ ಆಂಶಿರಸಿ
ಓಂ ಊಂ ಹೂಂ ಆಂ ಕ್ಷೂಂ ಹೂಂ ಡಂ ಓಂ ಶಿಖಾಯಾಂ ।
ಓಂ ಓಂ ಕ್ಷೂಂ ಓಂ ಕವಚಾಯ ಹುಂ
ಓಂ ಹೂಂ ಓಂ ಕ್ಷೂಂ ನೇತ್ರೇ

ಓಂ ಕ್ಷೂಂ ನೇತ್ರಂ ಬ್ರಹ್ಮರುದ್ರೋ ವಿಷ್ಣುರುದ್ರಸ್ತಥೈವ
ಹೃದಯಂ ದೇವದೇವಸ್ಯ ಭಾಸ್ಕರಸ್ಯ ಜಗತ್ಪತೇಃ ॥ ೨೯ ॥

ಸ್ವಯಂ ಭೂರ್ವ್ಯಾಪಕೋ ದೇವಶ್ಚಾತೇ ಚೈವ ವ್ಯವಸ್ಥಿತಃ ।
ತ್ರೈಲೋಕ್ಯಸ್ಯ ಸದಾ ಪೂಜ್ಯಂ ಶಿರೋ ದೇವಸ್ಯ ಕೀರ್ತಿತಂ ॥ ೩೦ ॥

---

ಗಳನ್ನು ಕೂಡ ಪ್ರತಿಭಟಿಸಿ, ಅವನನ್ನೂ ಮಂಕುಮಾಡಬಹುದು. ಹಾಗೆಯೇ, ಎಲೈ ರಾಜನೇ, ಸೂರ್ಯಾಸ್ತ್ರದಲ್ಲಿ ಒಂಬತ್ತು ವರ್ಣಗಳಿರುವುವು. ಅದಕ್ಕೆ ಆರು ಅಂಗಗಳಿರುವುವು. ಅದನ್ನು ತಿಳಿಸುವೆನು ಕೇಳು.

೨೯. ಮೇಲೆ ಹೇಳಿದ ಷಡಂಗಗಳೂ ನ್ಯಾಸಕ್ಕೆ ಅರ್ಹವಾದವುಗಳು. ಇನ್ನು ಮುಂದೆ ದೇವದೇವನಾದ ಭಾಸ್ಕರನ ಹೃದಯವನ್ನು ನಾನು ವಿವರಿಸುವೆನು.

೩೦. ಭಾಸ್ಕರನ ಶಿರಸ್ಸ್ಥಾನವು ಸ್ವಯಂಭೂ ನಾಮಕನಾದ ಬ್ರಹ್ಮನಿಂದ ವ್ಯಾಪ್ತವಾಗಿದೆ. ಆದ್ದರಿಂದಲೇ ಅದು ತ್ರಿಲೋಕಕ್ಕೂ ಪೂಜ್ಯವಸ್ತುವೆನಿಸಿದ್ದಾಗಿರುವುದು.

ರುದ್ರೋ ವಿಷ್ಣುಸ್ತಥಾ ಬ್ರಹ್ಮಾ ರವೇರಾದ್ಯಂತಸಂಸ್ಥಿತಾಃ ।
ದುಃಸಹಾಂ ದಾಹನೀಮೇತಾಂ ಶಿಖಾಮಾಹುರ್ದಿವಸ್ಪತೇಃ ॥ ೩೧ ॥

ವ್ಯಾಪಕೋ ವಿಷ್ಣುಸಹಿತಆದಿತ್ಯಾಂತೇ ವ್ಯವಸ್ಥಿತಃ ।
ಕವಚಂ ಸರ್ವವಿಘ್ನಾನಾಂ ನಾಶನಂ ದೇವನಿರ್ಮಿತಂ ॥ ೩೨ ॥

ಆದ್ಯಂತೇಽವಸ್ಥಿತಃ ಸೂರ್ಯೋ ಬ್ರಹ್ಮಾವ್ಯಾಪಕಮಧ್ಯತಃ ।
ಸೃಷ್ಟಿಸಂಹಾರಕರ್ತಾ ಚ ಹ್ಯಸ್ತ್ರಮೇತದುದಾಹೃತಂ ॥ ೩೩ ॥

ನೇತ್ರಮೇಕಂ ಸಮುದ್ದಿಷ್ಟಮೇತದಕ್ಷರಮವ್ಯಯಂ ।
ಯುಗಾಂತಾನಲವರ್ಣಾಭಮನೇಕಾದಿತ್ಯವರ್ಚಸಂ ॥ ೩೪ ॥

ಏವಂ ತದ್ಭಾಸ್ಕರಂ ಜ್ಞೇಯಂ ಷಡ್ವಿಧಂ ಸಂಪ್ರಕೀರ್ತಿತಂ ।
ಪೂರ್ವಂ ದ್ವಾದಶಧಾ ಪ್ರೋಕ್ತಮೇತತ್ಸೂರ್ಯೇಣ ಭಾಷಿತಂ ॥ ೩೫ ॥

---

೩೧-೩೨. ಭಾಸ್ಕರನ ಶಿಖೆಯು ಆದಿಯಲ್ಲಿ ರುದ್ರನೂ, ಮಧ್ಯದಲ್ಲಿ ವಿಷ್ಣುವೂ ಅಂತ್ಯದಲ್ಲಿ ಬ್ರಹ್ಮನೂ. ನೆಲಸಿರುವನು. ಈ ಶಿಖೆಯು ಜ್ವಾಲೆಯು ಲೋಕ ದಾಹಕ ವಾಗಿರುವುದು. ಹಾಗೆಯೇ ಸೂರ್ಯದೇವನ ಕವಚವು ವಿಷ್ಣುವ್ಯಾಪ್ತವಾಗಿರುವುದು. ಸೂರ್ಯನ ಆವರಣವಾಗಿ ಈ ಕವಚವು ದೇವ ನಿರ್ಮಿತವಾದದ್ದಾಗಿ, ಸರ್ವ ವಿಘ್ನ ಗಳನ್ನೂ ನಾಶಪಡಿಸತಕ್ಕದ್ದಾಗಿದೆ.

೩೩-೩೪. ಹಾಗೆಯೇ ಸೂರ್ಯದೇವನ ಅಸ್ತ್ರದಲ್ಲಿ, ಆದ್ಯಂತದಲ್ಲಿ ಸೂರ್ಯ ದೇವನೂ, ಮಧ್ಯದಲ್ಲಿ ಬ್ರಹ್ಮನೂ ವ್ಯಾಪಿಸಿರುವರು. ಆ ಅಸ್ತ್ರವು ಸೃಷ್ಟಿ, ಸಂಹಾರ, ಗಳನ್ನೂ, ನಡೆಸುವ ಶಕ್ತಿಯುಳ್ಳದ್ದಾಗಿರುವುದು. ಹಾಗೆಯೇ ಸೂರ್ಯದೇವನ ಒಂದು ನೇತ್ರವು ನಾಶ ರಹಿತವಾಗಿಯೂ, ಪ್ರಳಯಕಾಲದ ಅಗ್ನಿಯಂತೆ ತೇಜಸ್ಸುಳ್ಳದ್ದಾ ಗಿಯೂ, ಅನೇಕಸೂರ್ಯರ ಕಾಂತಿಯನ್ನು ಮೀರಿಸಿದ್ದಾಗಿಯೂ ಇರುವುವು.

೩೫-೩೬. ಹೀಗೆ ಸೂರ್ಯನ ಅಂಗಗಳು ಆರು ವಿಧಗಳೆಂದು ಹೇಳಿದ್ದಾಯಿತು. ಇದೇ ಅಂಗಗಳನ್ನೇ ಹಿಂದೆ ಹನ್ನೆರಡು ವಿಧಗಳಾಗಿ ಸೂರ್ಯದೇವನು ವಿವರಿಸಿರು

ಲಕ್ಷಮೇಕೈಕಮಾವರ್ತ್ಯ ನ ಚಾಗಸ್ತ್ಯಾನುಪೂರ್ವಶಃ ।
ತಥೈವ ಮಂತ್ರಂ ದೇವಸ್ಯ ಪುನರ್ಲಕ್ಷಂ ಸಮಾಹಿತಃ ॥ ೩೬ ॥

ತಿಲಾಂಸ್ತ್ರಿಮಧುರೋಪೇತಾನ್ ಹೋಮಯೇಜ್ಜಾತವೇದಸಂ ।
ಭಾಸ್ಕರಾಸ್ತ್ರೇಣ ಜುಹುಯಾತ್ಸಾಯಂ ಸ ಹವಿಷಾ ಸಮಂ ॥ ೩೭ ॥

ಹೋಮಾವಸಾನೇ ಚ ಪುನರ್ಹೋಮಭಾಗೋ ವಿಧೀಯತೇ ।
ತತಃ ಕೃತಾರ್ಥತಾಮೇತಿ ಸಾಧಕೋ ದೇವದರ್ಶನಾತ್ ॥ ೩೮ ॥

ತ್ರಿಕಾಲವೇದೀ ತತ್ತ್ವಜ್ಞೋ ಗುಣತ್ರಯವಿವರ್ಜಿತಃ ।
ಪ್ರಾಪ್ನುಯಾತ್ಪರಮಂ ಸ್ಥಾನಮನಿಲಾನಲವರ್ಜಿತಂ ॥ ೩೯ ॥

ಸ ಏವ ಪೂಜ್ಯತೇ ಮಂತ್ರೀ ದೇವವದ್ಭುವಿ ಮಾನವೈಃ ।
ತ್ರಾತಾ ಸ ಏವ ಲೋಕಾನಾಂ ವ್ಯಾಧಿದುಃಖವಿನಾಶನಃ ॥ ೪೦ ॥

---

ವನು. ಇದೇ ಸೂರ್ಯಾಸ್ತ್ರದ ಮಂತ್ರಗಳನ್ನು ಲಕ್ಷ ಸಂಖ್ಯೆಯಲ್ಲಿ ಜಪ ಮಾಡುವುದು ಪಾಪನಿವಾರಕವು.

೩೭-೩೮. ಅದೇ ಅಸ್ತ್ರ ಮಂತ್ರಗಳಿಂದ, ತಿಲ, ಪಾಯಸ ಸಮೇತವಾದ ಹವಿಸ್ಸನ್ನು ಅಗ್ನಿಯಲ್ಲಿ ಹೋಮ ಮಾಡಬೇಕು. ಹೋಮಾಂತ್ಯದಲ್ಲಿ ಸ್ವಿಷ್ಟ ಕೃದ್ಧೋಮ ಮಾಡಿ ಹೋಮದ ಸಾರ್ಥಕ್ಯವನ್ನು ಪಡೆದು, ದೇವ ದರ್ಶನದಿಂದ ಕರ್ಮಸಮಾಪ್ತಿ ಮಾಡಬೇಕು.

೩೯. ಈ ರೀತಿ ಭಾಸ್ಕರಾಸ್ತ್ರಮಂತ್ರಪುರಶ್ಚರಣೆ ಮಾಡಿ ಹೋಮ ಮಾಡಿದ ವನು ಭೂತ ಭವಿಷ್ಯದ್ವರ್ತಮಾನಗಳಲ್ಲಿ ನಡೆಯುವ ಸಕಲ ವಿಷಯಗಳನ್ನೂ ತಿಳಿದವನಾಗುವನು. ಗುಣತ್ರಯಶೂನ್ಯನಾಗಿ, ಗಾಳಿ, ಬೆಂಕಿ ಇವೇ ಮೊದಲಾದ ಪಂಚ ಭೂತಗಳಿಂದ ವರ್ಜಿತನಾದ ಪರಮ ಸ್ಥಾನವನ್ನು ಅಂದರೆ ಆನಂದ ಮಯವಾದ ಬ್ರಹ್ಮಸ್ವರೂಪವನ್ನು ಹೊಂದುವನು.

೪೦-೪೩. ಆ ಮಂತ್ರಜ್ಞನು ಭೂಲೋಕದಲ್ಲಿ ದೇವರಂತೆ ಪೂಜಿಸಲ್ಪಡುವನು. ಮತ್ತು ಜನರ ದುಃಖಾದಿಗಳನ್ನೂ ನಿವಾರಿಸಿ ಅವರಿಗೆ ರಕ್ಷಕನೂ ಆಗುವನು

**ಅಪ್ರಮೇಯಮಿದಂ ಶಾಸ್ತ್ರಂ ಪುರಾಣಂ ಪೂರ್ವಚೋದಿತಂ ।**
**ದ್ವಾಪರೇ ನಾರದೇನೈವ ಪುನಃ ಸಾಂಬಾಯ ಭಾಷಿತಂ ॥ ೪೧**

**ತತಃಪ್ರಭೃತಿ ಲೋಕೇಷು ಪ್ರವೃತ್ತಂ ಭಾಸ್ಕರಧ್ವಜಂ ।**
**ಸರ್ವಪಾಪಹರಂ ಪುಣ್ಯಂ ಸರ್ವಕಾಮಪ್ರದಾಯಕಂ ॥ ೪೨ ॥**

---

ಇದೇ ಮಂತ್ರವನ್ನು ಹಿಂದೆ ದ್ವಾಪರಯುಗದಲ್ಲಿ ನಾರದ ಮಹರ್ಷಿಯೇ ಪ್ರಚಾರ ಮಾಡಿ ಸಾಂಬನಿಗೆ ಉಪದೇಶಿಸಿದನು. ಆದರಿಂದಲೇ ಇಂದೂ ಈ ಭಾಸ್ಕರಾಸ್ತ್ರ ಮಂಡಲವು ಪ್ರಚಾರಕ್ಕೆ ಬಂದಿರುವುದು. ಇದು ಸರ್ವ ಪಾಪಹರವಾದದ್ದು. ಎಂಬುದ ರಲ್ಲಿ ಸಂದೇಹವಿಲ್ಲ. ಎಂದು ವಸಿಷ್ಠಮಹರ್ಷಿಗಳು ಬೃಹದ್ಬಲರಾಜನಿಗೆ ಸೂರ್ಯಮಂತ್ರ ಮಹಿಮೆಯನ್ನು ವಿವರಿಸಿದರು.

ಇಲ್ಲಿಗೆ ಸಾಂಬಪುರಾಣದ ನಲವತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕಚತ್ವಾರಿಂಶೋಽಧ್ಯಾಯಃ



॥ ವಸಿಷ್ಠ ಉವಾಚ ॥

ಅತಃ ಪರಂ ತು ದಿಕ್ಪಾಲಾನ್ ಪೂರ್ವಾನ್ ಪ್ರಭೃತಿ ಪೂಜಯೇತ್ ।

| | |
|---|---|
| ಓಂ ವಿಕಟಾಯನಮಃ | ಓಂ ವಾಮನಾಯನಮಃ |
| ಓಂ ಲಂಬೋದರಾಯನಮಃ | ಓಂ ಹೇಮಗರ್ಭಾಯನಮಃ |
| ಓಂ ಭೀಮವೇಗಾಯನಮಃ | ಓಂ ಸೌಮ್ಯರೂಪಾಯನಮಃ |
| ಓಂ ಪಂಚಾತ್ಮಕಾಯನಮಃ | ಓಂ ವಿದೇಹಾಯನಮಃ |
| ಓಂ ಧರ್ಮವಿಗ್ರಹಾಯನಮಃ | ಓಂ ಅಹಿರ್ಬುಧ್ನ್ಯಾಯನಮಃ |
| ಓಂ ಕಾಲಾಯನಮಃ | ಓಂ ಉಪಕಾಲಾಯನಮಃ |

ಪೂರ್ವಸ್ಯಾಂ ದಿಶಿ ಚೈತಾನ್ ಪೂಜಯಿತ್ವಾ ।
ಪಂಚರೂಪಕೈಃ ಖಂಡಾದ್ಯೈಃ ಪ್ರತ್ಯೇಕಂ ।
ಪಾತ್ರೇಣ ಬಲಿರ್ದಾತವ್ಯಃ ।

---

ಅಲ್ಲಿಂದ ಮುಂದೆ ಸಕಲ ದಿಕ್ಪಾಲಕರಿಗೂ ಪೂಜೆ ಮಾಡಬೇಕು. ಅದರಲ್ಲಿ ಪೂರ್ವಾದಿಯಾಗಿ ಪ್ರಾರಂಭಿಸಿ ಪೂರ್ವದಿಕ್ಕಿನಲ್ಲಿರುವ ಈ ದಿಕ್ಪಾಲಕರಿಗೆ ಅರ್ಚನೆ ಮಾಡಬೇಕು.

ಹೀಗೆ ಪೂರ್ವ ದಿಕ್ಕಿನಲ್ಲಿರುವ ದೇವತೆಗಳನ್ನು ಪೂಜಿಸಿ, ಐದು ವಿಧವಾದ ದ್ರವ್ಯಗಳಿಂದ ಕೂಡಿದ ಖಂಡರೂಪವಾದ (ಚೂರುಚೂರಾಗಿರುವ) ಬಲಿಯನ್ನು ಆ ದೇವತೆಗಳಿಗೆ ಸಮರ್ಪಿಸಬೇಕು.

## ದಕ್ಷಿಣಸ್ಯಾಂ ದಿಶಿ

ಓಂ ಅಘೋರಾಯನಮಃ ಓಂ ಬಟುಕಾಯನಮಃ
ಓಂ ಊರ್ಧ್ವಶಿರೋಮಾಯನಮಃ ಓಂ ಮೃತ್ಯುಹಸ್ತಾಯನಮಃ
ಓಂ ಮೇಘನಾದಾಯನಮಃ ಓಂ ಕೌಸ್ತುಭಾಯನಮಃ
ಓಂ ಧೂಮಕಾಲಾಯನಮಃ ಓಂ ಉಗ್ರಜಿಹ್ವಾಯನಮಃ
ಓಂ ಮಾಸಮೂರ್ತಯೇನಮಃ ಓಂ ವಲ್ಕಲಿನೇನಮಃ
ಓಂ ದಂಡಿನೇನಮಃ ಓಂ ಕರ್ಮಸಾಕ್ಷಿಣೇನಮಃ

ಏತೇಷಾಂ ಮತ್ಸ್ಯಮಾಂಸಧೂಲಿಕಾದಿಭಿರ್ಬಲಿರ್ದಾತವ್ಯಃ ।

## ಪಶ್ಚಿಮಾಯಾಂ ದಿಶಿ

ಓಂ ಸೂರ್ಯಮೂರ್ತಯೇನಮಃ ಓಂ ಗುಹಾಶಯಾಯನಮಃ
ಓಂ ಟಂಕಪಾಣಾಯನಮಃ ಓಂ ಮಹಾಬಲಾಯನಮಃ
ಓಂ ವಾಯುಭಕ್ಷಾಯನಮಃ ಓಂ ಪಂಚಮೂರ್ತಯೇನಮಃ
ಓಂ ಅಗ್ನಿಪಾಶಾಯನಮಃ ಓಂ ಪಶುಪತಯೇನಮಃ
ಓಂ ಮಹಾಶಾಯನಮಃ ಓಂ ಕೃಷ್ಣದೇಹಾಯನಮಃ
ಓಂ ಅಮೋಘಾಯನಮಃ ಓಂ ಅಚ್ಯುತಾಯನಮಃ

ಏತೇಷಾಂ ಕ್ಷೀರಘೃತಪೂರ್ಣಪಾತ್ರೇಣ ಬಲಿರ್ದಾತವ್ಯಃ ।

---

ದಕ್ಷಿಣದಿಕ್ಕಿನಲ್ಲಿರುವ ಈ ದೇವತೆಗಳಿಗೆ ಪೂಜೆಮಾಡಿ, ಮೀನು ಮಾಂಸದಿಂದ ಬೆರೆತ ಬೂದುಬಣ್ಣದ ಬಲಿಯನ್ನು ಅರ್ಪಿಸಬೇಕು.

ಈ ಪಶ್ಚಿಮ ಭಾಗಸ್ಥವಾದ ಈ ದೇವತೆಗಳಿಗೆ ಹಾಲು, ತುಪ್ಪ ಇವುಗಳಿಂದ ತುಂಬಿದ ಪಾತ್ರೆಗಳಲ್ಲಿ ಬಲಿಯನ್ನು ಕೊಡಬೇಕು.

## ಉತ್ತರತಃ

ಓಂ ಶಿಖಿಲಿಂಗಿನೇನಮಃ
ಓಂ ಯೋಗೇಶ್ವರಾಯನಮಃ
ಓಂ ತ್ರಿಶಾಖಾಯನಮಃ
ಓಂ ಶತಕ್ರತವೇನಮಃ
ಓಂ ಪಂಚಶಿಖಾಯನಮಃ
ಓಂ ಸಹಸ್ರಕಿರಣಾಯನಮಃ
ಓಂ ಸುವರ್ಣಕೇತನೇನಮಃ
ಓಂ ಪದ್ಮಕೇತನೇನಮಃ
ಓಂ ಯಜ್ಞರೂಪಾಯನಮಃ
ಓಂ ಭುವನಾಧಿಪತಯೇನಮಃ

ಓಂ ಪದ್ಮನಾಭಾಯನಮಃ

ಏತೇಷಾಂ ಸುವರ್ಣರಜತವಸ್ತ್ರೈರ್ಬಲಿದಾನಂ ।

ಏವಂ ಯಃ ಕುರುತೇ ರಾಜನ್ ಪೂಜಾಂ ಶಾಸ್ತ್ರಪ್ರಚೋದಿತಾಂ ।
ತಸ್ಯ ಸರ್ವೇ ಕ್ರಿಯಾರಂಭಾಃ ಸಫಲಾಃ ಪ್ರೇತ್ಯ ಚೇಹ ಚ ।
ನಾನ್ಯಚ್ಛಾಸ್ತ್ರಂ ಸಮುದ್ದಿಷ್ಟಂ ಭಾನೋಃ ಪೂಜಾನಿವೇದನೇ ।
ಪುರಾಣೋಕ್ತಾಮಿಮಾಂ ರಾಜನ್ ಸರ್ವವೇದೋಪಬೃಂಹಿತಾಂ ।
ಯೇ ಕೇಚಿದನ್ಯತಂತ್ರಜ್ಞಾಃ ಪೂಜಾಂ ಕುರ್ವಂತಿ ಮೋಹಿತಾಃ ।

---

ಈ ದೇವತೆಗಳಿಗೆ, ಚಿನ್ನ, ಬೆಳ್ಳಿ, ವಸ್ತ್ರ ಇವುಗಳಿಂದ ಬಲಿದಾನ ಮಾಡಬೇಕು.

ಎಲೈ ರಾಜನೇ, ಈ ರೀತಿ ಯಾರು ಶಾಸ್ತ್ರೋಕ್ತವಾಗಿ ದಿಕ್ಪಾಲಕರ ಪೂಜೆ ಮಾಡುವರೋ, ಅವರ ಸಕಲ ಕಾರ್ಯಗಳೂ ಫಲೋನ್ಮುಖಗಳಾಗುವುವು. ಸೂರ್ಯ ಪೂಜಾಕ್ರಮದಲ್ಲಿ ಇದನ್ನು ಬಿಟ್ಟರೆ ಮತ್ತಾವ ಶಾಸ್ತ್ರವೂ ಇಷ್ಟರಮಟ್ಟಿಗೆ ವಿಶದವಾಗಿ ತಿಳಿಸಲಾರದು. ಈ ಪುರಾಣವು ಸಕಲ ವೇದಗಳ ಸಾರವನ್ನೆಲ್ಲಾ ಗ್ರಹಿಸಿಯೇ ಇದನ್ನು ವಿವರಿಸುವುದು. ಇದನ್ನು ಬಿಟ್ಟು ಬೇರೆ ತಂತ್ರಶಾಸ್ತ್ರಗಳ ವಿಧಿಯನ್ನನುಸರಿಸಿ ಸೂರ್ಯಾರಾಧನೆ ಮಾಡಿದರೆ ಅವರ ಭಕ್ತಿಶ್ರದ್ಧೆಗೆ ತಕ್ಕಂತಹ ಫಲ ದೊರೆಯುವುದೇ ಹೊರತು ಸಂಪೂರ್ಣ ಪೂಜಾಫಲವು ದೊರಕಲಾರದು. ಆದ್ದರಿಂದ ನಿಜವಾದ ಆಯು

ಭಕ್ತಿಶ್ರದ್ಧಾಫಲಂ ತೇಷಾಂ ನ ತು ಮಂತ್ರಕೃತಂ ಭವೇತ್ ।
ಅಧ್ಯೇತವ್ಯಮಿದಂ ಶಾಸ್ತ್ರಂ ಸತತಂ ಪಾದನಾಶನಂ ।
ಆಯುರಾರೋಗ್ಯವಿಜಯಂ ಯಶಃ ಕೀರ್ತಿಕರಂ ಶುಭಂ ।
ಏತೇಷಾಂ ದಿಕ್ಪಾಲಾನಾಂ ಪೂಜಾಂ ಕೃತ್ವಾ ಪುನ ।
ವಕ್ಷ್ಯಮಾಣಕೈರ್ಮಂತ್ರೈಃ ಪಂಚ ಪಂಚಾಹುತ ।
ಯಃ ಆಜ್ಯೇನೈಕೈಕಂ ಪಾಯಸೇನ ವಾ ।

| | |
|---|---|
| ಓಂ ತಿತಿನೇನಮಃ | ವಿಕಟಃ |
| ಓಂ ಅಶಿತಿನೇ ನಮಃ | ವಾಮನಃ |
| ಓಂ ವ್ಯವಹಿತಾಯನಮಃ | ಲಂಬೋದರಃ |
| ಓಂ ಸಂಹತಾಯನಮಃ | ಹೇಮಗರ್ಭಃ |
| ಓಂ ಸರ್ವಗಾಯನಮಃ | ವಿದೇಹಃ |
| ಓಂ ಸ್ಥಿರಾಯನಮಃ | ಭೀಮವೇಗಃ |
| ಓಂ ಶಾಂತಾಯನಮಃ | ಸೌಮ್ಯರೂಪಂ |
| ಓಂ ಸರ್ವಹರಾಯನಮಃ | ಪಂಚಾತ್ಮಕಃ |
| ಓಂ ಅಜರೂಪಾಯನಮಃ | ಧರ್ಮವಿಗ್ರಹಃ |
| ಓಂ ನಿರಭ್ರಾಯನಮಃ | ಅಹಿರ್ಬುಧ್ನ್ಯಃ |
| ಓಂ ಮನವೇನಮಃ | ಕಾಲಃ |
| ಓಂ ಕಿನ್ನರಾಯನಮಃ | ಉಪಕಾಲಃ |
| ಓಂ ಪೂರ್ವದಿಶಿ ಯೋಗಿನಃ | |

---

ರಾರೋಗ್ಯಕಾಮಿಗಳು, ಯಶಸ್ಸು, ಜಯ ಮುಂತಾದುವುಗಳನ್ನು ಅಪೇಕ್ಷಿಸುವವರು ಈ ವಿಧಿಯನ್ನೇ ಅನುಸರಿಸಿ, ಸೂರ್ಯಭಗವಂತನನ್ನು ಅರ್ಚನೆಮಾಡಬೇಕು.

ಹೀಗೆ ದಿಕ್ಪಾಲಕರಿಗೆ ಪೂಜೆಮಾಡಿ ಮುಂದೆ ಹೇಳುವ ಮಂತ್ರಗಳಿಂದ ತುಪ್ಪ, ಪಾಯಸ, ಮೊದಲಾದ ದ್ರವ್ಯಗಳಿಂದ ಐದು ಐದು ಆಹುತಿಗಳನ್ನು ಪ್ರತ್ಯೇಕವಾಗಿ ಕೊಡಬೇಕು.

ಈ ದೇವತೆಗಳು ಪೂರ್ವದಿಕ್ಪಾಲಕರು. ಇವರನ್ನು ಮೇಲೆ ಹೇಳಿದ ನಾಮಗಳಿಂದ ಪ್ರತ್ಯೇಕಪ್ರತ್ಯೇಕವಾಗಿ ಪೂಜಿಸಬೇಕು. ಈ ದೇವತೆಗಳೆಲ್ಲರೂ ಯೋಗಿನೀ ದೇವತೆಗಳ ಗುಂಪಿನವರು.

| | |
|---|---|
| ಓಂ ಸಂಸ್ತುತಾಯನಮಃ | ಅಘೋರಃ |
| ಓಂ ಅನಂತಾಯನಮಃ | ವಡವಾಮುಖಃ |
| ಓಂ ಕ್ರುದ್ಧಾಯನಮಃ | ಊರ್ಧ್ವರೋಮಾ |
| ಓಂ ಸಮಾಯನಮಃ | ಮೃತ್ಯುಹಸ್ತಃ |
| ಓಂ ಅನಂತಜಿಹ್ವಾಯನಮಃ | ಮೇಘನಾದಃ |
| ಓಂ ಸ್ಫುರಿತಾಯ ನಮಃ | ಕೌಸ್ತುಭಃ |
| ಓಂ ಕ್ರೂರಾಯನಮಃ | ಧೂಮಕಾಲಃ |
| ಓಂ ಸರ್ವೋನವಾಧಾಯನಮಃ | ಉಗ್ರಜಿಹ್ವಃ |
| ಓಂ ಶರಭಾಯನಮಃ | ಮಾಸಮೂರ್ತಿಃ |
| ಓಂ ಅಗ್ನಯೇನಮಃ | ವಲ್ಕಲೀ |
| ಓಂ ರಕ್ತವರ್ಣಾಯನಮಃ | ದಿಣೀ |
| ಓಂ ಸುರಕ್ತಾಯನಮಃ | ಕರ್ಮಸಾಕ್ಷೀ |

ದಕ್ಷಿಣದಿಗ್ಭಾಗಿನಃ

| | |
|---|---|
| ಓಂ ಸರಸ್ವತ್ಯೈನಮಃ | ವಾಯುಭಕ್ಷಃ |
| ಓಂ ಕಾರವೇನಮಃ | ಪಂಚಮೂರ್ತಿಃ |
| ಓಂ ಕ್ರೀಡತೇನಮಃ | ಅಗ್ನಿಪಾಶಃ |
| ಓಂ ವಿಕ್ರೀಡತೇನಮಃ | ಪಶುಪತಿಃ |
| ಓಂ ಹಂತಾಯನಮಃ | ಮಹಾಪಾಶಃ |
| ಓಂ ವಿಹಂತಾಯನಮಃ | ಕೃಷ್ಣದೇಹಃ |
| ಓಂ ಧ್ರುವಾಯನಮಃ | ಅಮೋಘಃ |
| ಓಂ ವಿಶಿಖಾಯನಮಃ | ಅಚ್ಯುತಃ |

---

ಈ ದೇವತೆಗಳು ದಕ್ಷಿಣ ದಿಗ್ಭಾಗದಲ್ಲಿರುವವರು. ಇವರನ್ನು ಮೇಲೆ ಹೇಳಿರುವ ನಾಮಗಳಿಂದ ಆರಾಧಿಸಿ, ಇದೇ ಮಂತ್ರಗಳಿಂದ ಹೋಮಮಾಡಬೇಕು.

ಈ ದೇವತೆಗಳು ಪಶ್ಚಿಮ ದಿಗ್ಭಾಗದಲ್ಲಿರುವವರು. ಇವರನ್ನು ಮೇಲೆ ಹೇಳಿದ ನಾಮಗಳಿಂದ ಪೂಜಿಸಿ, ಹೋಮಮಾಡಬೇಕು. (ಮೂಲದಲ್ಲಿ ನಮಃ ಎಂಬುದಕ್ಕೆ ಬದಲಾಗಿ ಠಃ ಠಃ ಎಂದಿದೆ).

## ಪಶ್ಚಿಮದಿಗ್ಭಾಗಿನಃ

| | |
|---|---|
| ಓಂ ಸವಿತ್ರೇನಮಃ | ಶಿಖಿಲಿಂಗಃ |
| ಓಂ ಮಧ್ಯಗತಾಯನಮಃ | ಗ್ರಂಥಿವಾಸಃ |
| ಓಂ ಯುಕ್ತಾಯನಮಃ | ಯೋಗವಾಸಃ |
| ಓಂ ಖಡ್ಗಿನೇನಮಃ | ತ್ರಿಶಿಖಃ |
| ಓಂ ಜ್ಯೇಷ್ಠಾಯನಮಃ | ಶತಕ್ರತುಃ |
| ಓಂ ಮಧ್ಯಗತಾಯನಮಃ | ಪಂಚಶಿಖಃ |
| ಓಂ ಕನಿಷ್ಠಾಯನಮಃ | ಸಹಸ್ರಕಿರಣಃ |
| ಓಂ ಸರ್ವೈರಾಗ್ಯಾಯನಮಃ | ಪದ್ಮಕೇತುಃ |
| ಓಂ ಕಾತರಾಯನಮಃ | ಯಜ್ಞರೂಪಃ |
| ಓಂ ಯುಗಾಯನಮಃ | ಭುವನಾಧಿಪಃ |
| ಓಂ ಅನಂತಶಕ್ತ್ಯೇನಮಃ | ಪದ್ಮನಾಭಃ |

ವೇದೋದ್ಧೃತಮಿದಂ ರಾಜನ್ ಮಂತ್ರಕಾಶಂ ಪುರಾತನಂ ।
ಯಜಂಸ್ತ್ರಿಕಾಲಮವ್ಯಗ್ರಸ್ಸರ್ವಾನ್ ಕಾಮಾನವಾಪ್ನುಯಾತ್ ॥ ೧ ॥

ಇದಮೇವ ಪರಂ ಜ್ಞಾನಂ ಕರ್ಮಯೋಗಂ ಚ ನಿಷ್ಕಲಂ ।
ಇದಂ ದತ್ತಂ ಮಯಾ ತುಭ್ಯಂ ಯಥಾ ಸಾಂಬಾಯ ಭಾಸ್ವತೇ ॥ ೨ ॥

---

ಈ ದೇವತೆಗಳು ಉತ್ತರದಿಗ್ಭಾಗದಲ್ಲಿರತಕ್ಕವರು. ಇವುಗಳನ್ನು ಮೇಲೆ ಹೇಳಿದ ನಾಮಗಳಿಂದ ಪೂಜಿಸಿ, ಹವಿಸ್ಸಿನಿಂದ ತೃಪ್ತಿಪಡಿಸಬೇಕು.

೧-೨. ಬೃಹದ್ಬಲರಾಜನೆ, ಈಗ ನಾನು ಹೇಳಿರುವ ಮಂತ್ರರಾಶಿಯೆಲ್ಲವೂ ವೇದೋದ್ಧೃತವಾದದ್ದು. ಆದ್ದರಿಂದಲೇ ಇದನ್ನು ಪುರಾತನವೆನ್ನುವುದರಲ್ಲಿ ಸಂಶಯವಿಲ್ಲ. ಇದನ್ನೇ ಪರಮಜ್ಞಾನವೆಂದೂ, ಕರ್ಮಯೋಗವೆಂದೂ ಹೇಳುವುದುಂಟು. ಹಿಂದೆ ಸೂರ್ಯದೇವನು ಸಾಂಬನಿಗೆ ಹೇಳಿದ್ದನ್ನೇ ನಿನಗೆ ನಾನು ಈಗ ವಿವರಿಸುತ್ತಿರುವೆನು.

ಕೃತ್ವಾ ದಿಶಾಂ ಬಲಿಂ ಸಮ್ಯಕ್ ದಿಕ್ಪಾಲಾನಾಂ ಸಮಾಹಿತಃ ।
ಹೋಮಂ ಕೃತ್ವಾ ಚ ತೇನೈವ ತತೋಽರ್ಧ್ಯಾನಂ ವಿವಸ್ವತಃ ॥ ೩ ॥

ಏಹ್ಯೇಹಿ ದೇವಾವೃತಶಬ್ದಮೂರ್ತೇ ಸರ್ವೈರ್ವೃತೋ ಯಾಗಮಿಮಂ
ಪ್ರಪಶ್ಯ ।
ತ್ವಮೇವ ಪೂಜ್ಯೋಽಸಿ ಸುರಾಸುರಾಣಾಂ ಧರ್ಮಾದಿವರ್ಗಸ್ಯ
ಸಮೀಹಕಾನಾಂ ॥ ೪ ॥

ಜ್ಞಾನಮಂತ್ರಾರ್ಚಿತೋ ಭೂಯಃ ಕುಸುಮೈಶ್ಚ ವಿಧಾನತಃ ।
ಗಚ್ಛ ದೇವ ಯಥಾ ಕಾಮಂ ಪುನರಾಗಮನಾಯ ಚ । ॥ ೫ ॥

ಇದಮೇವ ಪರಂ ಸತ್ಯಂ ಇದಮೇವ ಪರಂ ತಪಃ ।
ಇದಮೇವ ಪರೋ ದೇವಃ ಸುರಾಸುರನಮಸ್ಕೃತಃ ॥ ೬ ॥

---

೩-೪. ಅನಂತರ ದಿಕ್ಕುಗಳಿಗೂ, ದಿಕ್ಪಾಲಕರಿಗೂ ಬಲಿ ಪ್ರದಾನಮಾಡಿ, ಹೋಮಾದಿಗಳನ್ನು ನೆರವೇರಿಸಿ, ಸೂರ್ಯಭಗವಂತನನ್ನು ಈ ರೀತಿ ಪ್ರಾರ್ಥಿಸಬೇಕು.

" ಸರ್ವಶಬ್ದಮಯನೂ, ಸರ್ವಾಂತರ್ಯಾಮಿಯೂ ಆದ ಭಗವಂತನೇ, ಇಲ್ಲಿ ನಿನ್ನ ಸನ್ನಿಧಿಯನ್ನು ತೋರಿಸು. ಸರ್ವಜನರಿಂದಲೂ ಸುರಾಸುರರಿಂದಲೂ, ನೀನು ಪೂಜ್ಯನೆನಿಸಿರುವೆ. ಧರ್ಮಾದಿ ಚತುರ್ವಿಧ ಪುರುಷಾರ್ಥಗಳಿಗೂ ನೀನು ಸ್ವಾಮಿಯಾಗಿರುವೆ.

೫-೬. ಎಲೈ ದೇವದೇವನೇ, ದಿವ್ಯಧ್ಯಾನದಿಂದಲೂ, ದಿವ್ಯಮಂತ್ರಗಳಿಂದಲೂ ದಿವ್ಯಕುಸುಮಗಳಿಂದಲೂ, ನೀನು ಅರ್ಚಿತನಾಗಿರುವೆ. ಮಹಾ ತೇಜೋರೂಪಿಯೇ, ಮತ್ತೆ ಇಲ್ಲಿಗೆ ಬರುವುದಕ್ಕಾಗಿ ಈಗ ನೀನು ಪ್ರಯಾಣಮಾಡು. ಲೋಕದಲ್ಲಿ ನೀನೇ ನಿತ್ಯರೂಪಿಯು. ತಪೋರೂಪಿಯು. ದೇವಾಸುರರಿಂದ ವಂದಿತನಾದ ದೇವದೇವನೂ ನೀನೇ ಆಗಿರುವೆ.

**ಪುರಾಣೋಕ್ತಮಿದಂ ಶಾಸ್ತ್ರಂ ಯಃ ಪಠೇತ್ಪ್ರಯತಃ ಶುಚಿಃ ।**
**ಸ ಸಹಸ್ರಾರ್ಚಿಷಂ ದೇವಂ ಪ್ರವಿಶೇನ್ನಾತ್ರ ಸಂಶಯಃ ।**
**ತೀರ್ಥಾನಾಂ ಪರಮಂ ತೀರ್ಥಂ ಮಂಗಲಾನಾಂ ಚ ಮಂಗಲಂ ।**
**ಪವಿತ್ರಾಣಾಂ ಪವಿತ್ರಂ ಚ ಶ್ರೋತವ್ಯಂ ಪರಮಂ ಪದಂ ।**

**ಇತಿ ಶ್ರೀ ಸಾಂಬಪುರಾಣೇ ದೀಕ್ಷಾವಿಧಾನೋ ನಾಮ**
**ಏಕಚತ್ವಾರಿಂಶೋಽಧ್ಯಾಯಃ.**

---

ಇಲ್ಲಿನ ವರೆಗೂ ಉಕ್ತವಾದ ಈ ಪುರಾಣಭಾಗವನ್ನು ಯಾರು ಶುಚಿಯಾದ ಮನಸ್ಸುಳ್ಳವರಾಗಿ ಪಠಿಸುವರೋ, ಅವರು ಸೂರ್ಯಸಾನ್ನಿಧ್ಯವನ್ನು ಸೇರುವರೆಂಬುದ ರಲ್ಲಿ ಸಂಶಯವಿಲ್ಲ. ತೀರ್ಥಗಳಲ್ಲೆಲ್ಲಾ ಉತ್ತಮ ತೀರ್ಥವೆನಿಸಿ ಮಂಗಳಕರವಾದ ವಸ್ತುಗಳಲ್ಲೆಲ್ಲಾ ಮಂಗಳಕರವಾದುದೆಂದು ಪ್ರಸಿದ್ಧವಾಗಿ ಅತಿ ಪವಿತ್ರವಾಗಿರುವ ಈ ದೀಕ್ಷಾವಿಧಾನವನ್ನು ಸರ್ವರೂ ಭಕ್ತಿಯಿಂದ ಕೇಳುವವರಾಗಬೇಕು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ದೀಕ್ಷಾವಿಧಾನವೆಂಬ
ನಲವತ್ತೊಂದನೆಯ ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ದ್ವಿಚತ್ವಾರಿಂಶೋಽಧ್ಯಾಯಃ



॥ ವಸಿಷ್ಠ ಉವಾಚ ॥

ಕೃತ್ವಾ ದೇವಗೃಹಂ ಸಾಂಬಃ ಹ್ಯಾನಯಿತ್ವಾ ತು ಯಾಜಕಾನ್ ।
ಆಜಗಾಮಾಥ ಧರ್ಮಾತ್ಮಾ ಯತ್ರ ಸನ್ನಿಹಿತೋ ರವಿಃ ॥ ೧ ॥

ಏತೇ ಮಿತ್ರವನಂ ಶ್ರುತ್ವಾ ದೇವಮಾನುಷಪನ್ನಗಾಃ ।
ಋಷಯಃ ಸಿದ್ಧವಿದ್ಯಾಧ್ರಾಗಂಧರ್ವೋರಗಗುಹ್ಯಕಾಃ ॥ ೨ ॥

ದಿಕ್ಪಾಲಾ ಲೋಕಪಾಲಾಶ್ಚ ಗೃಹಾ ಯಕ್ಷಾಶ್ಚ ಧಾರ್ಮಿಕಾಃ ।
ಸಪ್ರಜಾಪತಯಃ ಸರ್ವೇ ಗಂತುಂ ಪ್ರತ್ಯುಪಚಕ್ರಮುಃ ॥ ೩ ॥

---

## ನಲವತ್ತೆರಡನೆಯ ಅಧ್ಯಾಯ.

೧. ವಸಿಷ್ಠಋಷಿಗಳು ಬೃಹದ್ಬಲರಾಜನಿಗೆ ಮುಂದಿನ ಕಥೆಯನ್ನು ವಿವರಿಸುತ್ತಾ ಹೀಗೆಂದರು. ಅಯ್ಯಾ ರಾಜನೆ, ಸಾಂಬನು ದೇವಗೃಹವೊಂದನ್ನು ಹಿಂದೆ ಹೇಳಿದಂತೆ ನಿರ್ಮಾಣಮಾಡಿ, ಧರ್ಮಾತ್ಮಕನಾದ ಆತನು ಸೂರ್ಯನು ಅನುಗ್ರಹ ಮಾಡಿದ್ದ ಆಶ್ರಮದ ಸಮೀಪಕ್ಕೆ ಬಂದನು.

೨-೩. ಹಾಗೆ ಸಾಂಬನು ಮಿತ್ರವನಕ್ಕೆ ಪ್ರವೇಶಮಾಡಿದ್ದನ್ನು ತಿಳಿದು ದೇವತೆಗಳೂ, ಉರಗಗಳೂ, ಗುಹ್ಯಕರೂ, ದಿಕ್ಪಾಲಕರೂ, ಲೋಕಪಾಲಕರೂ, ಯಕ್ಷರೂ ಇನ್ನು ಧರ್ಮಸಂಪನ್ನರಾದವರೂ, ಬ್ರಹ್ಮಮಾನಸ ಪುತ್ರರೂ, ಭಕ್ತಿಯಿಂದ ಅಲ್ಲಿಗೆ ಬಂದು ಸೇರಿದರು.

ಉಪವಾಸಪರಾಃ ಕೇಚಿತ್ಕೇಚಿದಾತ್ಮನಿ ತತ್ಪರಾಃ ।
ತ್ರಿವೃತಾಧ್ವಪರಾಃ ಕೇಚಿತ್ಕೇಚಿಜ್ಜಾಪ್ಯಸಮನ್ವಿತಾಃ ॥ ೪ ॥

ದಾರುಚಾಪಧರಾಃ ಕೇಚಿತ್ಕೇಚಿತ್ಸರ್ವಾರ್ಥಗಾಮಿನಃ ।
ಅಪರೇ ನಿಯತಾಹಾರಾ ನಿರಾಹಾರಾಸ್ತಥಾ ಪರೇ ॥ ೫ ॥

ತ್ಯಕ್ತ್ವಾ ದೇಹಗತಾಂ ಚಿಂತಾಂ ರವಿಧ್ಯಾನಪರಾಯಣಾಃ ।
ಮಾಸಪಕ್ಷೋಪವಾಸೇನ ಕೇಚಿಲ್ಲಂಘನಮಾತ್ಮನಿ ॥ ೬ ॥

ಅಚಿರೇಣೈವ ಕಾಲೇನ ಸಂಪ್ರಾಪ್ಯ ಲವಣೋದಧಿಂ ।
ದೃಷ್ಟ್ವಾ ತಪೋವನಂ ರಮ್ಯಂ ಲವಣೋದಧಿಮಾಶ್ರಿತಂ ॥ ೭ ॥

ನಾನಾಪುಷ್ಪಫಲೋಪೇತಂ ದೇವಗಂಧರ್ವಸೇವಿತಂ ।
ಋಷಯಃ ಪರ್ಯುಪಾಸಂತೇ ಕ್ರಮಂ ಹಿತ್ವಾ ತತಸ್ಸದಾ ॥ ೮ ॥

---

೪-೫. ಅಲ್ಲಿ ಕೆಲವರು ಉಪವಾಸಾದಿಗಳಿಂದಲೂ, ಕೆಲವರು ಆತ್ಮಧ್ಯಾನದಿಂದಲೂ, ಕೆಲವರು ತ್ರಿಚಕಲ್ಪವೇ ಮೊದಲಾದ ಮಂತ್ರಗಳನ್ನು ಜಪಿಸುವವರಾಗಿಯೂ, ಮತ್ತೆ ಕೆಲವರು ಆಹಾರ ನಿಯಮವುಳ್ಳವರಾಗಿಯೂ, ಸೂರ್ಯಾನುಗ್ರಹಕಾಮಿಗಳಾಗಿದ್ದರು.

೬-೭. ಅನೇಕರು ದೈಹಿಕವಾದ ಚಿಂತೆಗಳನ್ನೆಲ್ಲಾ ಮರೆತು ಸರ್ವದಾ, ಸೂರ್ಯನನ್ನೇ ಧ್ಯಾನಮಾಡುತ್ತಾ, ತಿಂಗಳು, ಪಕ್ಷ. ಮುಂತಾದ ದೀರ್ಘಕಾಲಾವಧಿ ಉಪವಾಸ ಮಾಡುತ್ತಿದ್ದರು. ಇಂತಹವರು ಆಗ ಲವಣಸಮುದ್ರದ ಸಮೀಪದಲ್ಲಿ ನೋಡುವುದಕ್ಕೆ ಅತ್ಯಂತ ಮನೋಹರವಾಗಿರುವ ಮಿತ್ರವನವನ್ನು ಸಂತೋಷದಿಂದ ಪ್ರವೇಶಮಾಡಿದರು.

೮-೧೦ ಆ ವನವು ಅನೇಕ ಫಲ ಪುಷ್ಪಗಳಿಂದ ಭರಿತವಾಗಿದ್ದಿತು. ದೇವ ಗಂಧರ್ವರಿಂದ ಸೇವಿತವಾಗಿತ್ತು. ಅಂತಹ ರಮ್ಯವನವು, ಭೂಲೋಕಕ್ಕೆ ಬಂದಿರುವ ಸೂರ್ಯಲೋಕವೋ ಎಂಬಂತೆ ಕಾಣುತ್ತಿದ್ದಿತು. ಆ ವನದಲ್ಲಿ ಅನೇಕ ಮಹರ್ಷಿಗಳು

ಅಪರೋ ರವಿಲೋಕಸ್ತು ಸಾದೃಶ್ಯಾತ್ಕೀರ್ತಿತೋ ಭುವಿ ।
ಸರ್ವೇ ತೇ ಹರ್ಷಮಾಪನ್ನಾ ದೃಷ್ಟ್ವಾ ರಮ್ಯಂ ತಪೋವನಂ ॥ ೯ ॥

ರಮಣ್ಯಂ ಸರ್ವಕಾರ್ಯೇಷು ಸರ್ವಭೂತೋಪಕಾರಕಂ ।
ಸರ್ವಪ್ರಾಣಿಸುಖಾವಾಸಂ ನಿರ್ಮಿತಂ ವಿಶ್ವಕರ್ಮಣಾ ॥ ೧೦ ॥

॥ ವಸಿಷ್ಠ ಉವಾಚ ॥

ನಾರದೋಽಪ್ಯಥ ಶಾಸ್ತ್ರಂ ತತ್ಸದಾ ಪಠತಿ ಬುದ್ಧಿಮಾನ್ ।
ಸಾಧು ಸಾಂಬ ಮಹಾಭಾಗ ಭಕ್ತಿಮಾನಸಿ ಯಾದವ ॥ ೧೧ ॥

ಯೇನೇಯಮೀದೃಶೀ ಯಾ ತು ಕೃತ್ವಾ ತ್ವರ್ಚಾ ಸನಾತನೀ ।
ತತ್ಪ್ರಸಾದೇನ ಸಾವಿತ್ರಂ ಯತ್ಪಶ್ಯಾಮಸ್ತಪೋವನಂ ॥ ೧೨ ॥

ಶ್ರುತ್ವಾ ತಂ ನಿರ್ಮಲಂ ವಾಕ್ಯಂ ಸಾಂಬಃ ಪರಮಧರ್ಮವಾನ್ ।
ಪ್ರಣಿಧಾಯ ಶಿರೋಭೂಮೌ ದೇವಂ ವಿಜ್ಞಾಪಯತ್ತತಃ ॥ ೧೩ ॥

---

ಮನಬಂದಷ್ಟು ತಪೋಧ್ಯಾನಾದಿಗಳಿಂದ ಭಾಸ್ಕರನನ್ನು ಸೇವಿಸುತ್ತಿದ್ದರು. ಹೀಗೆ ವನವು ಇಂತಹ ದೇವತಾಕಾರ್ಯಗಳಿಗೆ ಫಲಪ್ರದವಾಗಿತ್ತು. ಸಮಸ್ತಪ್ರಾಣಿಗಳಿಗೂ ಉಪಕಾರಕವಾಗಿ, ಸುಖಪ್ರದವಾಗಿ, ವಿಶ್ವಕರ್ಮನಿಂದ ನಿರ್ಮಿತವಾದದ್ದಾಗಿ ಶೋಭಿಸುತ್ತಿದ್ದಿತು.

೧೧-೧೨. ಆಗ ನಾರದಮಹರ್ಷಿಯು ಸಾಂಬನನ್ನು ಕುರಿತು " ಸಾಂಬನೆ ನೀನು ಸೂರ್ಯದೇವನಲ್ಲಿ ಅತಿಶಯವಾದ ಭಕ್ತಿಯಿಂದಿರುವೆ. ಸೂರ್ಯನನ್ನು ಅಷ್ಟು ಅಪೂರ್ವವಾದ ಭಕ್ತಿಯಿಂದ ಅರ್ಚಿಸಿದುದರಿಂದಲೇ ಇಂದು ನಾವು ಅವನ ಅನುಗ್ರಹಬಲದಿಂದ ಈ ವನಕ್ಕೆ ಬಂದಿರುವೆವು. ಇಲ್ಲದಿದ್ದರೆ ಇಂತಹ ವನವು ನಮಗೆ ಸುಲಭಸಾಧ್ಯವಾಗಿರಲಿಲ್ಲ.

೧೩-೧೪. ನಾರದಮಹರ್ಷಿಯು ಹೇಳಿದ ಆ ನಿರ್ಮಲ ವಾಣಿಯನ್ನು ಕೇಳಿ ಭಕ್ತಿಯಿಂದ ಸಾಷ್ಟಾಂಗನಮಸ್ಕಾರವನ್ನೆಸಗಿ ಸಾಂಬನು " ಮಹರ್ಷಿಯೆ,

**ಯತ್ತ್ವಯೋದಾಹೃತಂ ಪೂರ್ವಂ ಸಾನ್ನಿಧ್ಯಂ ಸ್ಥಾನಮುತ್ತಮಂ ।**
**ಮನ್ಯೇ ವಾನುಗ್ರಹಾದ್ದೇವಪೂಜಾನುಗ್ರಹಕಾರಿಣಾ ॥ ೧೪ ॥**

**ಅಸ್ತಿ ಮೇ ಕೃಪಯಾ ಕಿಂಚಿದ್ವದ ಸೌಮ್ಯ ವಿಭಾವಸೋಃ ।**
**ಕ್ಷೀಣಗಾತ್ರೇಂದ್ರಿಯಪ್ರಾಣೋ ಗಿರಾ ಚಾಪ್ಯತಿಮಂದಯಾ ॥ ೧೫ ॥**

**ಜ್ಞಾತ್ವಾ ಭಕ್ತ್ಯಾನ್ವಿತಂ ಸಾಂಬಂ ದೇವೋ ವಚನಮಬ್ರವೀತ್ ।**
**ತ್ಯಜ ಕೀರ್ತಿಕೃತಾಂ ಚಿಂತಾಂ ಮತ್ಸ್ವಾನೇ ಯದುನಂದನ ॥ ೧೬ ॥**

**ಪೂರ್ವಂ ದತ್ತಂ ಮಯಾ ವಾಚಾ ಪ್ರಸಾದಂ ಶೃಣು ಯಾದವ ।**
**ಅಸ್ಮಿಂಲ್ಲವಣೋದಧೇಸ್ತೀರೇ ತಾಪಸಾಃ ಪೂರ್ವಮಾನವಾಃ ॥ ೧೭ ॥**

**ಮತ್ಪ್ರಸಾದಂ ಚ ಕಾಂಕ್ಷಂತಃ ಕ್ಲಿಶ್ವಾ ವರ್ಷಶತಾನ್ ಬಹೂನ್ ।**
**ತಾನ್ ದೃಷ್ಟ್ವಾ ತಾಪಸಾಂಸ್ತತ್ರ ಕೃಪಾ ಮೇ ವಿಕೃತಾ ಹೃದಿ ॥ ೧೮ ॥**

---

ನೀನು ಹಿಂದೆ ಈ ವಿಷಯಗಳೆಲ್ಲವನ್ನೂ ತಿಳಿಸಿ, ನನ್ನಿಂದ ಸೂರ್ಯಭಗವಂತನ ಪೂಜೆಯನ್ನು ಮಾಡಿಸಿದುದರ ಫಲವಾಗಿಯೇ ಈಗ ನನಗೆ ಈ ಭಾಗ್ಯವು ಪ್ರಾಪ್ತವಾಗಿರುವುದು. ಈಗ ಮತ್ತೆ ಇನ್ನೂ ಸೂರ್ಯಭಗವಂತನ ವಿಷಯವಾಗಿ ಏನನ್ನಾದರೂ ನನಗೆ ತಿಳಿಸಬೇಕು" ಎಂದು ಕ್ಷೀಣದೇಹಿಯಾಗಿ, ಇಂದ್ರಿಯಾದಿಗಳ ಪಾಟವವಿಲ್ಲದೇ ಮಂದವಾಕ್ಯಸರಣಿಯಿಂದ ಕೇಳಿಕೊಳ್ಳಲು,

೧೬-೧೭. ಆಗ ದೇವದೇವನಾದ ಸೂರ್ಯನಾರಾಯಣನು ಸಾಂಬನು ನಿಜ ಭಕ್ತನೆಂಬುದನ್ನರಿತು ಹೀಗೆ ಅಪ್ಪಣೆಕೊಡಿಸಿದನು. "ಯದುವಂಶೋದ್ಭವನಾದ ಸಾಂಬನೇ, ನಿನ್ನ ಮನಸ್ಸಿನ ವ್ಯಥೆಯನ್ನು ಬಿಡು. ಹಿಂದೆ ನಾನು ನಿನಗೆ ಕೇವಲ ವಾಗ್ರೂಪವಾಗಿ ಅನುಗ್ರಹಿಸಿದ್ದೆನು. ಈಗ ನಿನಗೆ ಬೇಕಾದ ವರವನ್ನು ಕೇಳಿಕೊ. ಕರುಣಿಸುವೆನು. ಲವಣಸಮುದ್ರದ ತೀರದಲ್ಲಿರುವ ತಪಸ್ವಿಗಳೆಲ್ಲರೂ ಹಿಂದೆ ಕೇವಲ ಮಾನವರಾಗಿಯೇ ಇದ್ದವರು.

೧೮-೧೯. ಇವರೆಲ್ಲರೂ ನನ್ನ ಅನುಗ್ರಹವನ್ನೇ ಅಪೇಕ್ಷಿಸುವವರಾಗಿ ನೂರಾರು ವರ್ಷಗಳು ಕಷ್ಟದಿಂದ ತಪಸ್ಸನ್ನಾಚರಿಸಿದ್ದರು. ಅವರನ್ನು ನೋಡಿ ಒಂದು ಕಾರಿ

ಬ್ರೂತ ವತ್ಸಾ ಯಥಾ ನ್ಯಾಯಂ ಪಯೋವಚೋಽವಲಂಬನಂ ।
ಸತ್ಯಧರ್ಮಾರ್ಥಯುಕ್ತಾರ್ಥಾನ್ ಪ್ರಾರ್ಥಯಧ್ವಮನುತ್ತಮಂ ॥ ೧೯ ॥

ಶ್ರುತ್ವಾ ತೇ ನಿರ್ಮಲಂ ವಾಕ್ಯಂ ದೇವವಕ್ತ್ರಾದ್ವಿನಿಸ್ಸೃತಂ ।
ಮಾನವಾ ಹರ್ಷಮಾಪನ್ನಾಃ ಸಂಪ್ರಹೃಷ್ಟಾತ್ಮಮಾನಸಾಃ ॥ ೨೦ ॥

ಯದಿ ಪ್ರಸನ್ನೋ ಭಗವಾನ್ ವರಂ ದಾತುಂ ಸಮುದ್ಯತಃ ।
ಅವಿಘ್ನಮಸ್ತು ನಶ್ಚೈವ ತ್ವಯಿ ಭಕ್ತಿರ್ವಿಭಾವಸೌ ॥ ೨೧ ॥

ಏವಮಸ್ತ್ವಿತಿ ಸೋಽಪ್ಯುಕ್ತ್ವಾ ಭಗವಾನ್ ದಿನಕೃದ್ವಿಭುಃ ।
ಅಪರಂ ಪ್ರಾರ್ಥಯಧ್ವಂ ವೈ ವರಂ ವದತ ಮಾನವಾಃ ॥ ೨೨ ॥

ಭೂಯಸ್ತುಷ್ಟಾಸ್ತು ತೇ ಸಾಂಬ ಸರ್ವಧರ್ಮಪರಾಯಣಾಃ ।
ಪ್ರಾರ್ಥಯಂತೇ ಪರಂ ಶ್ರೇಷ್ಠಂ ಪ್ರಹೃಷ್ಟೋತ್ಫುಲ್ಲಲೋಚನಾಃ ॥ ೨೩ ॥

---

ನನಗೆ ಕರುಣೆಯುಂಟಾಯಿತು. ಒಡನೆಯೇ ಅವರನ್ನು ನೋಡಿ, " ಋಷಿವರ್ಯರೇ ನಿಮಗೆ ಬೇಕಾದದ್ದೇನು? ನ್ಯಾಯಯೋಗ್ಯವಾಗಿ ಧರ್ಮವನ್ನು ಬಿಡದೆ ಸತ್ಯವನ್ನನುಸರಿಸಿ ಏನನ್ನು ಬೇಕಾದರೂ ಪ್ರಾರ್ಥಿಸಿರಿ. ಅನುಗ್ರಹಿಸುವೆನು " ಎಂದೆನು.

೨೦-೨೧. ಆ ದೇವದೇವನಾದ ಸೂರ್ಯನ ಮಾತುಗಳನ್ನು ಕೇಳಿದ ಋಷಿಗಳೆಲ್ಲರೂ ಸಂತುಷ್ಟಾಂತರಂಗವುಳ್ಳವರಾಗಿ " ಸ್ವಾಮಿಯೇ, ನಿಜವಾಗಿ ನಮ್ಮ ಮೇಲೆ ನಿನಗೆ ಅಭಿಮಾನವಿರುವುದಾದರೆ ನಮಗೆ ಯಾವಾಗಲೂ ನಿನ್ನಲ್ಲಿ ಅವಿಚ್ಛಿನ್ನವಾದ ಭಕ್ತಿಯಿರುವಂತೆ ಅನುಗ್ರಹಿಸು " ಎಂದು ಕೇಳಿಕೊಂಡರು.

೨೨-೨೩. ಹಾಗೆಯೇ ಆಗಲೆಂದು ಶ್ರೀ ಸೂರ್ಯನಾರಾಯಣನು ಅನುಗ್ರಹಿಸಿ ' ಮತ್ತೊಂದು ವರವನ್ನು ಕೇಳಿಕೊಳ್ಳಿರಿ ' ಎಂದು ಹೇಳಲು, ತುಷ್ಟರಾದ ಆ ಋಷಿಗಳು ಅರಳಿದ ಕಣ್ಣುಗಳುಳ್ಳವರಾಗಿ, ಪರಾಪರಸ್ವರೂಪನಾದ ಭಗವಂತನನ್ನು ಹೀಗೆ ಕೇಳಿಕೊಂಡರು.

॥ ಋಷಯ ಊಚುಃ ॥

ಯದಿ ತುಷ್ಟೋ ಮಹಾತೇಜಾ ವರಂ ದಾತುಂ ಸಮುದ್ಯತಃ ।
ತ್ವತ್ಪ್ರಸಾದೇನ ದೇವೇಶ ಪ್ರಷ್ಟಾರೋಸ್ಯ ಭವಾಮಹೇ ॥ ೨೪ ॥

॥ ವಸಿಷ್ಠ ಉವಾಚ ॥

ತತ್ಪ್ರಸನ್ನೋ ಮಹಾತೇಜಾಃ ಪುನರ್ವಚನಮಬ್ರವೀತ್ ।
ಏವಂ ಭವತು ಭೂಯೋ ವೈ ಪ್ರಜಾಸರ್ಗಂ ಪ್ರಕಲ್ಪ್ಯಥ ॥ ೨೫ ॥

ಅನ್ಯಚ್ಛೃಣು ಪ್ರವಕ್ಷ್ಯಾಮಿ ಕೀರ್ತಿಕಾರಣಹೇತುನಾ ।
ಇದಂ ತಪೋವನಂ ರಮ್ಯಂ ಯದಾ ಸ್ಥಾನಮನುತ್ತಮಂ ॥ ೨೬ ॥

ಶ್ರುತ್ವಾ ತು ನಿರ್ಮಲಂ ವಾಕ್ಯಂ ತೇ ವೈ ಪ್ರಾಹುರ್ದಿವಾಕರಂ ।
ತ್ವತ್ಪ್ರಸಾದೇನ ಚಾಸ್ಮಾಕಂ ದೇವ ಯತ್ಪ್ರೀತಿಕಾರಕಂ ॥ ೨೭ ॥

---

೨೪-೨೫. "ಮಹಾ ತೇಜಸ್ವಿಯಾದ ಮಹಾನುಭಾವನೇ, ಮತ್ತೊಂದು ವರವನ್ನು ನಮಗೆ ಅನುಗ್ರಹಿಸುವುದಾದರೆ ನಮ್ಮಿಂದ ಪ್ರಜಾಸೃಷ್ಟಿಯು ನಡೆಯಬೇಕು. ಆ ರೀತಿ ಅನುಗ್ರಹಿಸು" ಎಂದು ಕೇಳಿಕೊಂಡರು. ಅದರಂತೆಯೇ ಸೂರ್ಯನಾರಾಯಣನು ಅನುಗ್ರಹಿಸಿ, ಇನ್ನು ಮುಂದೆ ಪ್ರಜಾಸೃಷ್ಟಿಮಾಡುವವರಾಗಿರಿ ಎಂದು ವರವಿತ್ತನು.

೨೬-೨೭ ಅಲ್ಲದೆ ಈ ತಪೋವನವು ಅತ್ಯಂತ ಪವಿತ್ರವಾದದ್ದೂ, ಮನೋಹರವಾದುದೂ ಎಂಬುದನ್ನು ತಿಳಿಯುವವರಾಗಿರಿ ಎಂದು ಭಗವಂತನು ಉಸುರಲು ಅದನ್ನು ಕೇಳಿದ ಆ ಋಷಿಗಳೆಲ್ಲಾ "ದೇವದೇವನೆ, ನಿನ್ನ ಅನುಗ್ರಹದಿಂದ ಇದು ನಮಗೂ ಪ್ರೀತಿಕರವಾಗಿರಲಿ.

ಕೀರ್ತ್ಯರ್ಥಂ ಪ್ರತಿಲಪ್ಸ್ಯಾಮೋ ರೋಚಯಸ್ವ ದಿವಾಕರ ।
ಇದಂ ಸ್ಥಾನಂ ಸಮಾಸಾದ್ಯ ವಯಂ ತೀರ್ಣಾಃ ಸುರಪ್ರಭೋ ॥ ೨೮ ॥
ಪ್ರಜಾನಾಂ ಚ ಹಿತಾರ್ಥಾಯ ಮನ್ಯೈವಾನುಗ್ರಹಾಯ ಚ ।
ಅತ್ರ ಕೀರ್ತಿಂ ಕರಿಷ್ಯಾಮಃ ಪ್ರಸಾದಾತ್ತವ ಭಾಸ್ಕರ ॥ ೨೯ ॥

॥ ದೇವ ಉವಾಚ ॥

ದತ್ತಾ ಯೂಯಂ ಮಮ ಸ್ಥಾನಂ ಸಪ್ತದ್ವೀಪೇಷು ದುರ್ಲಭಂ ।
ಮನ್ವಂತರಮಥೈಕಂ ಚ ಕೀರ್ತಿಮಂತೋ ಭವಿಷ್ಯಥ ॥ ೩೦ ॥
ಮಂತ್ರಸಿದ್ಧಿಸ್ತು ಯೇ ಚಾನ್ಯೇ ಮುನಯಶ್ಚಾಸುರೋತ್ತಮಾಃ ।
ಮಮ ಸ್ಥಾನರತಾಸ್ಸರ್ವೇ ತೇನೋರ್ಧ್ವಂ ನೈವ ಭಾಷಿತಂ ॥ ೩೧ ॥

॥ ನಾರದ ಉವಾಚ ॥

ಏಕೋನವಿಂಶತಿಃ ಶೂನ್ಯೈ ರೂಪೈರೇಕಾವಸಾನಕೈಃ ।
ಏತೈಃ ಪ್ರಮಾಣೈರ್ವರ್ಷಾಣಾಂ ಗಂಡಕೋ ಬ್ರಹ್ಮಣಃ ಸ್ಮೃತಃ ॥ ೩೨ ॥

---

೨೮-೨೯. ಇಲ್ಲಿ ವಾಸಿಸಿ ನಾವು ಅತಿಶಯವಾದ ಕೀರ್ತಿಯನ್ನೂ ಪಡೆಯುವರಾಗುವೆವು. ಈ ಸ್ಥಾನಕ್ಕೆ ನಾವು ಬಂದದ್ದರಿಂದಲೇ ನಾವು ಸಂಸಾರ ದುಃಖದಿಂದ ಮುಕ್ತರಾದೆವು. ಪ್ರಭುವೇ, ಪ್ರಜೆಗಳ ಹಿತಕ್ಕಾಗಿಯೂ, ನಮ್ಮನ್ನು ಅನುಗ್ರಹಿಸುವುದಕ್ಕಾಗಿಯೂ, ಇಲ್ಲಿ ನೀನು ನೆಲಸಿ, ಇಲ್ಲಿ ತಪಸ್ಸನ್ನಾಚರಿಸಿದವರಿಗೆಲ್ಲಾ ಯಶಸ್ಸನ್ನೂ ಹೆಚ್ಚಿಸು." ಎಂದು ಕೇಳಿಕೊಂಡರು.

೩೦-೩೧. "ಎಲೈ ದೇವತೆಗಳಿರಾ, ನೀವು ಇಂತಹ ಸ್ಥಾನವನ್ನು ಏಳು ದ್ವೀಪಗಳಲ್ಲಿಯೂ ನೋಡಲಾರಿರಿ. ನೀವು ಇಲ್ಲಿಂದ ಮುಂದೆ ಒಂದು ಮನ್ವಂತರದವರೆಗೂ ಕೀರ್ತಿಶಾಲಿಗಳಾಗಿರುವಿರಿ. ನಿಮಗೆ ಮಂತ್ರಸಿದ್ಧಿಯೂ ಅಲ್ಲಿನವರೆಗೇ ಇರುವುದು. ಈ ಮನ್ವಂತರದ ಪರ್ಯಂತವಾಗಿ, ನೀವು ಇಲ್ಲಿಯೇ ನೆಲಸಿರುವಿರಿ. ಮುಂದೆ ಇಲ್ಲಿರಲಾರಿರಿ" ಎಂದು ಸೂರ್ಯದೇವನು ಅಪ್ಪಣೆಯಿತ್ತನು.

೩೨-೩೩. ಹತ್ತೊಂಬತ್ತು ಸೊನ್ನೆಗಳಿಂದ ಕೂಡಿದ ಒಂದು ಸಂಖ್ಯೆಗೆ ಎಷ್ಟು ಸಂಖ್ಯೆಬರುವುದೋ ಅಷ್ಟು ಸಂಖ್ಯಾಪರಿಮಿತಿಯುಳ್ಳ ವರ್ಷಗಳು ಬ್ರಹ್ಮನಿಗೆ ಒಂದು

**ಗಂಡಾನಾಂ ಶತಸಾಹಸ್ರೈರ್ಮನುರೇಕಃ ಪ್ರಕೀರ್ತಿತಃ ।**
**ಯಾಮ್ಯೇನ ಚ ಪುರಾ ಕುರ್ಯಾತ್ತತಃ ಸ್ವಾರೋಚಿಷೇಣ ಚ ॥ ೩೩ ॥**

**ತೃತೀಯೋ ಮನ್ವಂತರೇ ದೇವಶ್ಚತುರ್ಥೇ ಕೀರ್ತಿತೋ ಮನುಃ ।**
**ಪಂಚಮೋ ಮನ್ವಂತರೇ ಸತ್ಯಃ ಷಷ್ಠೇ ಕ್ರತುಶ್ಚ ಕೀರ್ತಿಮಾನ್ ॥ ೩೪ ॥**

**ಸಪ್ತಮೇ ಸನತ್ಕುಮಾರಸ್ತು ಕೀರ್ತಿತಂ ಭುವನಂ ರವೇಃ ।**
**ವೈವಸ್ವತೇನ ಮನುನಾ ವರ್ತಮಾನೇನ ಕೀರ್ತಿತಂ ॥ ೩೫ ॥**

**ಅತ ಊರ್ಧ್ವಂ ಭವೇಚ್ಛಂಭುಃ ಶಂಭೋರೂರ್ಧ್ವಂ ಮಹಾನಸಃ ।**
**ಮಹಾನಸಾದ್ವಸಿಷ್ಠಶ್ಚ ತತಃ ಕಲ್ಪಃ ಸಮಾಪ್ಯತೇ ॥ ೩೬ ॥**

---

ದಿನವಾಗುವುದು. ಅಂತಹ ನೂರುಸಾವಿರ ದಿನಗಳಿಗೆ ಒಂದು ಮನ್ವಂತರವೆಂದು ಹೆಸರು. ಅದರಲ್ಲಿ ಮೊದಲನೆಯ ಮನ್ವಂತರಕ್ಕೆ ಯಮ, ಎರಡನೆಯದಕ್ಕೆ ಸ್ವಾರೋಚಿಷ ಇವರು ಅಧಿಪತಿಗಳು

೩೪-೩೬. ಮೂರನೆಯ ಮನ್ವಂತರಕ್ಕೆ ಸೂರ್ಯದೇವನು. ನಾಲ್ಕನೆಯದೇ ಮನುರಾಜನಿಗೆ ಸಂಬಂಧಿಸಿದುದು. ಐದನೆಯ ಮನ್ವಂತರಕ್ಕೆ ಸತ್ಯನೂ, ಆರನೆಯದಕ್ಕೆ ಕ್ರತುವೂ, ಏಳನೆಯದಕ್ಕೆ ಸನತ್ಕುಮಾರನೂ, ಹೀಗೆ ಪ್ರಸಿದ್ಧರಾಗಿರುವರು. ಇದು ಸೂರ್ಯಲೋಕದ ವಿಚಾರ. ಈಗ ನಡೆಯುತ್ತಿರುವುದು ವೈವಸ್ವತ ಮನ್ವಂತರ. ಇಲ್ಲಿಂದ ಮುಂದೆ ಬರುವುದು ಶಂಭುಮನ್ವಂತರ. ಅಲ್ಲಿಂದಮುಂದಕ್ಕೆ ಮಹಾನಸ, ಅಲ್ಲಿಂದ ಮುಂದಕ್ಕೆ ವಸಿಷ್ಠ, ಹೀಗೆ ಕಲ್ಪಗಳೂ ಅವುಗಳ ಅಧಿಪತಿಗಳೂ ಸಾಗುತ್ತಿವೆ. ಎಂದು ನಾರದಮಹರ್ಷಿಗಳು ಸಾಂಬನಿಗೆ ಉಪದೇಶಿಸಿದರೆಂಬಲ್ಲಿಗೆ

ಶ್ರೀ ಸಾಂಬಪುರಾಣದಲ್ಲಿ ಯಾತ್ರಾನಿಯಮಕವಾದ ನಲವತ್ತೆರಡನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ತ್ರಿಚತ್ವಾರಿಂಶೋಽಧ್ಯಾಯಃ



॥ ವಸಿಷ್ಠ ಉವಾಚ ॥

ತಸ್ಮಿಂಸ್ತಪೋವನೇ ದೇಶೇ ತೀರೇ ತು ಲವಣೋದಧೇಃ ।
ತಿಷ್ಠಂತಿ ಯೇ ಚ ಸಂಪ್ರಾಪ್ತಾ ದೇವದರ್ಶನಕಾಂಕ್ಷಿಣಃ ॥ ೧ ॥

ಕೇಚಿದ್ಧ್ಯಾಯಂತಿ ಪೂತಾತ್ಮಾನಃ ಕೇಚಿತ್ತದ್ಗತಮಾನಸಾಃ ।
ಯಜಂತಿ ಹವ್ಯಸಂಪನ್ನಾಶ್ಚಿಂತಯಂತ್ಯಾತ್ಮತತ್ಪರಾಃ ॥ ೨ ॥

ಗಾಯಂತಿ ಸಿದ್ಧಗಂಧರ್ವಾ ನೃತ್ಯಂತ್ಯಪ್ಸರಸಾಂ ವರಾಃ ।
ವೀಣಾಹಸ್ತಾಶ್ಚ ಯೇ ಕೇಚಿದರ್ಘಹಸ್ತಾಸ್ತಥಾಪರೇ ॥ ೩ ॥

---

## ನಲವತ್ತುಮೂರನೆಯ ಅಧ್ಯಾಯ.

೧-೨. ಆ ತಪೋವನವು ಲವಣಸಮುದ್ರದ ತೀರಭಾಗದಲ್ಲಿದ್ದಿತು. ಅಲ್ಲಿ ದೇವದರ್ಶನವನ್ನು ಅಪೇಕ್ಷಿಸುವವರೂ, ಪರಿಶುದ್ಧ ಹೃದಯರೂ, ಆತ್ಮಧ್ಯಾನಪರರಾದ ವವರೂ, ಯಜ್ಞಯಾಗಾದಿಗಳಿಂದ ದೇವತೆಗಳನ್ನು ತೃಪ್ತಿಪಡಿಸುವವರೂ, ಬಹಳ ವಾಗಿ ನೆರೆದಿದ್ದರು.

೩-೪. ಅಲ್ಲಿ ಸಿದ್ಧರೂ, ಗಂಧರ್ವರೂ, ಅಪ್ಸರಸ್ಸುಗಳೂ, ವೀಣೆಯನ್ನೂ, ಪೂಜಾ ದ್ರವ್ಯಗಳನ್ನೂ ಕೈಯಲ್ಲಿ ಹಿಡಿದು ನಿಂತಿದ್ದರು. ಕೆಲವರು ಅಂಜಲಿಬದ್ಧರಾಗಿಯೂ

ಕೃತಾಂಜಲಿಪುಟಾಃ ಕೇಚಿತ್ಕೇಚಿದಾನತಮಸ್ತಕಾಃ ।
ಯೋಗಿನೋ ಯೋಗಚಿತ್ತಾಶ್ಚ ಮುನಯೋ ಯತಮಾನಸಾಃ ॥ ೪ ॥

ಋಷಯಃ ಶ್ಶಾಂತಿಸಂಯುಕ್ತಾ ದೇವಾಸ್ತುನ್ವಂತಿ ಭಾಸ್ಕರಂ ।
ಯಾತುಧಾನಾಸ್ತಥಾ ಯಕ್ಷಾಃ ಸಿದ್ಧಾಶ್ಚೈವ ಮಹೋರಗಾಃ ॥ ೫ ॥

ದಿಕ್ಪಾಲಾ ಲೋಕಪಾಲಾಶ್ಚ ಯೇ ಚ ವಿಘ್ನವಿನಾಯಕಾಃ ।
ಸರ್ವೇ ಭಕ್ತಿಪರಾ ಭೂತ್ವಾ ತಿಷ್ಠಂತಿ ಸೂರ್ಯಕಾನನೇ ॥ ೬ ॥

ಕ್ಷೀಣಗಾತ್ರೇಂದ್ರಿಯಪ್ರಾಣಾ ದೇವಾರಾಧನತತ್ಪರಾಃ ।
ಜಾಗರಾರ್ತಿಪರಾಃ ಕ್ಲಿಶ್ಯಾ ಅಧ್ವಭಿಃ ಪರಿಪೀಡಿತಾಃ ॥ ೭ ॥

ಸ್ತೂಯಮಾನಾಃ ಸ್ಥಿತಾಃ ಸರ್ವೇ ಭಾಸ್ಕರೋದಯಕಾಂಕ್ಷಿಣಃ ।
ತತಃ ಪ್ರಭಾತಸಮಯೇ ಪದ್ಮರಾಗಾರುಣಪ್ರಭೇ ॥ ೮ ॥

---

ಹಲವರು ವಿನಮಿತಶಿರಸ್ಕರಾಗಿಯೂ ಅಲ್ಲಿದ್ದರು. ಯೋಗಾಭ್ಯಾಸದಲ್ಲಿ ನಿರತರಾದ ಯೋಗಿಗಳೂ, ಜಿತೇಂದ್ರಿಯರಾದ ಮುನಿಗಳೂ ಅಲ್ಲಿ ತಂಡತಂಡವಾಗಿ ಕಾಣುತ್ತಿದ್ದರು.

೫-೬. ಶಮದಮಾದಿಗಳಿಂದ ಕೂಡಿದ ಋಷಿಗಳೂ ಅಲ್ಲಲ್ಲಿ ಸರ್ವದಾ ಸೂರ್ಯ ಧ್ಯಾನದಿಂದಿರುವರು. ಹಾಗೆಯೇ ರಾಕ್ಷಸರೂ, ಯಕ್ಷರೂ, ಸಿದ್ಧರೂ, ಮಹೋರಗಗಳೂ, ದಿಕ್ಪಾಲಕರೂ, ಲೋಕಪಾಲಕರೂ, ವಿಘ್ನನಿವಾರಕರಾದ ಅನೇಕ ಗಣಾಧಿಪತಿಗಳೂ, ಆ ಮಿತ್ರವನದಲ್ಲಿ ಸದಾ ಸೂರ್ಯಪ್ರಾರ್ಥನೆ ಮಾಡುತ್ತಿದ್ದರು.

೭-೮. ತಪಸ್ಸಿನಿಂದ ಬಳಲಿದ ದೇಹವುಳ್ಳವರಾಗಿಯೂ, ಇಂದ್ರಿಯ ಶಕ್ತಿ ಹೀನರಾಗಿಯೂ, ಸದಾ ದೇವಾರಾಧನತತ್ಪರರಾಗಿಯೂ, ಜಾಗ್ರತಾವಸ್ಥೆಯಲ್ಲಿಯೇ ಕಾಲಕಳೆಯುತ್ತ ಮಾರ್ಗಾಯಾಸದಿಂದ ಬಳಲಿದವರಾಗಿಯೂ, ಇದ್ದ ಮಹರ್ಷಿಗಳು ಭಾಸ್ಕರದರ್ಶನಾಕಾಂಕ್ಷಿಗಳಾಗಿ, ಪ್ರಾತಃಕಾಲದಲ್ಲಿ ಪದ್ಮರಾಗಮಣಿಯಂತೆ ಪ್ರಕಾಶಮಾನವಾದ ಬಿಂಬವನ್ನೇ ನೋಡುತ್ತಿದ್ದರು.

**ವಿಮಲಾ ಭೂರ್ದಿಶಸ್ಸರ್ವಾಃ ಕಿರಣೋದ್ಯೋತನ್ಯೈ ರವೇಃ ।**
**ಸ್ತೂಯಮಾನಾಃ ಸ್ಥಿತಾಸ್ಸರ್ವೇ ಭಾಸ್ಕರೋದಯಕಾಂಕ್ಷಿಣಃ ॥ ೯ ॥**

**ರವಿರಾಗಾರುಣೀಭೂತಂ ಸಾಗರಾಕಾಶಭೂತಲಂ ।**
**ತತ್ಕ್ಷಣೇನೈವ ಸರ್ವಾಸಾಮ್ಯೈಕಜ್ವಾಲಾತ್ವಮಾಗತಾಃ ॥ ೧೦ ॥**

**ತಸ್ಯಾಮುದಯವೇಲಾಯಾಂ ವಿವಸ್ವದ್ವ್ಯೈಕಮಾಸ್ಪದಂ ।**
**ವೀಕ್ಷ್ಯಮಾಣಾದ್ಭುತಂ ರೂಪಂ ವಿರಾಜಂತಂ ದಿವಾಕರಂ ॥ ೧೧ ॥**

**ದಿವಿಸ್ಥಂ ಸಾಗರಸ್ಥಂ ಚ ದ್ವಿವಿಧಂ ಮಂಡಲೋದ್ಧೃತಂ ।**
**ಅಪರಾ ಭಗವನ್ಮೂರ್ತಿರ್ಜಲಮಧ್ಯೇ ವಿರಾಜತೇ ॥ ೧೨ ॥**

**ಸರ್ವೇ ವಿಸ್ಮಯಮಾಪನ್ನಾ ದೃಷ್ಟ್ವಾ ಚಾದ್ಭುತದರ್ಶನಂ ।**
**ಮನವೋ ಬಾಹುಸಂವಾಹ್ಯೈರವತೀರ್ಣಾ ಮಹೋದಧಿಂ ॥ ೧೩ ॥**

---

೯-೧೦. ಆ ವನವು ಸೂರ್ಯನ ಕಿರಣಪರಂಪರೆಯಿಂದ ಪರಿಶುದ್ಧವಾಗಿದ್ದಿತು. ಅಂತಹ ದಿವ್ಯವನದಲ್ಲಿ ಎಲ್ಲರೂ ಸೂರ್ಯೋದಯವನ್ನೇ ಎದುರು ನೋಡುತ್ತಾ ನಿಂತಿದ್ದರು. ಸೂರ್ಯನ ಕಾಂತಿಯಿಂದ ಸಮಸ್ತ ಭೂಮಿಯೂ, ಸಮಸ್ತ ಸಾಗರಗಳೂ, ಕೆಂಪಾಗಿ ಕಾಣುತ್ತಿದ್ದವು. ಅದನ್ನೆಲ್ಲಾ ನೋಡಿದರೆ ಎಲ್ಲವೂ ಏಕಜ್ವಾಲಾರೂಪದಲ್ಲಿ ಕಾಣುತ್ತಿದ್ದವು.

೧೧-೧೨. ಸೂರ್ಯೋದಯ ಕಾಲದಲ್ಲಿ ಅಲ್ಲಿ ಸೂರ್ಯನು ಅದ್ಭುತವಾದ ಕಾಂತಿಯಿಂದ ಪ್ರಕಾಶಿಸುತ್ತಾ, ಸಾಗರದಲ್ಲಿ ಪ್ರತಿಬಿಂಬರೂಪವನ್ನು ತೋರಿಬರುತ್ತಿರುವನು. ಆತನು ಅಂತರಿಕ್ಷದಲ್ಲಿ, ಸಾಗರದಲ್ಲಿ, ಮಂಡಲದ್ವಯಾಕಾರದಿಂದ ಇರುವಂತೆ ತೋರುವನು. ಅಥವಾ ಸೂರ್ಯಬಿಂಬಸದೃಶವಾದ ಮತ್ತೊಂದು ಮೂರ್ತಿಯೇ ಅಲ್ಲಿ ಬಂದಿರುವುದೋ ಎಂಬಂತೆ ಕಂಡುಬರುತ್ತಿರುವುದು.

೧೩-೧೪. ಅಷ್ಟು ಸೌಂದರ್ಯದಿಂದ ಉದಯವಾದ ಸೂರ್ಯದೇವನನ್ನು ನೋಡಿ ಅಲ್ಲಿದ್ದ ಮನುಗಳೆಲ್ಲರೂ, ಲವಣಸಮುದ್ರವ ಬಾಹುಪ್ರಮಾಣದ ನೀರಿನಲ್ಲಿ

ಬಾಹುಭಿಸ್ಸಂಗೃಹೀತ್ವಾ ತು ಹ್ಯಾಸಯಿತ್ವಾ ತಪೋವನಂ ।
ಸ್ನಾಪಯಿತ್ವಾ ವಿಧಾನೇನ ಮನವೋ ಹೃಷ್ಟಮಾನಸಾಃ ॥ ೧೪ ॥

ಸ್ತೋತ್ರೈಃ ಸ್ತುವಂತಿ ತೇ ಚಿತ್ರೈಃ ಸಾಂಗೋಪಾಂಗೈಃ ಸುಸಂಮಿತೈಃ ।
ತ್ವಂ ದೇವಪ್ರಲಯಃ ಕಾಲಃ ಕ್ಷಯಃ ಕ್ಷಾಂತಃ ಕ್ಷಪಾನಲಃ ॥ ೧೫ ॥

ಉದ್ಭವಃ ಸ್ಥಿತಿಸಂಪತ್ತಿಃ ಪ್ರಜಾಸ್ತೇ ಚಾಂಗಸಂಭವಾಃ ।
ಶೋಷವರ್ಷಹಿಮಂ ಘರ್ಮಪ್ರಹ್ಲಾದಸುಖಶೀತಲಂ ॥ ೧೬ ॥

ತ್ವಂ ದೇವಋಷಿಕರ್ತಾ ಚ ಪ್ರಕೃತಿಃ ಪುರುಷಃ ಪ್ರಭುಃ ।
ಛಾಯಾಸಂಜ್ಞಾಪ್ರತಿಷ್ಠಾಪಿ ನಿರಾಲಂಬೋ ನಿರಾಶ್ರಯಃ ॥ ೧೭ ॥

---

ನಿಂತು ತಮ್ಮ ಬಾಹುಗಳನ್ನು ಮೇಲೆತ್ತಿಕೊಂಡು, ತಪೋವನವನ್ನು ಪ್ರೋಕ್ಷಣಾದಿಗಳಿಂದ ಶುದ್ಧಿಮಾಡಿ, ಸಂತುಷ್ಟಾಂತರಂಗವುಳ್ಳವರಾಗಿ ಭಗವಂತನನ್ನು ಹೀಗೆ ಪ್ರಾರ್ಥಿಸಿಕೊಂಡರು.

೧೫-೧೬. ಅವರ ಪ್ರಾರ್ಥನೆಯು ವೇದವಿಹಿತವಾದದ್ದಾಗಿದ್ದಿತು. "ಎಲೈ ದೇವದೇವನೇ. ನೀನು ಪ್ರಳಯರೂಪಿಯು. ಕಾಲರೂಪಿಯಾಗಿದ್ದು ಲೋಕವನ್ನೆಲ್ಲಾ ನಾಶಗೊಳಿಸುವವನು. ರಾತ್ರಿಯ ಕಾಲದಲ್ಲಿ ಅಗ್ನಿಗೆ ತೇಜಸ್ಸನ್ನು ಕೊಡುವವನು. ಪ್ರತಿದಿನವೂ ಉದ್ಭವವಾದಂತೆ ತೋರಿಬರುವನು. ಸಂಪದ್ರೂಪದಲ್ಲಿ ಕಾಣುತ್ತಿರುವೆ. ಪರಮಾತ್ಮನೇ, ನಿನ್ನ ಈ ಪ್ರಜೆಗಳೆಲ್ಲರೂ, ನಿನ್ನ ಅಂಗದಿಂದ ಹುಟ್ಟಿದವರೇ. ವೃಷ್ಟಿಯನ್ನೂ, ಹಿಮವನ್ನೂ, ಶೋಷಿಸಿ ಶಾಖವನ್ನೂ ಕೊಟ್ಟು ಜನರಿಗೆ ಆಹ್ಲಾದಕರನ್ನಾಗಿಯೂ ಮಾಡಿ ಸುಖರೂಪದಲ್ಲಿಯೂ, ಕೆಲವು ವೇಳೆ ಶೀತಲವಾಗಿಯೂ, ತೋರಿಬರುವೆ.

೧೭-೧೮. ದೇವತೆಗಳನ್ನೂ ಋಷಿಗಳನ್ನೂ ಸೃಷ್ಟಿಸುವವನೂ ನೀನೇ. ಲೋಕಸೃಷ್ಟಿಗೆ ಮೂಲಕಾರಣವಾದ ಪ್ರಕೃತಿಯೂ, ಪುರುಷನೂ, ಪ್ರಭುರೂಪಿಯೂ ಆಗಿರುವವನು ನೀನು. ಛಾಯಾ, ಸಂಜ್ಞಾ ಎಂಬ ಹೆಸರಿನ ಪತ್ನಿಯರಿಂದ ಕೂಡಿ,

ಆಶ್ರಯಃ ಸರ್ವಭೂತಾನಾಂ ನಮಸ್ತೇಽಸ್ತು ಸದಾ ಮಮ ।
ತ್ವಂ ದೇವಸ್ಸರ್ವತಶ್ಚಕ್ಷುಃ ಸರ್ವತಃ ಸರ್ವದಾಗತಿಃ ॥ ೧೮ ॥

ಸರ್ವದಃ ಸರ್ವದಾ ಸರ್ವಃ ಸರ್ವಸೇವ್ಯಸ್ತ್ವಮಾರ್ತಿಹಾ ।
ತ್ವಂ ದೇವ ಧ್ಯಾನಿನಾಂ ಧ್ಯಾನಂ ಯೋಗಿನಾಂ ಯೋಗ ಉತ್ತಮಃ ॥ ೧೯ ॥

ತ್ವಂ ಭಾಸಾ ಫಲದಃ ಸರ್ವಃ ಸದ್ಯಃ ಪಾಪಹರೋ ವಿಭುಃ ।
ಸರ್ವಾರ್ತಿನಾಶನೋಽನಾಶೀ ಕರಣಂ ಕರುಣಾಪ್ರಭುಃ ॥ ೨೦ ॥

ದಯಾಶಕ್ತಿಃ ಕ್ಷಮಾವಾಸಃ ಸಘೃಣಿರ್ಘೃಣಿಮೂರ್ತಿಮಾನ್ ।
ತ್ವಂ ದೇವಃ ಸೃಷ್ಟಿಸಂಹಾರಸ್ಥಿತಿರೂಪಃ ಸುರಾಧಿಪಃ ॥ ೨೧ ॥

---

ನೀಲಾಂಬರವಾದ ಗಗನಮಾರ್ಗದಲ್ಲಿ ಆಶ್ರಯರಹಿತನಾಗಿ ಸಂಚರಿಸುತ್ತಿದ್ದರೂ ನೀನು ಮಾತ್ರ ಸಕಲ ಲೋಕಕ್ಕೂ ಆಶ್ರಯನಾಗಿರುವೆ. ದೇವದೇವನೇ, ನೀನೇ ಲೋಕದ ಕಣ್ಣು. ಸರ್ವಜ್ಞನಾಗಿ, ಸರ್ವ ಗತಿಯಾಗಿರುವವನೂ ನೀನೇ.

೧೯-೨೦. ನೀನು ಭಕ್ತರಿಗೆ ಸರ್ವವನ್ನೂ ಅನುಗ್ರಹಿಸುವವನು. ಸರ್ವದಾ ಭಕ್ತರಿಂದ ಸೇವ್ಯನಾಗಿರುವವನು. ಭಕ್ತರ ಸಕಲ ಪೀಡೆಗಳನ್ನೂ ನಾಶಮಾಡುವವನು. ಧ್ಯಾನಮಾಡುವವರಿಗೆಲ್ಲಾ ನೀನು ಧ್ಯಾನವಿಷಯನಾಗಿರುವೆ. ಯೋಗಿಗಳಿಗೆಲ್ಲಾ ನೀನು ಯೋಗರೂಪದಲ್ಲಿರುವೆ. ನೀನು ನಿನ್ನ ಕಿರಣಗಳಿಂದ ಸರ್ವರಿಗೂ ಫಲಪ್ರದನಾಗಿರುವೆ. ನಿನ್ನ ದರ್ಶನಮಾತ್ರದಿಂದಲೇ ಎಲ್ಲರ ಪಾಪಗಳನ್ನೂ ನಾಶಗೊಳಿಸುವೆ. ಸರ್ವರಿಗೂ ದುಃಖನಿವಾರಕನಾಗಿರುವೆ. ಆದರೆ ನೀನು ಮಾತ್ರ ನಾಶಕ್ಕೆ ವಿಷಯನಾಗಲಾರೆ. ದಯ ಸಾಗರನೆಂದೂ ದಯಾನಿಧಿಯೆಂದೂ ಹೆಸರು ಪಡೆದಿರುವೆ.

೨೧-೨೨. ದಯೆ, ಶಕ್ತಿ, ಶಾಂತಿ, ಇವುಗಳಿಗೆ ನೀನು ಆಶ್ರಯಸ್ಥಾನನಾಗಿ ತೋರುವೆ. ಕಿರಣರೂಪಿಯಾಗಿ, ಕಿರಣಗಳಿಂದ ಕೂಡಿರುವ ನೀನು,ಸೃಷ್ಟಿ,ಸ್ಥಿತಿ, ಲಯ (ಸಂಹಾರ) ಮುಂತಾದ ಕಾರ್ಯಗಳಿಗೆ ಕಾರಣನಾಗಿರುವೆ. ಸಕಲ ದೇವತೆಗಳಿಗೂ, ನೀನೇ ಒಡೆಯನೆನಿಸಿರುವೆ. ಬಕರೂಪದಲ್ಲಿ, ಅಗ್ನಿರೂಪದಲ್ಲಿ ಶೋಷಿಸುವವನೂ,

ಬಕ ಸ್ತೋಷೋ ವೃಕೋ ದಾಹಸ್ತುಷಾರೋ ದಹನಾತ್ಮನಃ ।
ಪ್ರಣತಾರ್ತಿಹರೋ ಯೋಗೀ ಯೋಗಮೂರ್ತೇ ನಮೋಸ್ತುತೇ ॥ ೨೨ ॥

ತ್ವಂ ದೇವಹೃದಯಾನಂದಶಿರೋರತ್ನ ಪ್ರಭಾಮಣಿಃ ।
ಬೋಧಕಃ ಪಾಠಕೋಧ್ಯಾಯೀ ಗ್ರಾಹಕೋ ಗ್ರಹಣಾತ್ಮಕಃ ॥ ೨೩ ॥

ತ್ವಂ ದೇವನಿಯಮೋ ನ್ಯಾಯೀ ನ್ಯಾಯಜ್ಞೋ ನ್ಯಾಯವರ್ಧನಃ ।
ಅನಿತ್ಯೋ ನಿಯತೋ ನಿತ್ಯೋ ನ್ಯಾಯಮೂರ್ತೇ ನಮೋಸ್ತು ತೇ॥ ೨೪ ॥

ತ್ವಂ ದೇವ ತ್ರಾಯಸೇ ಪ್ರಾಪ್ತಾನ್ ಪಾಲಯಸ್ಯರ್ಣವಸ್ಥಿತಾನ್ ।
ಊರ್ಧ್ವಂ ತ್ರಾಣಾರ್ದಿತಾಂಲ್ಲೋಕಾಂಲ್ಲೋಕಚಕ್ಷುರ್ನಮೋಸ್ತುತೇ ॥೨೫॥

---

ಷ್ಕರರೂಪದಲ್ಲಿ, ಲೋಕವನ್ನು ದಹಿಸುವವನಾಗಿಯೂ, ಮಂಜಿನರೂಪದಲ್ಲಿಯೂ ಅಗ್ನಿರೂಪದಲ್ಲಿಯೂ ತೋರುತ್ತ ಇರುವೆ. ನಿನ್ನನ್ನು ಭಕ್ತಿಯಿಂದಾರಾಧಿಸಿದವರ ಪೀಡೆಗಳನ್ನೆಲ್ಲಾ ಪರಿಹರಿಸುತ್ತಿರುವೆ. ಯೋಗಮೂರ್ತಿಯಾದ ನೀನು ಯೋಗಶಾಸ್ತ್ರಕ್ಕೆ ಅಧಿದೇವತೆಯೆನಿಸಿರುವೆ. ಮಹಾ ಮಹಿಮನಾದ ಸೂರ್ಯದೇವನೇ, ನಿನಗೆ ವಂದನೆ.

೨೩-೨೪. ಮಹಾಮುನಿಯೇ, ನೀನು ಸಕಲದೇವತೆಗಳಿಗೂ ಆನಂದದಾಯಕನಾಗಿ ಅವರಿಗೆಲ್ಲಾ ಶಿರೋರತ್ನದಂತೆ ಪ್ರಕಾಶಮಾನನಾಗಿರುವೆ. ಬ್ರಹ್ಮವಿದ್ಯೆಯನ್ನು, ಬೋಧಿಸುವವನೂ, ಪಾಠರೂಪವಾಗಿ ಬೋಧಿಸುವವನೂ, ಅಧ್ಯಯನ ಮಾಡುವವನೂ, ಗ್ರಹಿಸುವವನೂ, ಗ್ರಹಣಾತ್ಮಕನೂ ನೀನೇ ಆಗಿರುವೆ. ಅಲ್ಲದೆ ನೀನು ಸಕಲ ದೇವತೆಗಳಿಗೂ ನಿಯಾಮಕನಾಗಿರುವೆ. ನ್ಯಾಯವಿಶಿಷ್ಟನಾಗಿಯೂ, ನ್ಯಾಯರೂಪಿಯಾಗಿಯೂ, ನ್ಯಾಯಜ್ಞನಾಗಿಯೂ, ನ್ಯಾಯವರ್ಧಕನಾಗಿಯೂ ಇರುವೆ. ನಿತ್ಯಸ್ವರೂಪನಾಗಿದ್ದರೂ, ಅನಿತ್ಯವಸ್ತುವಿನಂತೆ ತೋರುತ್ತಿರುವೆ. ಹೀಗೆ ನಿತ್ಯಾತ್ಮಕನಾದ ಮತ್ತು ನ್ಯಾಯಮೂರ್ತಿಯಾದ ನಿನಗೆ ಪ್ರಣಾಮಗಳು.

೨೫-೨೬. ದೇವದೇವನೇ, ನೀನು ನನ್ನನ್ನೂ ಮೊರೆಹೊಕ್ಕವರನ್ನೂ ರಕ್ಷಿಸುತ್ತಿರುವೆ. ಸಮುದ್ರಮಧ್ಯದಲ್ಲಿರುವವರಿಗೂ, ನೀನೇ ಪಾಲಕನು. ಊರ್ಧ್ವಾಧೋಲೋ

ದಮನೋಸಿ ತ್ವಂ ಹಿ ದುರ್ದಾಂತಃ ಸಾಧ್ಯಾನಾಂ ಚೈವ ಸಾಧಕಃ ।
ಬಂಧುಸ್ತ್ವಂ ಬಂಧುಹೀನಾನಾಂ ನಮಸ್ತೇ ಬಂಧುರೂಪಿಣೇ ॥ ೨೬ ॥

ಕುರು ಶಾಂತಿಂ ದಯಾವಾಸ ಪ್ರಸೀದ ಜಗತಃಪತೇ ।
ಯದಾಸ್ಮಾಭಿರ್ಹಿತಂ ವಾಕ್ಯಮಭೀಷ್ಟಂ ಕೀರ್ತಿತಂ ಪ್ರಭೋ ।
ಏವಂ ಸ್ತುತ್ವಾ ತತಸ್ಸರ್ವೇ ಪಪ್ರಚ್ಛುಃ ಪ್ರತಿಮಾಂ ರವೇಃ ॥ ೨೭ ॥

ಕೇನೇಯಂ ನಿರ್ಮಿತಾಮೂರ್ತಿಃ ಕೇನ ತ್ವಂ ಪ್ರತಿಪಾದಿತಃ ।
ಕಸ್ಮಾದಿಹಾಗತೋ ದೇವ ಸಂಶಯೋತ್ರ ನಿಯುಜ್ಯ ನಃ ॥ ೨೮ ॥

॥ ದೇವ ಉವಾಚ ॥

ತಸ್ಮಿನ್ ಕಾಲೇ ಸಮಾದೇಶಾನ್ನಿರ್ಮಿತಾ ವಿಶ್ವಕರ್ಮಣಾ ।
ಸರ್ವಲೋಕಹಿತಾರ್ಥಾಯ ಸಸುರೈರರ್ಚಿತಾ ಪುರಾ ॥ ೨೯ ॥

---

ಕಾಂತರ್ವರ್ತಿಗಳಾಗಿರುವವರನ್ನೆಲ್ಲಾ ನೀನು ಕಾಪಾಡುವೆ. ನೀನು ಲೋಕಚಕ್ಷುವೆನಿಸಿರುವೆ. ದುಷ್ಟರನ್ನೆಲ್ಲಾ ಶಿಕ್ಷಿಸುವುದರಲ್ಲಿಯೂ, ಸಾಧ್ಯವಸ್ತುಗಳನ್ನು ಸಾಧಿಸುವುದರಲ್ಲಿಯೂ ನೀನೇ ಸಮರ್ಥನು. ಬಂಧುಹೀನರಿಗೆಲ್ಲಾ ನೀನೇ ಆಪದ್ಬಂಧುವು. ಹೀಗೆ ಭಕ್ತರ ಬಂಧು ರೂಪಿಯಾದ ನಿನಗೆ ವಂದನೆ.

೨೭-೨೮. ದಯಾಸಮುದ್ರನೇ, ನಮಗೆ ಪ್ರಸನ್ನನಾಗು. ಜಗತ್ಪತಿಯೇ, ನಮಗೆ ವರವನ್ನೀಡು. ನಾವು ನಿನ್ನನ್ನು ಪ್ರಾರ್ಥಿಸಿದುದು ನಿನಗೆ ಸಮ್ಮತವಾದರೇ, ನಾವು ಕೇಳಿಕೊಳ್ಳುವ ವಿಷಯವನ್ನು ನಮಗೆ ಅನುಗ್ರಹಿಸು. ದೇವದೇವನೇ, ಈ ನಿನ್ನ ಮೂರ್ತಿಯನ್ನು ನಿರ್ಮಿಸಿದವರಾರು ? ನಿನ್ನ ವಿಷಯವನ್ನು ಪ್ರತಿಪಾದಿಸಿರುವವರು ಯಾರು ? ಯಾರಿಗಾಗಿ ನೀನು ಈ ತಪೋವನಕ್ಕೆ ಬಿಜಯಮಾಡಿರುವೆ ? ದಯವಿಟ್ಟು ನಮಗೆ ಬಂದಿರುವ ಈ ಸಂಶಯಗಳನ್ನು ನಿವಾರಿಸುವವನಾಗು." ಎಂದು ಅಲ್ಲಿದ್ದವರೆಲ್ಲರೂ ಪ್ರಾರ್ಥಿಸಿಕೊಂಡರು.

೨೯-೩೦. ಆಗ ಸ್ವಾಮಿಯು ಹೀಗೆ ತನ್ನ ಮೂರ್ತಿಯ ವಿಷಯವನ್ನು ವಿವರಿಸಿದನು. " ಎಲೈ ಮುನಿಗಳಿರಾ, ಹಿಂದೆ ವಿಶ್ವಕರ್ಮನು ದೇವತೆಗಳಿಂದ ಪ್ರಾರ್ಥಿ

ತಸ್ಮಿನ್ ಹಿಮವತಃ ಪೃಷ್ಠೇ ಕಲ್ಪವೃಕ್ಷೇ ನಿಧಾಪಿತಾ ।
ತಸ್ಮಾತ್ತು ಚಂದ್ರಭಾಗಾಯಾಂ ಪ್ರವಿಷ್ಟಾ ಸ್ಥಾನಕಾರಣಾತ್ ॥ ೩೦ ॥

ಚಂದ್ರಭಾಗಾಯಾ ವೈಪಾಶಂ ವೈಪಾಶಾಚ್ಚ ಶತದ್ರವಂ ।
ಶತದ್ರವಾಚ್ಚ ವಿಜ್ಞೇಯಾ ಪ್ರವಿಷ್ಟಾ ಯಮುನಾಂ ನದೀಂ ॥ ೩೧ ॥

ಯಮುನಾತೋ ಜಾಹ್ನವೀಂ ಚ ತಯಾ ನೀತಾ ಶನೈಶ್ಶನೈಃ ।
ಭಾಗೀರಥೀತೋ ವಿಜ್ಞೇಯಾ ಮೋದಗಂಗಾಮಹಾನದೌ ॥ ೩೨ ॥

ಮನ್ಯೈವಾನುಗ್ರಹೇಣಾಸೌ ತೀರ್ಥಾನಾಂ ಪ್ರವರಃ ಸ್ಮೃತಃ ।
ತಸ್ಮಾದ್ವೈ ಮೋದಗಂಗಾಯಾಃ ಪ್ರವಿಷ್ಟಾ ಲವಣೋದಧಿಂ ॥ ೩೩ ॥

ಸಾಂಪ್ರತಂ ಚ ಪ್ರವರ್ತಧ್ವಂ ಸ್ಥಾಪನಂ ಮೇ ಮನೂತ್ತಮಾಃ ।
ಶ್ರುತ್ವಾ ದೇವಾಸ್ತು ತದ್ವಾಕ್ಯಂ ನಿರ್ಮಲಂ ಪ್ರೀತಿವರ್ಧನಂ ॥ ೩೪ ॥

---

ತನಾಗಿ ಸರ್ವಲೋಕ ಹಿತಾರ್ಥವಾಗಿ ಈ ಪ್ರತಿಮೆಯನ್ನು ನಿರ್ಮಿಸಿದೆನು. ಆ ಮೂರ್ತಿಯು ಹಿಮಾಲಯದ ತಪ್ಪಲಿನಲ್ಲಿರುವ ಕಲ್ಪವೃಕ್ಷದ ಕೆಳಗೆ ಸ್ಥಾಪಿಸಲ್ಪಟ್ಟಿತು. ಅಲ್ಲಿಂದ ಸ್ಥಾನಪಲ್ಲಟವಾಗಿ ಚಂದ್ರಭಾಗಾನದಿಗೆ ಈ ಪ್ರತಿಮೆಯು ಸೇರಿತು.

೩೧-೩೨. ಆ ಚಂದ್ರಭಾಗಾ ನದಿಯಿಂದ, ವೈಪಾಶನದಿಗೂ, ಅಲ್ಲಿಂದ ಶತದ್ರೂ ನದಿಗೂ, ಅಲ್ಲಿಂದ ಯಮುನಾನದಿಗೂ, ಯಮುನೆಯಿಂದ ಗಂಗಾನದಿಗೂ, ಗಂಗಾ ನದಿಯಿಂದ ಮೋದಗಂಗಾನದಿಗೂ ಬಂದು ಸೇರಿತು.

೩೩-೩೪. ಅಲ್ಲಿಂದ ಈ ಮೂರ್ತಿಯು ನನ್ನ ಅನುಗ್ರಹದಿಂದ ಇಲ್ಲಿಗೆ ಬಂದು ಈಗ ಲವಣಸಮುದ್ರವನ್ನು ಸೇರಿದೆ. ಈಗ ನೀವು ಈ ಮೂರ್ತಿಯನ್ನು ವಿಧಿವತ್ತಾಗಿ ಇಲ್ಲಿ ಸ್ಥಾಪನೆ ಮಾಡಿರಿ." ಎಂದು ಹೇಳಿದ ದೇವದೇವನ ಮಾತುಗಳನ್ನು ಕೇಳಿದ ಆ ಮನುಗಳು,

ಪ್ರಾಂಜಲಿಪ್ರಣತಾ ಭೂತ್ವಾ ಸ್ತೂಯಮಾನಾ ರವಿಂ ಸ್ಥಿತಾಃ ।
ತೇಷೋ ವೈವಸ್ವತಃ ಪ್ರಾಜ್ಞಃ ಸರ್ವಧರ್ಮಪ್ರಣೋದಿತಃ ॥ ೩೫ ॥

ಕಾರಯಾಮಾಸ ವಿಪ್ರಾತ್ತು ರವೇರ್ದೇವಾಲಯಂ ಶುಭಂ ।
ಸ್ಥಾಪಯಿತ್ವಾ ರವಿಂ ಭಕ್ತ್ಯಾ ತ್ರಿಃಸ್ಥಾನೇಷು ಸುರೋತ್ತಮಾಃ ॥ ೩೬ ॥

ನಿವೃತ್ತಿಂ ಯಾಂತಿ ಸುಕೃತೋ ದೇವಕಾರ್ಯಾರ್ಥತತ್ಪರಾಃ ।
ಸರ್ವೇ ದೀಕ್ಷಾಪರಾ ಭೂತ್ವಾ ಭಾಸ್ಕರಾದ್ವಿಧಿಕಾಂಕ್ಷಿಣಃ ॥ ೩೭ ॥

ಯತೋಽಧಿಮಂಡಲಂ ಕುರ್ಯುಸ್ತದ್ಗತೈರಂತರಾತ್ಮಭಿಃ ।
ಲಿಖಿತಂ ಮಂಡಲಂ ದಿವ್ಯಂ ಯಥೋಕ್ತಂ ಭಾಸ್ಕರೇಣ ತು ॥ ೩೮ ॥

ಯಥಾವಿಧಿಸಮುದ್ದಿಷ್ಟಾಂ ಕ್ರಿಯಾಂ ಸೌರಿಸಮಾಶ್ರಿತಾಂ ।
ವಿಶ್ವಕರ್ಮಾಭ್ಯನುಜ್ಞಾಯ ಸರ್ವಾಣಾಂ ಮೂರ್ಧಜಾಃ ಪ್ರಜಾಃ ॥ ೩೯ ॥

---

೩೫-೩೬. ಅಂಜಲಿಬದ್ಧರಾಗಿ ನಿಂತುಕೊಂಡು ಸೂರ್ಯದೇವನನ್ನು ಬಹುವಾಗಿ ಸ್ತುತಿಸಿದರು. ಅವರಲ್ಲಿ ವೈವಸ್ವತಮನುವು ಮಹಾ ಧರ್ಮಿಷ್ಠನಾದುದರಿಂದ, ದೇವಾಲಯವನ್ನು ನಿರ್ಮಿಸಿ, ಸೂರ್ಯಪ್ರತಿಮೆಯನ್ನು ಬ್ರಾಹ್ಮಣರ ಮೂಲಕ ಪ್ರತಿಷ್ಠೆ ಮಾಡಿಸಿದನು. ಅದೇ ರೀತಿ ಸೂರ್ಯಪ್ರತಿಮೆಯನ್ನು ಮೂರು ಸ್ಥಳಗಳಲ್ಲಿ ಸ್ಥಾಪನೆ ಮಾಡಿಸಿದನು.

೩೭-೩೮. ಎಲ್ಲ ಮನುಗಳೂ ಈ ರೀತಿ ರವಿ ದೀಕ್ಷಾಬದ್ಧರಾಗಿದ್ದು ದೇವ ಕಾರ್ಯ ಗಳನ್ನು ನಡೆಸುತ್ತಾ ಭಾಸ್ಕರಾರಾಧನೆಯಲ್ಲಿ ನಿರತರಾಗುವರು. ಯಾರು ಸೂರ್ಯಾಂತ ರ್ಗತವಾದ ದೇವತಾಧ್ಯಾನಪೂರ್ವಕವಾಗಿ, ಸೂರ್ಯೋಕ್ತರೀತಿಯಲ್ಲಿ ಸೂರ್ಯಮಂಡಲ ವನ್ನು ಬರೆಸಿ ಪೂಜಿಸುವರೋ, ಅವರು ಸುಖಿಗಳಾಗುವರು.

೩೯-೪೧. ಈ ಸೂರ್ಯಾನುಗ್ರಹದಿಂದ ಪ್ರಜಾಸೃಷ್ಟಿಸಾಮರ್ಥ್ಯವನ್ನು ಪಡೆದ ಆ ಮನುಗಳು ವಿಶ್ವಕರ್ಮನ ಅಪ್ಪಣೆಯನ್ನು ಪಡೆದು ತಮ್ಮ ಕೇಶದಿಂದಲೇ ಪ್ರಜೆ

**ತತೋ ನಾಮ ಪ್ರಕುರ್ವಂತಿ ಸಂಪ್ರಹೃಷ್ಟತನೂರುಹಾಃ ।**
**ಅನೇನ ಮುಂಡಿತಾಸ್ಸರ್ವೇ ತೇನ ಮುಂಡೀತ ಉಚ್ಯತೇ ॥ ೪೦ ॥**

**ಅಥ ಕೃತಾರ್ಥಸಂಜ್ಞಾಶ್ಚ ನಿಗಮಜ್ಞೈರುದಾಹೃತಾಃ ।**
**ಮುಂಡಿಪ್ರಮರ್ದನೇ ಧಾತುಃ ಸಂಜ್ಞಾಯಾಂ ಚ ವಿಧೀಯತೇ ।**
**ಪ್ರಕರ್ಷಾದರ್ದಯೇದ್ಯೇನ ತೇನ ಮುಂಡೀರ ಉಚ್ಯತೇ ॥ ೪೧ ॥**

**॥ ವಸಿಷ್ಠ ಉವಾಚ ॥**

**ಏವಮಾದ್ಯಮಿದಂ ಸ್ಥಾನಂ ಕೀರ್ತ್ಯತೇ ಚ ಯುಗೇ ಯುಗೇ ।**
**ಸರ್ವಪಾಪಹರಂ ಪುಣ್ಯಂ ಸರ್ವತೀರ್ಥಮಯಂ ಶುಭಂ ॥ ೪೨ ॥**

**ಯೇ ತು ಕೇಚಿನ್ನರಾ ಲೋಕೇ ಭಕ್ತಿಯುಕ್ತಾ ನಿವೇದಕಾಃ ।**
**ತಸ್ಮಿನ್ಯಂತ್ರೇ ಸಮಾಪನ್ನಾಃ ಸದ್ಯೋ ಮುಂಚಂತಿ ವರ್ತಿತಾಃ ॥ ೪೩ ॥**

---

ಗಳನ್ನು ಸೃಷ್ಟಿಮಾಡಿದರು. ಸೃಷ್ಟರಾದವರೂ ಸಹ ಉದ್ದವಾದ ತಲೆಗೂದಲುಳ್ಳವರಾಗಿ ಕಂಡುಬಂದರು. ಅದರಿಂದಲೇ ಅವರಿಗೆ ಮುಂಡಿತರು ಅಥವಾ ಮುಂಡೀರರು ಎಂಬ ಹೆಸರುಂಟಾಯಿತು. ಮುಡಿ ಪ್ರಮರ್ದನೆ ಎಂಬ ಧಾತುವಿನಿಂದ ನಿಷ್ಪನ್ನವಾದ ಮುಂಡೀರಶಬ್ದವು ದೀರ್ಘಕೇಶ ವಿಶಿಷ್ಟರಾದ ಆ ಪ್ರಜಾವರ್ಗಕ್ಕೆ ಸಂಜ್ಞೆಯಾಗಿ ನಿಂತುಹೋಯಿತು.

೪೨-೪೩. ಹೀಗೆ ಈ ಸೂರ್ಯಸ್ಥಾನವೇ ಲೋಕದಲ್ಲಿ ಆದಿಭೂತವಾದ ಕ್ಷೇತ್ರವೆನಿಸಿದೆ. ಇದು ಸರ್ವಪಾಪ ಪ್ರಣಾಶಕವಾದದ್ದೆಂದೂ, ಸರ್ವತೀರ್ಥ ಮಯವಾದದ್ದೆಂದೂ ಹೇಳಲ್ಪಟ್ಟಿದೆ. ಈ ಸ್ಥಳದಲ್ಲಿ ಭಕ್ತಿಯುಕ್ತರಾಗಿ ಯಾರು ಸೂರ್ಯಯಂತ್ರಗಳನ್ನು ಸೇವಿಸುವರೋ, ಅವರು ಒಡನೆಯೇ ಸಕಲ ದುಃಖಗಳಿಂದಲೂ ಮುಕ್ತರಾಗುವರು.

**ಕೇಚಿತ್ತೇತುವರ್ುಹಾನೋಹಾದಸ್ಮಿಂಸ್ತೀರ್ಥೇ ವಿಬುದ್ಧಯಃ ।**
**ನ ತೇಷಾಂ ಸಂಪದಾಂ ಸ್ಥೈರ್ಯಂ ಯದಿ ಪ್ರಾಪ್ತಂ ಸುದುಷ್ಕರಂ ॥ ೪೪ ॥**

**ಯಾವತ್ಪ್ರತಪತೇ ಭಾನುರ್ಯಾವಚ್ಚ ಲವಣೋದಧಿಃ ।**
**ಯಾವದ್ಭೂಮಿಧರಾ ದೇವಾಸ್ತಾವತ್ಕೀರ್ತಿರ್ವಿಭಾವಸೋಃ ॥ ೪೫ ॥**

**ಯೇ ಚ ಪಾಪಸಮಾಯುಕ್ತಾ ಜಾಯಂತೇ ಭುವಿ ಮಾನವಾಃ ।**
**ತೇಷಾಮೇವ ರವಿಸ್ತ್ರಾತಾ ಯೇ ತತ್ಕ್ಷೇತ್ರಸಮಾಶ್ರಿತಾಃ ॥ ೪೬ ॥**

**ಏವಂ ವಿಧೋಽಹ್ಯಯಂ ಸೂರ್ಯಃ ಸದಾ ಕಾರ್ಯೋ ವಿಜಾನತಾ ।**
**ದೇವಃ ಕೀರ್ತಿಧನಾಕಾಂಕ್ಷೀ ಕಿಂ ಪ್ರನರ್ಭುವಿ ಮಾನವಾಃ ॥ ೪೭ ॥**

**ಏತತ್ಸ್ಥಾನಂ ಸುರೇಶಸ್ಯ ಸರ್ವೈರ್ದೇವೈರಧಿಷ್ಠಿತಂ ।**
**ಶಾಂತಿಂ ಪುಷ್ಟಿಂ ಸುಖಂ ಕಾಮಂ ಸರ್ವಭೂತಾರ್ತಿನಾಶನಂ ॥ ೪೮ ॥**

---

೪೪-೪೫. ಯಾರು ಈ ತೀರ್ಥಗಳಲ್ಲಿ ಅಜ್ಞಾನದಿಂದ ಕುಬುದ್ಧಿಯನ್ನು ತಾಳು ವರೋ, ಅವರು ಕಷ್ಟಾರ್ಜಿತವಾದ ಐಶ್ವರ್ಯವನ್ನೂ ಸಹಕಳೆದುಕೊಳ್ಳುವರು. ಯಾರು ಈ ತೀರ್ಥಕ್ಷೇತ್ರಾದಿಗಳನ್ನು ಭಕ್ತಿಯಿಂದ ಸೇವಿಸುವರೋ ಅವರು ಸೂರ್ಯನು ಜ್ವಲಿಸುವ ಪರ್ಯಂತ, ಲವಣಸಮುದ್ರವು ಸ್ಥಿರವಾಗಿರುವವರೆಗೂ, ಪರ್ವತಾದಿಗಳು ಅಚಲವಾಗಿರುವ ತನಕ, ಕೀರ್ತಿಶಾಲಿಗಳಾಗುವರು. ಇದಲ್ಲವೇ ಸೂರ್ಯಮಹಿಮೆ !

೪೬-೫೭. ಲೋಕದಲ್ಲಿ ಮಹಾ ಪಾಪಿಷ್ಠರೆನಿಸಿದವರಿಗೆ ಸೂರ್ಯದೇವನನ್ನು ಬಿಟ್ಟು ಮತ್ತಾವ ದೇವನು ರಕ್ಷಕನಾಗಿರುವನು ? ಸೂರ್ಯಕ್ಷೇತ್ರ ನಿವಾಸಿಗಳೆಲ್ಲರೂ ಸೂರ್ಯಮಹಿಮೆಯಿಂದ ಪಾಪಗಳನ್ನು ಕಳೆದುಕೊಂಡು ಸುಕೃತಿಗಳೆನಿಸುವರು. ದೇವತೆಗಳೂ ಸಹ ಕೀರ್ತಿ, ಧನ, ಇವುಗಳನ್ನು ಅಪೇಕ್ಷಿಸುವವರಾಗಿ, ಸೂರ್ಯಾರಾಧನೆ ಮಾಡುವರು. ಹಾಗಿರುವಾಗ ಮನುಷ್ಯರು ಸೂರ್ಯನನ್ನು ಪೂಜಿಸುವವರಾದರೆ ಅವರಿಗೆ ಯಾವ ಭಾಗದಲ್ಲಿ ಕೊರತೆಯಿರುವುದು ?

೪೮-೪೯. ಈ ಸ್ಥಾನವು ಸರ್ವದೇವತೆಗಳಿಗೂ ಆವಾಸಸ್ಥಾನವೆನಿಸಿದೆ. ಇದನ್ನು ಸೇವಿಸುವವರಿಗೆ ಶಾಂತಿ, ಸೌಖ್ಯ, ಇಷ್ಟಾರ್ಥಪ್ರಾಪ್ತಿ, ಅನಿಷ್ಟನಿವೃತ್ತಿ, ಇವೇ

ಏತದೇವ ಹಿ ಸಾ ಕೀರ್ತಿಃ ಕೀರ್ತಿತಾ ಮುನಿಭಿಃ ಪುರಾ ।
ಅತ್ರ ಪಶ್ಯಂತಿ ಯೇ ಭಾನುಂ ಉದ್ಯಂತಂ ಮೂರ್ತಿಸಂಸ್ಥಿತಂ ॥ ೪೯ ॥

ತಾರಯಂತಿ ನರಾ ಪೂತಾ ಆತ್ಮಾನಂ ಗೋತ್ರವರ್ಧನಂ ।
ಯಾಂ ಯಾಂ ಕ್ರಿಯಾಂ ಸಮಾರಭೇತ್ಸೂರ್ಯಕ್ಷೇತ್ರೇಷು ಮಾನವಃ ॥ ೫೦ ॥

ತಾಂ ತಾಂ ಸಿದ್ಧಿಮವಾಪ್ನೋತಿ ಇಹ ಲೋಕೇ ಪರತ್ರ ಚ ।
ಜಂಬೂದ್ವೀಪೋ ಮಹಾದ್ವೀಪಃ ಕರ್ಮಭೂಮಿರನುತ್ತಮಃ ॥ ೫೧ ॥

ಯತ್ರೇಯಮೀದೃಶೀ ಕೀರ್ತಿರ್ದೇವೇನೈವ ಪ್ರಕೀರ್ತಿತಾ ।
ಯತ್ರ ಪಶ್ಯೇತ್ಸಹಸ್ರಾಂಶುಮಿತ್ಯಸೌ ಶೋಧ್ಯತೇ ಜನೈಃ ॥ ೫೨ ॥

ಏಕಾ ಮೂರ್ತಿರ್ದ್ವಿಧಾ ಕೃತ್ವಾ ಭೂತಲೇಷ್ವವತಾರಿತಾ ।
ಪ್ರತ್ಯೂಷೇ ಚೈವ ಮುಂಡೀರಂ ಯೇ ಪಶ್ಯಂತಿ ನರಾಃ ಸಕೃತ್ ॥ ೫೩ ॥

---

ಮೊದಲಾದ ಸಕಲ ಅಭೀಷ್ಟಗಳೂ ಸಿದ್ಧಿಸುವುವು. ಈ ಸೂರ್ಯಾರಾಧನೆಯನ್ನೇ ಮುನಿಗಳು ನಿಜವಾದ ಕೀರ್ತಿಯೆಂದು ಹೊಗಳುತ್ತಿರುವರು.

೫೦-೫೧. ಈ ಕ್ಷೇತ್ರದಲ್ಲಿ ನಿಂತು ಯಾರು ಉದಯಕಾಲದ ಸೂರ್ಯನನ್ನು ದರ್ಶನಮಾಡುವರೋ, ಅವರು ವಂಶಾಭಿವೃದ್ಧಿಯನ್ನು ಪಡೆದು ಪವಿತ್ರರೆನಿಸುವರು. ಅಲ್ಲದೆ ಯಾವಯಾವ ಕಾರ್ಯಗಳನ್ನು ಸೂರ್ಯಕ್ಷೇತ್ರಗಳಲ್ಲಿ ಆರಂಭಿಸಿದರೂ ಅದರ ಫಲವನ್ನು ಕ್ಷಿಪ್ರವಾಗಿ ಪಡೆಯುವರು. ಐಹಿಕ, ಮತ್ತು ಆಮುಷ್ಮಿಕ ಫಲಪ್ರಾಪ್ತಿಗೂ ಈ ಸೂರ್ಯಕ್ಷೇತ್ರಸೇವೆಯೇ ಕಾರಣವಾಗುವುದು. ಅದರಲ್ಲಿಯೂ ಜಂಬೂದ್ವೀಪವೆನ್ನುವುದು ಅತ್ಯಂತ ಶ್ರೇಷ್ಠವಾದುದಾಗಿ ಕರ್ಮಭೂಮಿಯೆಂದು ಪ್ರಸಿದ್ಧಿಗೊಂಡಿದೆ.

೫೨-೫೩. ಈ ವಿಧವಾದ ಕೀರ್ತಿಯು ಜಂಬೂದ್ವೀಪಕ್ಕೆ ಬರಲು ಈ ಸೂರ್ಯಕ್ಷೇತ್ರಸ್ಥಿತಿಯೇ ಮುಖ್ಯಕಾರಣ. ಸಹಸ್ರ ಕಿರಣಾತ್ಮಕನಾದ ಸೂರ್ಯನೊಬ್ಬನೇ ಆದರೂ ಅವನ ಆಕಾರವನ್ನು ಎರಡಾಗಿ ಮಾಡಿ ಭೂಲೋಕದಲ್ಲಿ ಪ್ರತಿಷ್ಠಿಸಲ್ಪಟ್ಟಿರುವುದು. ಯಾರು ಉದಯಕಾಲದಲ್ಲಿ ಮುಂಡೀರ ಜನ್ಮಸ್ಥಾನವಾದ ಈ ಸೂರ್ಯಮೂರ್ತಿಯನ್ನು ದರ್ಶನಮಾಡುವರೋ,

ನ ತೇದಾಚಿದ್ಭಯಂ ಶೋಕೋ ರೋಗಸ್ತೇಷಾಂ ಪ್ರಪದ್ಯತೇ ।
ಕಾಲಹೃತ್ಕಾಲಪ್ರೀತ್ಯಾ ಚ ಮಧ್ಯಾಹ್ನೇ ಯೇ ತ್ವವೇಕ್ಷಕಾಃ ॥ ೫೪ ॥

ತೇಷಾಮೇವ ಸುಖೋದರ್ಕೋ ಹ್ಯಚಿರೇಣೈವ ಜಾಯತೇ ।
ಸಾಂಬಕೃತಪುರೇ ಭಾನುಃ ಸಾಯಾಹ್ನೇ ಯೈರುದೀಕ್ಷಿತಃ ॥ ೫೫ ॥

ಸದ್ಯಸ್ಸಂಪದ್ಯತೇ ತೇಷಾಂ ಧರ್ಮಕಾಮಾರ್ಥಸಾಧನಂ ।
ಏವಂ ಯುಕ್ತಿಂ ಸಮಾಧಾಯ ಸರ್ವಧರ್ಮಪರಾಯಣಾಃ ।
ಕೀರ್ತಯಿತ್ವಾ ರವೇಃ ಕೀರ್ತಿಂ ಜಗ್ಮುಃ ಸೂರ್ಯಾಲಯಂ ಪ್ರತಿ ॥ ೫೬ ॥

ಪ್ರಜಾಪತೀನಾಮಿದಮಾಲಯಂ ರವೇಃ ।
ವಿಧಾಯಿ ತಂ ದೇವವರಾನುಕಂಪಿತಂ ।

---

೫೪-೫೫. ಅವರಿಗೆ ಎಂದೂ ಭಯಶೋಕಾದಿಗಳು ಒದಗುವುದಿಲ್ಲ. ರೋಗಾದಿಗಳಂತೂ ಅವರನ್ನು ಎಂದೂ ಬಾಧಿಸಲಾರವು. ಯಾರು ಮಧ್ಯಾಹ್ನಕಾಲದಲ್ಲಿ ಈ ದೇವತಾದರ್ಶನ ಮಾಡುವರೋ, ಅವರು ಬಹು ಶೀಘ್ರದಲ್ಲಿಯೇ ಅತ್ಯಂತ ಸುಖಿಗಳೆನಿಸುವರು. ಅಲ್ಲದೆ ಯಾರು ಸಾಂಬನಿರ್ಮಿತವಾದ ನಗರಿಯಲ್ಲಿ ಸೂರ್ಯಮೂರ್ತಿಯನ್ನು ಸಾಯಂಕಾಲದಲ್ಲಿ ದರ್ಶನಮಾಡುವರೋ ಅವರಿಗೆ ಧರ್ಮಾರ್ಥಕಾಮಮೋಕ್ಷಗಳು ಸುಲಭವಾಗಿ ದೊರೆಯುವುವು.

೫೬. ಹಾಗೆ ಸಕಲ ಮುನುಗಳೂ ಧರ್ಮಪರಾಯಣರಾಗಿ, ಸೂರ್ಯನನ್ನು ನಾನಾ ರೀತಿಯಿಂದ ಸ್ತುತಿಸಿ ಕೊನೆಗೆ ಸೂರ್ಯನ ಗೃಹವನ್ನು ಕುರಿತು ತೆರಳಿದರು.

೫೭. ಈ ಸೂರ್ಯಗೃಹವು ಸಕಲ ಬ್ರಹ್ಮರಿಗೂ ಆವಾಸಸ್ಥಾನವು. ದೇವತಾಶ್ರೇಷ್ಠರಿಂದಲೇ ಈ ಆಲಯವು ನಿರ್ಮಿತವಾಗಿರುವುದು. ಯಾರು ಇಂತಹ ಸೂರ್ಯಾ

ವಿಘಾತಕಾಸ್ತತ್ರ ಪತಂತ್ಯಸಾಧವೋ ।
ವಹ್ನೇಃ ಶಿಖಾಯಾಂ ಶಲಭಾ ಇವ ಕ್ಷಣಾತ್ ॥ ೫೭ ॥

ಇತಿ ಶ್ರೀ ಸಾಂಬಪುರಾಣೇ ತ್ರಿಚತ್ವಾರಿಂಶೋಽಧ್ಯಾಯಃ.

---

ಲಯಗಳಿಗೆ ವಿಘಾತಕರೆನಿಸುವರೋ, ಅಂತಹ ದುಷ್ಟರು ಬೆಂಕಿಯ ಜ್ವಾಲೆಗೆ ಸಿಕ್ಕಿ ಧ್ವಂಸವಾಗುವ ಕಪಟದ ಹುಳುಗಳಂತೆ ಶೀಘ್ರವಾಗಿ ನಾಶವಾಗುವರು. ಎಂದು ವಸಿಷ್ಠ ಮಹರ್ಷಿಗಳು ಬೃಹದ್ಬಲರಾಜನಿಗೆ ಬೋಧಿಸಿದರು.

ಇಲ್ಲಿಗೆ ಸಾಂಬಪುರಾಣದ ನಲವತ್ತುಮೂರನೆಯ
ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಚತುಶ್ಚತ್ವಾರಿಂಶೋಽಧ್ಯಾಯಃ



॥ ವಸಿಷ್ಠ ಉವಾಚ ॥

ಸ ಜಯತಿ ಸುರಪತಿನಾಥಃ ।
ಕರನಿಕರವಿನಿಹಿತಸಕಲಕಲಿಲಃ ।
ಶಾಶ್ವತಮಮಲನಯನ ।
ಮಖಿಲಭುವನಭವನಪ್ರದೀಪೋ ರವಿಃ ॥ ೧ ॥

॥ ಸಾಂಬ ಉವಾಚ ॥

ಆಚಾರಃ ಪರಮೋ ಧರ್ಮ ಇತಿ ಧರ್ಮವಿದೋ ವದನ್ ।
ಆಚಾರಾದ್ವರ್ಧತೇ ಹ್ಯಾಯುಹ್ಯಾಚಾರೋ ಹಂತ್ಯಲಕ್ಷಣಂ ॥ ೨ ॥

---

## ನಲವತ್ತನಾಲ್ಕನೆಯ ಅಧ್ಯಾಯ.

೧. ವಸಿಷ್ಠಮಹರ್ಷಿಗಳು ಮುಂದಿನ ಕಥಾಪ್ರಸ್ತಾಪಮಾಡುತ್ತಾ ಮೊದಲು ಸೂರ್ಯದೇವನನ್ನು ಹೀಗೆ ಪ್ರಾರ್ಥಿಸಿದರು. “ ದೇವೇಂದ್ರನಿಗೂ ಒಡೆಯನಾಗಿ, ತನ್ನ ಕಿರಣಜಾಲಗಳಿಂದ ಸಕಲ ಲೋಕವನ್ನೆಲ್ಲಾ ಬೆಳಗಿಸುತ್ತಾ, ಪರಿಶುದ್ಧವಾದ ನೇತ್ರಗಳುಳ್ಳವನಾಗಿ, ಅಖಿಲಪ್ರಪಂಚಕ್ಕೂ ದೀಪಸ್ಥಾನನಾಗಿರುವ ಸೂರ್ಯದೇವನು ಸರ್ವೋತ್ಕೃಷ್ಟನಾಗಿರುವನು ”.

೨-೩. ಸೂರ್ಯಪ್ರಾರ್ಥನೆಯಲ್ಲಿ ನಿರತನಾದ ಸಾಂಬನು ನಾರದರನ್ನು ಹೀಗೆ ಪ್ರಶ್ನೆ ಮಾಡಿದನು. “ ಮಹರ್ಷಿಗಳೇ, ಶಿಷ್ಟರಿಂದ ಆಚರಿತವಾಗಿ ಬಂದ ಸಂಪ್ರದಾಯವೇ

ಆಚಾರಾತ್ಸುಖಭಾಗೀ ಸ್ಯಾದಾಚಾರಾಚ್ಛ್ರಿಯಮಶ್ನುತೇ ।
ಅತಸ್ತಮಹಮಾಚಾರಂ ಶ್ರೋತುಮಿಚ್ಛಾಮಿ ತತ್ತ್ವತಃ ॥ ೩ ॥

ಆದಿತ್ಯಭಕ್ತಃ ಪುರುಷಃ ಕೀದೃಗಾಚಾರಮಾಚರೇತ್ ।
ದೇವಸ್ಯ ಪ್ರಿಯತಾಮೇತಿ ಶ್ರಿಯಮಾಯುಶ್ಚ ವಿಂದತಿ ॥ ೪ ॥

॥ ನಾರದ ಉವಾಚ ॥

ಅತ್ರ ತೇ ಸಂಪ್ರವಕ್ಷ್ಯಾಮಿ ಯನ್ಮಾಂ ತ್ವಂ ಪರಿಪೃಚ್ಛಸಿ ।
ಆಯುರ್ಲಕ್ಷ್ಮೀಯಶೋಹೇತುಃ ಸೂತ್ರಮಾಚರಣಸ್ಯ ಯತ್ ॥ ೫ ॥

---

ಒಂದು ದೊಡ್ಡಧರ್ಮವೆಂದೂ, ಅಸತ್ಯಸಂಪ್ರದಾಯಾನುಷ್ಠಾನದಿಂದ ಆಯುಸ್ಸು ವೃದ್ಧಿಯಾಗುವುದೆಂದೂ, ಅನುಚಿತವಾದ ಆಚಾರಾನುಷ್ಠಾನಗಳಿಂದ ಆಯುಸ್ಸು ಕ್ಷೀಣವಾಗುವುದೆಂದೂ ಧರ್ಮಜ್ಞರು ಹೇಳುತ್ತಿರುವರು. ಅಲ್ಲದೆ ಆಚಾರಾನುಷ್ಠಾನದಿಂದ ಸೌಖ್ಯವೂ, ಐಶ್ವರ್ಯವೂ ವೃದ್ಧಿಯಾಗುವುದೆಂದೂ ಕೇಳಿರುವೆನು. ಆದ್ದರಿಂದ ಮಹರ್ಷಿಯೇ, ಆ ಆಚಾರಗಳನ್ನು ನಾನು ತಿಳಿದುಕೊಳ್ಳಬೇಕೆಂದಿರುವೆನು. ಅನುಗ್ರಹಿಸಬೇಕು." ಎಂದು ಪ್ರಾರ್ಥಿಸಿಕೊಂಡನು.

೪-೫. ಅಲ್ಲದೆ ಸೂರ್ಯಭಕ್ತನು ಯಾವರೀತಿ ಆಚಾರಶೀಲನಾಗಿರಬೇಕು ? ಹೇಗಿದ್ದರೆ ಆತನು ಸೂರ್ಯದೇವನಿಗೆ ಪ್ರಿಯನೆನಿಸಿ, ತನ್ಮೂಲಕ ಆಯುರಾರೋಗ್ಯಾದಿ ಐಶ್ವರ್ಯಗಳನ್ನು ಪಡೆಯುವನು ? ಅದನ್ನು ವಿವರವಾಗಿ ಹೇಳಬೇಕೆಂದು ಸಾಂಬನು ನಾರದ ಮಹರ್ಷಿಯನ್ನು ಕೇಳಿಕೊಳ್ಳಲು—ನಾರದ ಮಹರ್ಷಿಯು ಹೀಗೆ ಹೇಳತೊಡಗಿದನು—" ಸಾಂಬನೇ, ಈಗ ನೀನು ಕೇಳಿದ ಪ್ರಶ್ನೆಗೆ ಉತ್ತರಕೊಡುವೆನು. ಯಾವ ಆಚಾರಾನುಷ್ಠಾನದಿಂದ ಸೂರ್ಯಭಕ್ತನು ಆಯುಸ್ಸು, ಸಂಪತ್ತು, ಕೀರ್ತಿ ಇವುಗಳನ್ನು ಪಡೆಯುವನೋ ಅದನ್ನು ಈಗ ನಿನಗೆ ವಿವರಿಸುವೆನು.

ನಾಸ್ತಿಕೇನಾಶ್ರದ್ದಧಾನೇನ ಗುರುಣಾ ಶಾಸ್ತ್ರಲಂಘಿನಾ ।
ಭಿನ್ನಮರ್ಯಾದಸಂಕೀರ್ಣಮೈಥುನೇನ ಭವಿತವ್ಯಂ ॥ ೬ ॥

ಅಕ್ರೋಧೇನ ಸತ್ಯವಾದಿನಾ ಭೂತಾನಾ ।
ಮಹಿಂಸಕೇನಾಽಸೂಯುನಾ ಶುಚಿನಾಽ ।
ಜಿಹ್ಮೇನಾನಾಲಸ್ಯೇನ ಭವಿತವ್ಯಂ ।

ಅಲೋಷ್ಠಮರ್ದಿನಾ ತೃಣಚ್ಛೇದಿನಾನಖಶೋಧಿನಾ ।
ನಿತ್ಯೋಚ್ಛಿಷ್ಟೇನಾಶಂಕಮನಸಾ ಸುಕೇಶೇನಾಭಾವ್ಯಂ ।
ಬ್ರಾಹ್ಮೇ ಮುಹೂರ್ತೇ ಉತ್ಥಾಯ ಧರ್ಮಾರ್ಥಂ ।
ಸಾಧು ಚಿಂತಕಃ ಆಚಮ್ಯ ಸಂಧ್ಯಾಂ ವಂದೇತ ।
ಪೂರ್ವಾಂ ಚ ಪಶ್ಚಿಮಾಂ ತಥಾ ।

---

೬. ಸೂರ್ಯಭಕ್ತನಾದವನು, ನಾಸ್ತಿಕನಾಗಿಯೂ, ನಂಬಿಕೆಯಿಲ್ಲದವನಾಗಿಯೂ, ಗುರುಗಳನ್ನೂ, ಶಾಸ್ತ್ರಗಳನ್ನೂ ಮೀರಿದವನಾಗಿಯೂ ಇರಕೂಡದು ಮತ್ತು ಭಿನ್ನಮಾರ್ಗವನ್ನಾಗಲಿ ಭಿನ್ನಜಾತಿಯವರಲ್ಲಿ ಮೈಥುನಾದಿ ಭೋಗಗಳನ್ನಾಗಲಿ ಅಪೇಕ್ಷಿಸಕೂಡದು.

ಕೋಪವನ್ನು ಬಿಡಬೇಕು, ನಿಜವನ್ನು ಹೇಳಬೇಕು. ಪ್ರಾಣಿ ಹಿಂಸೆಯಲ್ಲಿ ಮನಸ್ಸಿಡಕೂಡದು. ಅಸೂಯಾರಹಿತನಾಗಿರಬೇಕು. ಶುಚಿಯಾಗಿ ಮೋಸವಿಲ್ಲದೆ ಸೋಮಾರಿತನವನ್ನು ಬಿಟ್ಟು ಸರ್ವದಾ ದೈವಭಕ್ತಿಯಿಂದಿರಬೇಕು.

ಮಣ್ಣನ್ನು ಅಗೆದು ಹಳ್ಳಮಾಡುವುದಾಗಲಿ, ಹುಲ್ಲನ್ನು ಕುಯ್ಯುವುದಾಗಲಿ ಮಾಡಬಾರದು. ತನ್ನ ಉಗುರುಗಳನ್ನು ಸರ್ವದಾ ಶುದ್ಧವಾಗಿಟ್ಟಿರಬೇಕು. ಎಂಜಲು ಪದಾರ್ಥಗಳನ್ನು ಎಂದೂ ತಿನ್ನಕೂಡದು. ಮನಸ್ಸಿನಲ್ಲಿ ಸಂಶಯ ಬುದ್ಧಿಯನ್ನು ದೂರಮಾಡಬೇಕು. ಕೇಶಾದಿಗಳನ್ನು ಶುದ್ಧರೀತಿಯಲ್ಲಿಟ್ಟಿರಬೇಕು. ಬೆಳಗಿನ ಜಾವದಲ್ಲಿ ಎದ್ದು ಧರ್ಮಕಾರ್ಯಗಳಲ್ಲಿಯೇ ಆಸಕ್ತನಾಗಿರಬೇಕು. ಆನಂತರ ಸ್ನಾನಾಚಮನಾದಿಗಳನ್ನು ತೀರಿಸಿಕೊಂಡು ಸಂಧ್ಯಾದೇವಿಯನ್ನೂ ಪೂರ್ವ ಪಶ್ಚಿಮದಿಗ್ದೇವತೆಗಳನ್ನೂ ವಂದಿಸಬೇಕು.

ಆದಿತ್ಯಮುದ್ಯಂತಮಸ್ತಂ ಯಾಂತಂ ।
ವಾರಿಸ್ಥಮುಪರ್ಮಧ್ಯಮುಪಸೃಷ್ಟಂ ಚ ।
ನೇಕ್ಷೇತ ಪರದಾರಾ ನ ಗಂತವ್ಯಾಃ ।
ಕೇಶಪ್ರಸಾದನದಂತಧಾವನಾನ್ಯದೇವತಾ ।
ಪೂಜನಾನಿ ಮಧ್ಯಾಹ್ನೇ ನ ಕುರ್ವೀತ ।
ಮೂತ್ರಪುರೀಷೇನಾಧಿತಿಷ್ಠೇನ್ನ ಪಶ್ಯೇ ।
ಚ್ಚ ಉದಕ್ಯಯಾ ನ ಪ್ರಭಾಷೇತ ।

ಗ್ರಾಮಸಮೀಪೇ ಕೃಷ್ಟಕ್ಷೇತ್ರೇ ನ ಚ ಪುರೀಶಯೇತ್ ।
ವಿಣ್ಮೂತ್ರೇ ನಾಪ್ಸು ಕುರ್ಯಾತ್ ।
ನ ಭಸ್ಮನಿ ನಗ್ನೋ ವ್ರಜೇನ್ನವಾಪ್ಸಿನಿ ।
ನ ಪ್ರಾಙ್ಮುಖೋ ನ ಚ ಕುತ್ಸಿತಮನ್ನಮಶ್ನೀಯಾತ್ ।
ಭುಕ್ತ್ವಾಗ್ನಿಮಾಲಭ್ಯ ಯೇನ ಸರ್ವಪ್ರಾಣಾನ್ ಸ್ಪೃಶೇತ್ ।

---

ಉದಯಿಸುವ ಮತ್ತು ಅಸ್ತಮಿಸುವ ಮತ್ತು ಜಲಮಧ್ಯದಲ್ಲಿ ಪ್ರತಿಬಿಂಬಿಸುವ ಸೂರ್ಯಮಂಡಲವನ್ನು ನೋಡಬಾರದು. ಮತ್ತು ಮಧ್ಯಾಹ್ನಕಾಲದಲ್ಲಿ ಖಮಧ್ಯದಲ್ಲಿರುವ ಸೂರ್ಯನನ್ನು ದೃಷ್ಟಿಸಿ ನೋಡಬಾರದು. ಪರಸ್ತ್ರೀಗಮನ ಮಾಡಬಾರದು. ಮಧ್ಯಾಹ್ನಕಾಲದಲ್ಲಿ ತಲೆಬಾಚುವುದು, ಹಲ್ಲುಜ್ಜುವುದು, ಅನ್ಯದೇವತಾರಾಧನೆ ಮಾಡುವುದು, ಇವೆಲ್ಲವೂ ನಿಷಿದ್ಧವಾದವುಗಳು. ನಿಂತುಕೊಂಡು ಮಲಮೂತ್ರಗಳನ್ನು ವಿಸರ್ಜಿಸಕೂಡದು. ಋತುಮತಿಯಾದ ಸ್ತ್ರೀಯರೊಡನೆ ಮಾತನಾಡಬಾರದು.

ಊರಿನ ಸಮೀಪದಲ್ಲಿ, ಬೆಳೆಯುವ ಭೂಮಿಯಲ್ಲಿ, ಮಲವಿಸರ್ಜನೆ ಮಾಡಬಾರದು. ನೀರಿನಲ್ಲಿ ಮಲಮೂತ್ರಗಳನ್ನು ಬಿಡಬಾರದು. ಬೂದಿಯಲ್ಲಾಗಲೀ ಮಳೆಯಲ್ಲಾಗಲೀ ನಡೆಯಬಾರದು. ಎಂದೂ ದಿಗಂಬರನಾಗಿರಕೂಡದು. ಪೂರ್ವಾಭಿಮುಖವಾಗಿ ನಿಂತು ಕುತ್ಸಿತಪದಾರ್ಥಗಳನ್ನು ಭಕ್ಷಿಸಕೂಡದು. ಊಟವಾದ ಅನಂತರ ಅಗ್ನಿಸಮೀಪದಲ್ಲಿ ಕುಳಿತು ಆಚಮನಾದಿಗಳಿಂದ ದೇಹವನ್ನು ಶುದ್ಧಿಗೊಳಿಸಬೇಕು.

ತುಷಕೇಶಭಸ್ಮಕಾಪಾರ್ಸಾಸ್ಥಿ ಉದ್ವರ್ತನಾ ।
ವರಕ್ತಾಸ್ವೇದಾದಿನಾಧಿತಿಷ್ಠೇತ ।
ಶಾಂತಿಹೋಮಾದೀನಿ ಪವಿತ್ರಾಣಿ ಕಾರಯೇತ್ ।
ನ ಸುಪ್ತಂ ಗಚ್ಛಂತಂ ಸ್ಥವಿರಂ ಪ್ರತ್ಯುತ್ಥಾಪಯೇತ್ ।
ನ ಸುಪ್ತಂ ಗಚ್ಛಂತಂ ವಾ ಉಪಸ್ಥಾಪಯೇತ್ ।
ಆದ್ರಾರ್ನಾದ್ರ್ರಪಾದೋ ಭೋಜನಶಯನೇ ।
ನ ವಾಗ್ನಿ ಬ್ರಾಹ್ಮಣೋಚ್ಛಿಷ್ಟಮಾಲಭೇತ್ ।
ನ ಪಶ್ಯೇಚ್ಚ ಸೂರ್ಯಾಚಂದ್ರಮಸೌ ನಕ್ಷತ್ರಾಣಿ ಚ ।
ನ ಪಶ್ಯೇತ್ ಆಗಚ್ಛಂತಂ ಸ್ಥವಿರಂ ಪ್ರತ್ಯುತ್ಥಾಯಾ ।
ಭಿವಾದ್ಯಾಸನಂ ದದ್ಯಾತ್ ।

---

ಬತ್ತದ ಹೊಟ್ಟು, ಕೂದಲು, ಭಸ್ಮ, ಚತ್ತಿ, ಮೂಳೆ ಈ ಪದಾರ್ಥಗಳನ್ನು ಮೈಗೆ ಲೇಪಿಸಿಕೊಳ್ಳುವುದಾಗಲೀ, ಅವುಗಳಲ್ಲಿ ಸಂಚರಿಸುವುದಾಗಲೀ ಮಾಡಬಾರದು. ಬೆವರುಕನಿಗಳಿಂದ ಕೂಡಿರುವಾಗ ಸಂಚರಿಸಬಾರದು. ಸರ್ವದಾ ಶಾಂತಿಹೋಮವೇ ಮೊದಲಾದ ಪವಿತ್ರವಾದ ಕರ್ಮಗಳನ್ನು ಮಾಡುತ್ತಿರಬೇಕು. ಮಲಗಿದ್ದವನನ್ನೂ ಪ್ರಯಾಣ ಮಾಡುತ್ತಿದ್ದವನನ್ನೂ, ಮುದುಕನನ್ನು ಎಚ್ಚರಗೊಳಿಸಬಾರದು. ಮತ್ತು ನಿಲ್ಲಿಸಬಾರದು. ಮಲಗಿರುವವನನ್ನು ಮತ್ತು ಹೋಗುವವನನ್ನು ಹಿಂಬಾಲಿಸಿ ತಾನೂ ಮಲಗಬಾರದು ; ಮತ್ತು ಹೋಗಬಾರದು. ಭೋಜನಕಾಲದಲ್ಲಿ ಕಾಲನ್ನು ತೊಳೆದಿರಬೇಕು. ಮಲಗುವಾಗ ಕಾಲು ತೊಳೆಯಬಾರದು. ಅಗ್ನಿಯ ಮತ್ತು ಬ್ರಾಹ್ಮಣನ ಉಚ್ಛಿಷ್ಟವನ್ನು ತಿರಸ್ಕರಿಸಬಾರದು.

ಸೂರ್ಯಚಂದ್ರರನ್ನು ಒಂದೇ ಸಾರಿ ನೋಡಕೂಡದು. ನಕ್ಷತ್ರಗಳನ್ನು ದೃಷ್ಟಿಸಿ ನೋಡಬಾರದು. ಎದುರಾಗಿ ಬರುವ ಮುದುಕನಿಗೆ ಎದ್ದುನಿಂತು ಆಸನವನ್ನು ಕೊಟ್ಟು ನಮಸ್ಕರಿಸಬೇಕು. ಪ್ರಯಾಣಹೊರಟಿರುವ ಮನುಷ್ಯನನ್ನು ಹಿಂಬಾಲಿಸಿ ತಾನೂ ಸ್ವಲ್ಪದೂರ ಹೋಗಬೇಕು. ಒಡೆದುಹೋಗಿರುವ ಆಸನ, ಮತ್ತು ಕಂಚಿನ ಪೀಠ ಇವುಗಳಲ್ಲಿ ಕೂಡಬಾರದು. ಒಂದೇ ವಸ್ತ್ರವುಟ್ಟು ಊಟಮಾಡಬಾರದು. ಬರೀ

ಗಚ್ಛಂತಂ ಪೃಷ್ಠತೋನುಯಾಯಾತ್ । ಭಿನ ।
ಕಾಂಸ್ಯಾಸನಂ ವರ್ಜಯೇತ್ । ನೈಕವಸ್ತ್ರೋ ಭುಂಜೀತ
ನ ನಗ್ನಃ ಸ್ನಾಯಾಚ್ಛಯೀತ ಚ ನೋಚ್ಛಿಷ್ಟಃ ಸ್ಪೃಶೇಚ್ಛಿರಃ ।
ಶಿರಸಿ ಕೇಶಪ್ರಹರಣಂ ಪರಿಹರೇತ್ । ನ ಪಾಣಿ
ದ್ವಯೇನ ಶಿರಃ ಕಂಡೂಯೇತ್ ।

ನಾಭೀಕ್ಷ್ಣಂ ಶಿರಸಾ ಸ್ನಾಯಾತ್ ।
ನ ದ್ವಿಃ ಸ್ನಾಯಾಚ್ಚ ।
ಶಿರಃಸ್ನಾತಸ್ತೈಲೇನಾಂಗಂ ನ ಕಿಂಚಿತ್ ಸ್ಪೃಶೇತ್ ।
ಘೃತಂ ಮಧು ಸಮಂ ವಿಷಂ ।
ಮುದ್ಗತಿಲಾನ್ ಭ್ರಷ್ಟಾನ್ನಾಶ್ನೀಯಾತ್ ।
ಉಚ್ಛಿಷ್ಟೋ ನಾಧೀಯಾತ್ ।
ನವಾಧ್ಯಾಪಯೇತ್ ।
ಪೂತಿಗಂಧವಾತೇನ ಚ ।

---

ನ್ನೆಯಲ್ಲಿ ಸ್ನಾನವನ್ನಾಗಲೀ ನಿದ್ರೆಯನ್ನಾಗಲೀ ಮಾಡಬಾರದು. ಎಂಜಲನ್ನು ತಲೆಗೆ ಒರಸಿಕೊಳ್ಳಕೂಡದು. ತಲೆಯಕೂದಲನ್ನು ಶಬ್ದಬರುವಂತೆ ಒದರಬಾರದು. ಎರಡು ಕೈಗಳಿಂದಲೂ ಒಟ್ಟಾಗಿ ತಲೆಯನ್ನು ಕೆರೆದುಕೊಳ್ಳಬಾರದು.

ಪದೇಪದೇ ಶಿರಃ ಸ್ನಾನಮಾಡಬಾರದು. ಕಾರಣವಿಲ್ಲದೆ ಎರಡುಸಾರಿ ಏಕದಾ ಸ್ನಾನಮಾಡಬಾರದು. ತಲೆಗೆ ಹಚ್ಚಿಕೊಂಡ ಎಣ್ಣೆಯನ್ನೇ ಮೈಗೆ ಬಳಿದುಕೊಳ್ಳಬಾರದು. ಜೇನುತುಪ್ಪ, ಮತ್ತು ತುಪ್ಪವನ್ನು ಸಮಪ್ರಮಾಣದಲ್ಲಿ ತಿಂದರೆ ಅದು ವಿಷವಾಗುವುದು. ಹೆಸರು, ಎಳ್ಳು ಇವು ಸ್ವಲ್ಪ ಕೆಟ್ಟುಹೋಗಿದ್ದರೂ ತಿನ್ನಬಾರದು. ಎಂಜಲಿನಿಂದ ಕೂಡಿ ವೇದವನ್ನು ಹೇಳಬಾರದು. ಹೇಳಿಕೊಡಬಾರದು. ದುರ್ವಾಸನಾವಿಶಿಷ್ಟವಾದ ಪ್ರದೇಶದಲ್ಲಿ ವೇದಾಧ್ಯಯನ ಮಾಡಬಾರದು.

**ಅತ್ರ ಗಾಥಾ ಯಮೋನ ಗೀತಾ ।**
**ಆಯುರಸ್ಯ ನಿಕೃಂತತಿ ಪ್ರಜಾನಾಶೋಭವೇತ್ ತಥಾ ।**
**ಯ ಉಚ್ಛಿಷ್ಟಃ ಪ್ರಪತತಿ ಸ್ವಾಧ್ಯಾಯಂ ಚಾಧಿಗಚ್ಛತಿ ।**
**ಸೂರ್ಯಾನಿಲಾವಲಸೋಮೋದಕಗೋದ್ವಿಜನಕ್ಷತ್ರಾ ।**
**ಭಿಮುಖಃ ಪಥಿ ಚ ನಮೋಹೇತ್ ।**
**ದಿವಾಸಂಧ್ಯಾಸೂದಙ್ಮುಖೋ ದಕ್ಷಿಣಾಮುಖೋ ।**
**ರಾತ್ರೌ ತೃಣಾಂತರ್ಹಿತಭೂಮೌ ಅವಕುಂಠ್ಯ ನೀವೀಂ ।**
**ವಿಣ್ಮೂತ್ರೇ ಕುರ್ಯಾತ್ ।**

**ಸಾಮಿಷಂ ಶ್ರಾದ್ಧಂ ಭುಕ್ತ್ವಾ ಚ ನ ಸಂಧ್ಯಾಂ ವಂದೇತ ।**
**ಬ್ರಾಹ್ಮಣಕ್ಷತ್ರಿಯಸರ್ಪಾನ್ನಾವಮನ್ಯೇತ ।**
**ಮಿಥ್ಯಾಸತ್ಯಾಭ್ಯಾಂ ಗುರುಣಾನುಬಂಧಃ ।**
**ಕಾರ್ಯೋ ಗುರುಂ ನಾಪವಾದಯೇತ್ ।**

---

ಹಾಗೆ ವೇದಾಧ್ಯಯನ ಮಾಡಕೂಡದೆಂದು ಯಮನೇ ಒಂದುಸಾರಿ ಹೇಳಿರುವನು. ಯಾರು ಎಂಜಲಿನಲ್ಲಿ ದುರ್ವಾಸನಾವಿಶಿಷ್ಟಪ್ರದೇಶದಲ್ಲಿ ಅಧ್ಯಯನಾದಿಗಳನ್ನು ಮಾಡುವರೋ ಅವರ ಆಯುಸ್ಸೂ, ಸಂತಾನವೂ ನಾಶವಾಗುವುದೆಂದು ಶಾಸನವಿರುವುದು ಹಾಗೆಯೇ, ಸೂರ್ಯ, ವಾಯು, ಅಗ್ನಿ, ಚಂದ್ರ, ನೀರು, ಹಸು, ಬ್ರಾಹ್ಮಣ, ನಕ್ಷತ್ರ ಇವುಗಳಿಗೆ ಎದುರಾಗಿ ನಿಂತು ದಾರಿಯಲ್ಲಿ ಮಲವಿಸರ್ಜನೆ ಮಾಡಬಾರದು. ಹಗಲುಹೊತ್ತಿನಲ್ಲಿ ಮತ್ತು ಸಂಧ್ಯಾಕಾಲದಲ್ಲಿ ಉತ್ತರ ದಿಗಭಿಮುಖವಾಗಿಯೂ, ರಾತ್ರಿಕಾಲದಲ್ಲಿ ದಕ್ಷಿಣದಿಗಭಿಮುಖವಾಗಿಯೂ, ಮಲವಿಸರ್ಜನೆ ಮಾಡಬೇಕು. ಹಾಗೆ ಮಾಡುವಾಗ ನೆಲದಮೇಲೆ ಸ್ವಲ್ಪ ಹುಲ್ಲನ್ನು ಹಾಕಿ ಸೊಂಟವನ್ನು ಬಟ್ಟೆಯಿಂದ ಮುಚ್ಚಿಕೊಂಡು ಮಲಮೂತ್ರಗಳನ್ನು ವಿಸರ್ಜನೆ ಮಾಡಬೇಕು.

ಮಾಂಸಸಹಿತವಾದ ಶ್ರಾದ್ಧಭೋಜನಮಾಡಿ ಸಂಧ್ಯಾವಂದನೆಮಾಡಬಾರದು. ಬ್ರಾಹ್ಮಣ, ಕ್ಷತ್ರಿಯ, ಹಾವು ಇವುಗಳಿಗೆ ಅವಮಾನಮಾಡಬಾರದು. ಸುಳ್ಳುಮಾತು

ಗುರ್ವಪವಾದೇ ಕರ್ಣೌ ಪಿಧಾತವ್ಯೌ ।
ಗಂತವ್ಯಮನ್ಯತ್ರ ವಾ ದೂರಾದಾವಸಥಾತ್ ।
ಮೂತ್ರಪಾದಾವಸೇಚನೇ ಸ್ಪೃಷ್ಟ್ವಾ ಮಾರ್ಜನಾನಿ ಕರ್ತವ್ಯಾನಿ ।
ನಾತಿಪ್ರಾತರ್ಮಧ್ಯಾಹ್ನೇ ಸಾಯಾಹ್ನೇಷು ಗಚ್ಛೇತ್ ।
ನೈಕೋ ನಾಜ್ಞಾತೈಃ ವೃಷಲೈಃ ।

ಗೋಬ್ರಾಹ್ಮಣಕ್ಷತ್ರಿಯವೃದ್ಧಭಾರತಪ್ತಗರ್ಭಿಣೀ ।
ದುರ್ಬಲೇಭ್ಯಃ ಪಂಥಾ ದೇಯಃ ।
ಧೃತಂ ನ ಧಾರಯೇದ್ವಸ್ತ್ರಂ ಪಾದೇನಾಕ್ರಮತೇ ।
ಅಷ್ಟಮೀ ಚತುರ್ದಶೀ ಪೂರ್ಣಿಮಾಮಾವಾಸ್ಯಾಸು ।
ಬ್ರಹ್ಮಚಾರೀ ಭವೇತ್ ।

---

ಗಳಿಂದ ಗುರುವನ್ನು ವಂಚಿಸಕೂಡದು. ಗುರುವಿಗೆ ಅಪವಾದ ತರಕೂಡದು. ಗುರು ನಿಂದೆಯನ್ನು ಕೇಳಿದೊಡನೆಯೇ ಆ ಸ್ಥಳವನ್ನು ಬಿಟ್ಟು ದೂರ ಸರಿಯಬೇಕು. ಅಥವಾ ಕಿವಿಗಳನ್ನಾದರೂ ಮುಚ್ಚಿಕೊಳ್ಳಬೇಕು. ಮನೆಯಿಂದ ಬಹುದೂರ ಮಲ ಮೂತ್ರವಿಸರ್ಜನೆಮಾಡಿ, ಒಡನೆಯೇ ಕಾಲುತೊಳೆದುಕೊಂಡು, ಮಾರ್ಜನ ಆಚ ಮನಾದಿಗಳಿಂದ ಶುದ್ಧನಾಗಬೇಕು. ಪ್ರಾತಃ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಅತಿ ಯಾಗಿ ಪ್ರಯಾಣಮಾಡಬಾರದು. ಒಬ್ಬಂಟಿಗನಾಗಿ ಶೂದ್ರಾದಿಗಳ ಸಹಾಯವಿಲ್ಲದೆ ಪ್ರಯಾಣಬೆಳಸಕೂಡದು.

ಹಸುಗಳು, ಬ್ರಾಹ್ಮಣರು, ಕ್ಷತ್ರಿಯರು, ವೃದ್ಧರು, ಭಾರಹೊತ್ತಿರುವವರು, ಗರ್ಭಿಣೀಸ್ತ್ರೀಯರು, ದುರ್ಬಲರು, ಇವರಿಗೆ ಮೊದಲು ದಾರಿಯನ್ನು ಬಿಡಬೇಕು. ಒಂದುಸಾರಿ ಉಟ್ಟಬಟ್ಟೆಯನ್ನೂ, ಕಾಲಿಗೆ ಕಟ್ಟಿದ ವಸ್ತ್ರವನ್ನೂ, ಮತ್ತೆ ಉಡಬಾರದು. ಅಷ್ಟಮೀ, ಚತುರ್ದಶೀ, ಪೂರ್ಣಿಮಾ, ಅಮಾವಾಸ್ಯಾ ಸಂಕ್ರಮಣಾದಿಗಳಲ್ಲಿ ಸ್ತ್ರೀ ಸಂಬಂಧವನ್ನು ಬಿಟ್ಟು ಬ್ರಹ್ಮಚರ್ಯದಲ್ಲಿರಬೇಕು. ವ್ಯರ್ಥವಾಗಿ ಮಾಂಸವನ್ನು ಭಕ್ಷಿಸ ಕೂಡದು. ಕೆಟ್ಟಪ್ರಾಣಿಗಳ ಮಾಂಸವು ಭಕ್ಷಣೆಗೆ ಅನರ್ಹ. ಕೋಪ, ನಿಂದನೆ, ಚಾಡಿ ಹಿಂಸೆ ಮುಂತಾದುವುಗಳಿಗೆ ಇರುವ ಹೆಸರನ್ನು ಯಾರಿಗೂ ಇಡಕೂಡದು. ಯಾರ

ವೃಥಾ ಮಾಂಸಂ ಭ್ರಷ್ಟಮಾಂಸಂ ಚ ನ ಖಾದೇತ್ ।
ಆಕ್ರೋಶಪರಿವಾದಪೈಶುನ್ಯನೃಶಂಸಾಭಿಧಾನ ।
ಹೀನೋ ನಾರುಂತುದಃ ಸ್ಯಾತ್ ।
ಹೀನಾದುತ್ಕೃಷ್ಟಮಪಿ ನಾದದೀತ ।
ಪರಮರ್ಮದೋಷಾನ್ನ ವದೇತ್ ।

ಹೀನಾತಿರಿಕ್ತಾಂಗರೂಪದ್ರವಿಣಜ್ಞಾತಿಸತ್ಯಹೀನ ।
ನಿಂದಿತವಿಗರ್ಹಿತಾನ್ನಾಧಿಕ್ಷಿಪೇತ್ ।
ನಾಸ್ತಿಕ್ಯವೇದನಿಂದಾದ್ವೇಷದಂಭಾಭಿಮಾನ
ತೈಕ್ಷ್ಣ್ಯಾನಿ ವರ್ಜಯೇತ್ ।
ಪರಸ್ಮಿನ್ ದಂಡನೇ ನ ಇಚ್ಛೇತ್ ।
ಕ್ರುದ್ಧೋಽಪಿ ನ ಹನ್ಯಾತ್ ಅನ್ಯತ್ರ ।

---

ಮನಸ್ಸು ನೋಯುವಂತೆ ಮಾತನಾಡಕೂಡದು. ಯೋಗ್ಯನಾದವನಿಗೆ ನೀಚನಿಗಿಂತ ಹೆಚ್ಚಾಗಿ ಆದರವನ್ನು ತೋರಿಸಬೇಕು. ಮತ್ತೊಬ್ಬರು ಹೇಳಿರುವ ಗುಟ್ಟನ್ನಾಗಲೀ ಮತ್ತೊಬ್ಬರ ದೋಷಗಳನ್ನಾಗಲೀ ಪ್ರಚಾರ ಮಾಡಕೂಡದು.

ಅವಯವಗಳು, ರೂಪ, ಐಶ್ವರ್ಯ, ಇವುಗಳಿಂದ ಕಮ್ಮಿಯಾಗಿದ್ದವರನ್ನು, ಅಥವಾ ಇವುಗಳಲ್ಲಿ ಅಧಿಕವಾಗಿದ್ದವರನ್ನೇ ಆಗಲಿ, ಹಾಸ್ಯಮಾಡಬಾರದು. ಜ್ಞಾತಿಗಳನ್ನೂ, ಸತ್ಯಭ್ರಷ್ಟರನ್ನೂ, ನೀಚರನ್ನೂ ಎಂದೂ ದೂಷಿಸಕೂಡದು. ನಾಸ್ತಿಕರ ವೇದನಿಂದಕರ, ದ್ವೇಷಿಗಳ, ಅಹಂಕಾರಿಗಳ ವಿಷಯದಲ್ಲಿ ನಿಷ್ಠುರ ವಾಣಿಯನ್ನು ಉಪಯೋಗಿಸಕೂಡದು ಮತ್ತೊಬ್ಬರನ್ನು ಶಿಕ್ಷಿಸುವುದರಲ್ಲಿ ತೊಡಗಬಾರದು ಹೆಂಡತಿ, ಮಕ್ಕಳು, ಸೇವಕರು, ದಾಸಿಯರು, ಶಿಷ್ಯ, ತಮ್ಮಂದಿರು ಇವರನ್ನು ಬಿಟ್ಟು ಬಾಕಿಯವರ ವಿಷಯದಲ್ಲಿ ಹೆಚ್ಚು ಕೋಪವಿದ್ದರೂ, ಅವರನ್ನು ಹೊಡೆಯಕೂಡದು. ಬ್ರಾಹ್ಮಣನಿಂದಕರಿಗೆ, ಅತಿಥಿಗಳಿಗೆ, ನಕ್ಷತ್ರಸೂಚಕರಿಗೆ ಯಜಮಾನನಾಗಬಾರದು. ಮಲಮೂತ್ರವಿಸರ್ಜನಾನಂತರದಲ್ಲಿ ಅಥವಾ ಬೀದಿಯಲ್ಲಿ ಸಂಚಾರಮಾಡಿದಮೇಲೆ ಮತ್ತೆ ಕಾಲುತೊಳೆದು ಒಳಕ್ಕೆ ಬರಬೇಕು. ಗಂಜಿ, ಹುಗ್ಗಿ, ಮಾಂಸ, ಚಕ್ಕುಲಿ,

ಭಾರ್ಯಾಪುತ್ರದಾಸದಾಸೀಶಿಷ್ಯಭ್ರಾತೃಭ್ಯಃ ।

ನ ಬ್ರಾಹ್ಮಣಪರಿವಾದೀ ನ ತಿಥಿನಕ್ಷತ್ರದೇಶಿಕಃ ಸ್ಯಾತ್ ।

ಕೃತ್ವಾ ಮೂತ್ರಪುರೀಷೇ ಶುಚೌ ರಥ್ಯಾಮಾಕ್ರಮ್ಯ ವಾ ।

ಪುನಃ ಪಾದೌ ಪ್ರಕ್ಷಾಳಯೇತ್ ।

ಯಾವಕಕೃಸರಮಾಂಸಶಷ್ಕುಲೀಪಾಯಸಮಾತ್ಮಾರ್ಥಂ ।

ನ ಕಲ್ಪಯೇತ್ ।

ಅಗ್ನಿಪರಿಚಾರೀ ನಿತ್ಯಂ ಭಿಕ್ಷಾಂ ದದ್ಯಾತ್ ।

ವಾಗ್ಯತಃ ಪ್ರಾಙ್ಮುಖೋದಂತಕಾಷ್ಠಂ ಪ್ರಶಸ್ತಮದ್ಯಾತ್ ।
ನಾಭ್ಯುದಿತಃಸ್ಯಾತ್ ಪ್ರಾತರುತ್ಥಾಯ ಪಿತರಮಾಚಾರ್ಯ
ಮಭಿವಾದಯೇತ್ । ಅಕೃತ್ವಾ ದಂತಧಾವನಂ ದೇವಪೂಜಾ ।
ಕಾರ್ಯಗಮನಸಮಾಗಮಾನ್ನಾಚರೇತ್ ಅನ್ಯತ್ರ ಗುರುವೃದ್ಧ ।

---

ಪಾಯಸ ಇವುಗಳನ್ನು ತನ್ನ ರುಚಿಗಾಗಿ ಎಂದೂ ಮಾಡಿಸಬಾರದು. ನಿತ್ಯವೂ ಅಗ್ನಿ ಪೂಜಕನಾಗಿ, ಅತಿಥಿಗಳಿಗೆ ಭಿಕ್ಷಾದಾನ ಮಾಡುತ್ತಿರಬೇಕು.

ದಂತಧಾವನ ಮಾಡುವಾಗ ಪೂರ್ವಾಭಿಮುಖವಾಗಿ ನಿಂತು ಮಾತನಾಡದೆ ಹಲ್ಲನ್ನುಜ್ಜಬೇಕು. ಊಟವಾದಮೇಲೆ ದಂತಧಾವನ ಮಾಡಬಾರದು. ಪ್ರಾತಃಕಾಲ ಎದ್ದು ತಂದೆತಾಯಿಯರಿಗೂ ಗುರುಗಳಿಗೂ ವಂದಿಸಬೇಕು. ದಂತಧಾವನಮಾಡದೆ ದೇವಪೂಜಾದಿಕಾರ್ಯಗಳಿಗೆ ತೊಡಗಕೂಡದು. ಆದರೆ ಗುರು, ವೃದ್ಧ, ಧಾರ್ಮಿಕರು ಇವರ ಉಪಚಾರಾದಿಗಳಿಗೆ ದಂತಧಾವನದ ನಿರ್ಬಂಧವಿರುವುದಿಲ್ಲ. ಅಲ್ಲದೆ ಅದಕ್ಕೆ ಕಾಲ, ದಿಕ್ಕು, ಇವುಗಳ ವ್ಯವಸ್ಥೆಯಿಲ್ಲ. ಯಾವಾಗಲೂ ಉತ್ತರ ಮತ್ತು ಪಶ್ಚಿಮ ದಿಕ್ಕಿಗೆ ಶಿರಸ್ಸನ್ನಿಟ್ಟು ಮಲಗಬಾರದು. ತಲೆಕೆಳಗಾಗಿ ಶಿಖೆಯನ್ನು ಮೇಲೆಮಾಡಿ ದೇಹವನ್ನು ಮುದುರಿಕೊಂಡು ಅಥವಾ ಸಿಕ್ಕಿದಕಡೆಗೆ ಅಂಗಗಳನ್ನು ಎಸೆದುಕೊಂಡು ಮಲಗಬಾರದು. ಮನೆಯೊಳಕ್ಕೆ ಹಿಂದುಮುಂದಾಗಿ ಪ್ರವೇಶಿಸಕೂಡದು. ಸರ್ವದಾ

ಧಾರ್ಮಿಕೇಭ್ಯಃ ಸಮುಲೋ ದಿಶೋ ನಾವಲೋಕ್ಯ ಉದಕ್ಪ ।
ಶ್ಚಾಚ್ಛಿರಾ ನ ಶಯೀತ ಅವಾಕ್‌ಶಿರ ಊರ್ಧ್ವಶಿಖಿಶ್ಚ ।
ಭಗ್ನಾವಶೀರ್ಣಾಂತಧ್ಯಾನಸಂಯುಕ್ತಶಯನೇನ ತಿರ್ಯಕ್ಪದಾ ।
ಕೃಷ್ಣಾಸನಂ ಪ್ರಮೃಜ್ಯ ನ ವಿಶೇತ್ । ಸೂರ್ಯಸ್ಯ ಪೂಜಾಂ
ಕಥಾಂ ಭಕ್ತಿಂ ಕಾರಯೇತ್ ತತ್ಸರ್ವಂ ಯಮಸ್ಯ ಪ್ರಾಪ್ನೋತಿ ಧರ್ಮಂ ।

ನಿತ್ಯಂ ಬ್ರಾಹ್ಮಣಂ ಭೋಜಯೇತ್ಕಥಾಕಾರಿಣಂ ವಿಶೇಷತಃ ।
ಅನ್ನದಂತೇ ಯದಖಾದೇತ್ಸರ್ವಮಪಿ ।
ನಿಶಾಯಾಂ ನ ಸ್ನಾಯಾತ್ ಸ್ನಾತ್ವಾ ಗಾತ್ರಂ ನ ಮಾರ್ಜ ।
ಯೇತ್ ಸ್ನಾತ್ವಾ ನಾನುಲಿಂಪೇತ್ ।

---

ಸೂರ್ಯಾರಾಧನೆಯಲ್ಲಿ ಸೂರ್ಯಕಥಾಶ್ರವಣದಲ್ಲಿ ಆಸಕ್ತಿಯಿಂದಿರಬೇಕು. ಈ ಧರ್ಮ ವೆಲ್ಲವೂ ಯಮನಿಗೆ ಪ್ರೀತಿಕರವಾಗಿರುತ್ತದೆ.

ನಿತ್ಯವೂ ಬ್ರಾಹ್ಮಣನಿಗೆ ಭೋಜನಮಾಡಿಸಬೇಕು. ಕಥಾಶ್ರವಣ ಮಾಡಿಸುವವನಿಗಂತೂ ವಿಶೇಷರೀತಿಯ ಸತ್ಕಾರವು ಅತ್ಯಾವಶ್ಯಕ. ಭೋಜ್ಯವಸ್ತುಗಳೆಲ್ಲವನ್ನೂ ಪೂರ್ತಿಯಾಗಿ ಮುಗಿಸಬಾರದು. ರಾತ್ರಿಯಲ್ಲಿ ಅನಿಮಿತ್ತವಾಗಿ ಸ್ನಾನಮಾಡಬಾರದು. ಸ್ನಾನವಾದಮೇಲೆ ದೇಹವನ್ನು ಮತ್ತೆ ತೊಳೆಯಬಾರದು. ಮತ್ತು ಧೂಳಿನಲ್ಲಿ ಆಡಬಾರದು. ಸ್ನಾನಾನಂತರ ಒದ್ದೇಬಟ್ಟೆಯಲ್ಲಿ ನಿಂತಿರಬಾರದು. ಒದ್ದೇಬಟ್ಟೆಯನ್ನು ವೇಗವಾಗಿ ಕೊಡವಬಾರದು. ಹೂವಿನ ಸರವನ್ನು ಕಿತ್ತುಹಾಕಬಾರದು. ಮತ್ತು ಶರೀರದ ಹೊರಭಾಗದಲ್ಲಿ ಹೂವನ್ನು ಧರಿಸಬಾರದು. ಕೆಂಪುಹೂವಿನ ಸರವು ಧಾರಣೆಗೆ ನಿಷಿದ್ಧವಾದದ್ದು. ಆದರೆ ಕಮಲ, ಪುಷ್ಪಾಸನ ಇವುಗಳಲ್ಲಿ ದೋಷವಿಲ್ಲ. ಶ್ವೇತ ಪುಷ್ಪವೇ, ಧಾರಣೆಗೆ ಶ್ರೇಷ್ಠ. ಸ್ನಾನಮಾಡಿದವನಿಗೆ ಜಾತಿಚಿಸ್ಹಾದಿಗಳನ್ನ ಕೊಡ ಬೇಕು. ಕಟ್ಟುಸಿರನ್ನು ಬಿಡಬಾರದು. ಮತ್ತೊಬ್ಬರು ಉಟ್ಟಬಟ್ಟೆಯನ್ನು ಉಪ

ನ ಸ್ನಾತ್ವಾದ್ರ್ರವಾಸಾಸ್ತಿಷ್ಠೇತ್ ವಾಸೋ ।
ನ ವಿಧುನಯಾತ್ ಸ್ರಜೋ ನಾವಕೃಷ್ಟವ್ಯಾಃ ।
ನ ಬಹಿರ್ಧಾರ್ಯಾಸ್ಸ್ರ ರಕ್ತಮಾಲ್ಯಂ ನ ಧಾರ್ಯಂ ।
ಶುಕ್ಲಂ ಧಾರ್ಯಂ ತು ಅನ್ಯತ್ರ ಕಮಲಕುವಲಯಾಮ್ಲಾನಾ ।
ಸನೇಭ್ಯಃ ಸ್ನಾತಸ್ಯ ವರ್ಣನಾಂ ದದ್ಯಾತ್ ।
ಶ್ವಾಸವಿಪರ್ಯಯಂ ನ ಕುರ್ಯಾತ್ ನಾನ್ಯದ್ಧೃತಂ ಧಾರಯೇತ್ ।
ನ ಚ ಜೀರ್ಣಮಲಿನಂ ಸತಿ ಸಂಭವೇ ಅನ್ಯಶಯ್ಯಾಯಾ ।
ಮನ್ಯದ್ರವ್ಯಾಯಾಮನ್ಯದೇವತಾರ್ಚಾಯಾಂ ।

ಕೀಟಕೇಶಾವಪನ್ನಮುದ್ಧೃತಸಾರಂ ನಾಶ್ನೀಯಾದ ।
ನ್ಯದೈವಾವಸನಪಿದಾಲಶಾಕಮುದುಂಬರಾನ್ನಾದೇತ್ ।

---

ಬಾರದು. ಹಾಗೆಯೇ ಜೀರ್ಣವಸ್ತ್ರ, ಮತ್ತೊಬ್ಬರ ಹಾಸಿಗೆ, ಮತ್ತೊಬ್ಬರ ದ್ರವ್ಯ ಅನ್ಯದೇವತಾರ್ಚನೆ ಇವೆಲ್ಲವೂ ನಿಷಿದ್ಧವಾದವುಗಳು.

ಕ್ರಿಮಿಕೀಟಗಳು ತಮ್ಮ ಆಹಾರಕ್ಕಾಗಿಟ್ಟುಕೊಂಡಿರುವ ಸಾಮಗ್ರಿಗಳನ್ನು ತಾವು ಆಹಾರಕ್ಕಾಗಿ ಬಳಸಕೂಡದು. ನಿಸಾರವಾದ ವಸ್ತುಗಳನ್ನು ದೂರಮಾಡಬೇಕು. ದೇವರಿಗೆ ನಿವೇದಿತವಲ್ಲದ್ದನ್ನೂ, ಅತ್ತಿಯಹಣ್ಣು, ಮುಂತಾದ ಕ್ರಿಮಿಬದ್ಧವಾದವುಗಳನ್ನೂ, ಆಡು, ಹಸು, ನವಿಲು, ಇವುಗಳ ಮಾಂಸವನ್ನೂ ಭಕ್ಷಿಸಕೂಡದು. ಒಣಗಿದ ಮತ್ತು ತಂಗಳುಮಾಂಸವು ಭೋಜನಾರ್ಹವಲ್ಲದ್ದು. ಕೈಯಿಂದ ಉಪ್ಪನ್ನು ತರಕೂಡದು. ನಾಯಿಯೇ ಮೊದಲಾದ ಮಾಂಸಭಕ್ಷಕ ಪ್ರಾಣಿಗಳನ್ನು ಮುಟ್ಟಬಾರದು. ಭ್ರೂಣಹತ್ಯವೇ ಮೊದಲಾದ ಅಕಾರ್ಯಗಳನ್ನಾಚರಿಸಿದವರ ಸಂಪರ್ಕ ಕೂಡದು. ಅವರಿಂದ ಆಘ್ರಾತವಾದದ್ದನ್ನು ತಿನ್ನಬಾರದು. ಅರ್ಧರಾತ್ರಿ ಕಾಲದಲ್ಲಿ ಊಟಮಾಡಬಾರದು. ಮೊಸರಿನಿಂದ ಕೂಡಿದ ಕೇವಲ ಹಿಟ್ಟನ್ನು ತಿನ್ನಬಾರದು. ತನ್ನಪುತ್ರ ಮತ್ತು ಪರಪುತ್ರ ಇವರಿಗೆ ಭೇದವಿಡಬಾರದು. ಪ್ರಾತಃಕಾಲದಲ್ಲಿ ಶಾಕಾಹಾರವನ್ನು ಭುಜಿಸಬೇಕು. ಚಿತ್ತಶುದ್ಧಿಯಿಂದ, ನಿರ್ಮಲಭಾವದಿಂದ ಊಟಮಾಡ

**ಅಜಾಗವ್ಯಮಯೂರ ಶುಷ್ಕಪರ್ಯುಷಿತಮಾಂಸಂ ಚ ।**
**ನ ಪಾಣೌ ಲವಣಮಾದದ್ಯಾತ್ । ಶ್ವಾದಿವ್ಯಾಪದಂ ಸ್ಪೃಷ್ಟ್ವಾ ।**
**ಭೂಭ್ರೂಣಹೇಕ್ಷಿಯುತತಅರ್ಚಲೀಢಾಘ್ರಾತಂ ಚ ।**
**ನ ರಾತ್ರೌ ಭುಂಜೀತ ದಧಿಸಕ್ತೂನ್ ಶ್ಲೇಕೀಸಂ ಚ ವರ್ಜಯೇತ್ ।**
**ಬಾಲೇನ ಪರಪುತ್ರೇಣ ಚ ಶಾಕಂ ಪ್ರಾ ।**
**ತಶ್ಚ ಭುಂಜೀತ ನಾಂತರಾ ನಸಮಾಹಿತಃ । ವಾಗ್ಯತೋ ನೈಕೆ ।**
**ಪಾತ್ರಶ್ಚ ನಗ್ನೋ ಸಂವಿಶನ್ನಶಬ್ದಕೃತ್ ಶೇಷೇನ ಕಸ್ಯಾಪಿ ।**
**ಉದಕಪೂರ್ವಮನ್ನಮತಿಥಿಭ್ಯೋ ದತ್ವಾ ಸಮಶ್ನೀಯಾತ್ ।**
**ಏಕಪಂಕ್ತೌ ಗತಾನಾಂ ಚೇದ್ದಧಿಮಧುಸಕ್ತುಪಾಯಸಪಾನೀಯಂ ।**
**ನಿರಸ್ಯ ಅಶ್ನೀಯಾತ್ ಶೇಷಂ ನ ಕಸ್ಯಚಿದ್ದದ್ಯಾತ್ ।**

---

ಬೇಕು. ಊಟಮಾಡುವಾಗ ಮಾತನಾಡದೆ ಶಬ್ದಮಾಡದೇ ವಸ್ತ್ರಧಾರಿಯಾಗಿ ಬೇರೆಬೇರೆ ಪಾತ್ರೆಗಳನ್ನಿಟ್ಟುಕೊಂಡಿರಬೇಕು. ಎಂಜಲನ್ನವನ್ನು ಮತ್ತೊಬ್ಬನಿಗೆ ಕೊಡಕೂಡದು. ಶುದ್ಧವಾದ ಅನ್ನವನ್ನು ಮತ್ತೊಬ್ಬರಿಗೆ ಕೊಡುವಾಗ ಮೊದಲು ನೀರನ್ನು ಕೊಟ್ಟು ಆಮೇಲೆ ಭೋಜ್ಯವನ್ನು ನೀಡಬೇಕು.

ಒಂದೇ ಸಾಲಿನಲ್ಲಿ ಊಟಕ್ಕೆ ಕುಳಿತಿರುವಾಗ ತಾನೊಬ್ಬನೇ, ಹಾಲು, ಮೊಸರು, ತಂಬಿಟ್ಟು, ಪಾಯಸ, ಮೊದಲಾದುವುಗಳನ್ನು ಪ್ರತ್ಯೇಕವಾಗಿ ಭುಜಿಸಬಾರದು. ಅಥವಾ ಎಲ್ಲರಿಗೂ ಬಡಿಸುವಾಗ ಒಬ್ಬರಿಗೆ ಹಾಕಿ ಒಂದೇಪಾತ್ರೆಯಲ್ಲಿ ಉಳಿದುದನ್ನು ಮತ್ತೊಬ್ಬರಿಗೆ ಹಾಕಕೂಡದು. ಬಿಳಿಯಬಣ್ಣದ ಆಹಾರದೊಂದಿಗೆ ಮೊಸರನ್ನು ಸೇರಿಸಿ ಊಟಮಾಡಬೇಕು. ಊಟವಾದಮೇಲೆ ಆಚಮನ ಮಾಡಿ ಬಲ ಭಾಗದ ಅಂಗುಷ್ಠಕ್ಕೂ, ಕಾಲಿಗೂ ಜಲಸೇಚನಮಾಡಿಕೊಳ್ಳಬೇಕು. ಭೋಜನಾನಂತರ ಕೈಯನ್ನು ಶಿರಸ್ಸಿನಲ್ಲಿಟ್ಟು ಅಗ್ನಿಸಮೀಪದಲ್ಲಿ ದೃಢಮನಸ್ಸಿನಿಂದ ಸ್ವಲ್ಪ ಹೊತ್ತು ಕುಳಿತಿರಬೇಕು. ಹೀಗೆ ಮಾಡುವವನು ಬಂಧುಗಳಲ್ಲೆಲ್ಲಾ ಶ್ರೇಷ್ಠನೆನಿಸಿ, ಸರ್ವಕಾರ್ಯದಲ್ಲಿಯೂ ನಿಪುಣನಾಗುವನು.

ದಧ್ಯನುಪಾನಂ ಶುಕ್ಲಾಶನೇನ ಕಾರ್ಯಂ ಆಚಮ್ಯ ।
ಚೈಕಹಸ್ತೇನ ಪರಿಶ್ರಾವ್ಯಂ ತಥೋದಕಂ ಅಂಗುಷ್ಠೇ ।
ಚರಣಸ್ಯಾಥ ದಕ್ಷಿಣಸ್ಯಾವಸೇಚನಂ ।
ಪಾಣಿಂ ಮೂರ್ಧ್ನಿ ಸಮಾಧಾಯ ಸ್ಪೃಷ್ಟ್ವಾಗ್ನಿಂ ಸುಸಮಾಹಿತಃ ।
ಜ್ಞಾತೀನಾಂ ಶ್ರೇಷ್ಠತಾಮೇತಿ ಪ್ರಯೋಗಕುಶಲೋ ನರಃ ।
ಆರ್ದ್ರಪಾಣಿನಾ ನಾಭಿಘ್ರಾಣಂ ಪಾಣಿತಲಾಭಿನ್ನಂ ಸ್ಪೃಶಂ ।
ಸ್ತಿಷ್ಠೇತ್। ಪತಿತಕಥಾಂ ದರ್ಶನಂ ಸಸಂಗಾಂಶ್ಚ ವರ್ಜಯೇತ್ ।
ಪರಾಪವಾದಮಪ್ರಿಯವಚನಂ ನ ಬ್ರೂಯಾತ್, ನ ಕಸ್ಯ ಚಿ ।
ನ್ಮನ್ಯುಮುತ್ಪಾದಯೇತ್ ನ ದಿವಾ ಮೈಥುನಂ ಗಚ್ಛೇತ್ ।
ಕನ್ಯಾಬಂಧಕೀಮಜ್ಞಾತಾಂ ಗರ್ಭಿಣೀಂ ವ್ಯಂಗಾಂ ವೃದ್ಧಾಂ ।

ಪ್ರವ್ರಜಿತಾಂ ಪತಿವ್ರತಾಂ ವರ್ಣೋತ್ಕೃಷ್ಟಾಂ ನಿಕೃಷ್ಟವರ್ಣಾಂ ಪಿಂಗಲಾಂ ಕುಷ್ಠಿನೀಂ ಯೋಗಿನೀಂ ಚಿತ್ರಿಣೀಂ ಸ್ವಕುಲಜಾಂ ಜ್ಞಾತಿಸಂಬಂಧ ಹೀನಾ ಮಪಸ್ಮಾರಿಣೀಂ ಚ ವರ್ಜಯೇತ್ ಅಗಮ್ಯಾಂ ನ ಗಚ್ಛೇತ್ ।

---

ಅನಂತರ ಒದ್ದೆಯಾದ ಕೈಯಿಂದ ಹೊಕ್ಕಳು, ಮೂಗು, ಅಂಗೈ ಇವುಗಳನ್ನು ಸ್ಪರ್ಶಮಾಡಬೇಕು. ಜಾತಿಭ್ರಷ್ಟರಾದವರ ದರ್ಶನವನ್ನಾಗಲೀ, ಸಹವಾಸವನ್ನಾಗಲಿ ಮಾಡಬಾರದು. ಮತ್ತೊಬ್ಬರ ದೂಷಣೆಯ ಮಾತುಗಳನ್ನಾಗಲೀ, ಮತ್ತೊಬ್ಬರಿಗೆ ಅಹಿತವಾಗುವ ವಚನಗಳನ್ನಾಗಲೀ, ನುಡಿಯಬಾರದು. ಯಾರಿಗೂ ಕೋಪವನ್ನು ಉಂಟುಮಾಡಬಾರದು. ಹಗಲಿನಲ್ಲಿ ಸ್ತ್ರೀ ಸಂಬಂಧ ಮಾಡಕೂಡದು. ಕನ್ಯಾವಸ್ಥೆಯಲ್ಲಿರುವ ಹೆಂಗಸು, ವ್ಯಭಿಚಾರಿಣೀ, ಅಪರಿಚಿತಳು, ಗರ್ಭಿಣಿ, ಅಂಗಹೀನರು, ವೃದ್ಧಳು, ಸಂನ್ಯಾಸಿನೀ, ಪತಿವ್ರತೆ, ಉತ್ಕೃಷ್ಟಜಾತಿಯವಳು, ಹೀನಜಾತಿಯವಳು, ಪಿಂಗಲವರ್ಣದವಳು, ಕುಷ್ಠರೋಗದವಳು, ಯೋಗಿನಿಯು, ಚಿತ್ರರೋಗದವಳು, ತನ್ನ ಮನೆಯಲ್ಲಿಯೇ ಹುಟ್ಟಿದ ಹೆಂಗಸು, ಸಂಬಂಧವಿಲ್ಲದ ಹೆಂಗಸು, ಅಪಸ್ಮಾರ ರೋಗವಿಶಿಷ್ಟಳು, ಇಂತಹ ಸ್ತ್ರೀ ಸಂಬಂಧವನ್ನು ದೂರಮಾಡಬೇಕು. ಅಂತೂ ಸ್ತ್ರೀ ಸಂಭೋಗಕ್ಕೆ ಅನರ್ಹರಾದವರ ಜೊತೆಯಲ್ಲಿ ಎಂದೂ ಸಂಬಂಧಮಾಡಬಾರದು.

ರಾಜಸಖಿ ವೈದ್ಯಬಾಲವೃದ್ಧವ್ಯತ್ಯುಶರಣಾಗತ ।
ಸಂಬಂಧೀ ಬ್ರಾಹ್ಮಣೀತದನ್ಯೇಷಾಂ ಸ್ತ್ರಿಯಂ ।
ವಂಧ್ಯಾಂ ಚ ವರ್ಜಯೇತ್ ।
ನಿಷ್ಠೀವ್ಯ ಕ್ಷುತ್ವಾ ನ ಶುಚಿರ್ಭವೇತ್ ।
ವೃದ್ಧೋ ಗತಿರವಸನ್ನೋ ಮಿತ್ರಾಣಿ ಶುಕಸಾರಿಕಾಃ ।
ಪಾರಾವತಾಃ ಪುಣ್ಯಕೃತಾ ಗೇಹೇಸ್ಸ್ಯುಸ್ತೈಲಪಾಯಿಕಾಃ ।
ಸಂಧ್ಯಾಯಾಂ ಸ್ವಾಧ್ಯಾಯಂ ಭೋಜನಂ ನ ಚ ಕುರ್ಯಾತ್ ।
ನ ನಕ್ತಂ ಪಿತ್ರ್ಯಾಣಿ ನ ಪ್ರಸಾಧನಂ ನ ಚ ಪಣ್ಯಕ್ರಿಯಾ ಕದಾಚಿತ್ಕಾರ್ಯಾ ।

ದೈವೇ ಪಿತ್ರ್ಯೇ ಸ್ವನಕ್ಷತ್ರೇ ಚ ಶಿರಃ ಸ್ನಾತೋ ಭವೇತ್ ।
ನಪೃಷ್ಠಪದಯೋರಗ್ನಿಂ ದದ್ಯಾತ್ ।

---

ರಾಜಪತ್ನಿ, ಸ್ನೇಹಿತನ ಹೆಂಡತಿ, ವೈದ್ಯಪತ್ನೀ, ಬಾಲಿಕೆ, ವೃದ್ಧಳು, ರುಗ್ಣ ಶಯ್ಯೆಯಲ್ಲಿರುವವಳು, ಶರಣಾಗತನಪತ್ನಿ, ಬ್ರಾಹ್ಮಣಸ್ತ್ರೀ, ಬಂಜೆ, ಇವರಲ್ಲಿ ಸಂಭೋಗಕ್ಕಾಗಿ ಆಸೆಯಿಡಬಾರದು.

ಉಗುಳಿದರೆ, ಮತ್ತು ಸೀತರೆ ಮೈಲಿಗೆಯಾಗುವುದು. ಮನೆಯಲ್ಲಿ ವೃದ್ಧರು, ಗಮನಾಸಕ್ತರು, ಗಿಳಿಗಳು, ಶಾರಿಕಾಪಕ್ಷಿಗಳು, ಕಪೋತಗಳು, ತೈಲಪಾಯಿಕೆಗಳು, ಇವುಗಳು ಮಿತ್ರರಂತೆ ಇರತಕ್ಕವುಗಳು. ಸಾಯಂಕಾಲದ ವೇಳೆಯಲ್ಲಿ ಊಟವನ್ನಾಗಲೀ, ಅಧ್ಯಯನವನ್ನಾಗಲೀ, ಮಾಡಬಾರದು. ರಾತ್ರಿಕಾಲಗಳಲ್ಲಿ ಪಿತೃಗಳನ್ನೂ, ಅಲಂಕಾರಕರ್ಮವನ್ನೂ ವ್ಯಾಪಾರಾದಿಗಳನ್ನೂ ಮಾಡಕೂಡದು.

ದೇವಪೂಜೆ, ಪಿತೃಕಾರ್ಯ, ಸ್ವಜನ್ಮನಕ್ಷತ್ರ, ಈ ದಿನಗಳಲ್ಲಿ ಶಿರಸ್ಸ್ನಾನಮಾಡಬೇಕು. ಅಗ್ನಿಯನ್ನು ತನ್ನ ಕಾಲಿನ ಅಡಿಭಾಗದಲ್ಲಿಯೂ, ಹಿಂಭಾಗದಲ್ಲಿಯೂ, ಇಟ್ಟುಕೊಳ್ಳಬಾರದು. ಸಾಯಂಕಾಲದಲ್ಲಿ ಪ್ರೇತಶಬ್ದವನ್ನುಚ್ಚರಿಸಬಾರದು. ಪತ್ನಿಯರ ಇಷ್ಟಾನುವರ್ತಿಯಾಗಿದ್ದು ಅವರನ್ನು ರಕ್ಷಿಸಬೇಕು. ಹಗಲು ಸ್ವಸ್ಥಳದಲ್ಲಿಯೂ, ರಾತ್ರಿ ಪರಸ್ಥಳದಲ್ಲಿಯೂ ನಿದ್ರಿಸಬಾರದು. ಆಹ್ವಾನವಿಲ್ಲದೆ ಯಜ್ಞಯಾಗಾದಿ

ಪ್ರೇತಸ್ಯ ಸಂಧ್ಯಾಯಾಂ ನೋಚ್ಚರೇತ್ ।
ಪ್ರಯತ್ನತಃ ಸ್ಯಾತ್ ।
ಇಚ್ಛಾನುಪಿ ಕುರ್ವತಾ ದಾರಾ ರಕ್ಷ್ಯಾಃ ।
ನ ದಿವಾ ಸ್ವಾಪಃ ಆಯುಷೇ ಪುರೇನಿಶಾಯಾಶ್ಚ ।
ಆವೃತೋ ಯಜ್ಞಂ ನ ಗಚ್ಛೇದನ್ಯತ್ರದರ್ಶನಾತ್ ।
ನೈಕೋ ರಾತ್ರೌ ವ್ರಜೇತ್ ।

ಅನಾಗತಾಯಾಂ ಪಶ್ಚಿಮಸಂಧ್ಯಾಯಾಂ ಗೃಹಮಧಿವಸೇತ್ ।
ಮಾತೃಪಿತೃವಚನಂ ಹಿತಮಹಿತಂ ವಾ ಕಾರ್ಯಮೇವ ವಿಚಾರ್ಯ ।
ಧನುರ್ವೇದಹಸ್ತಿಹಯಪೃಷ್ಠರಥಚರ್ಯಾಸು ಪ್ರಯತ್ನಃ ಕಾರ್ಯಃ ।
ಯುಕ್ತಿಶಬ್ದಕಲಾಗಾಂಧರ್ವಶಾಸ್ತ್ರಪುರಾಣೇತಿ
ಹಾಸಾಖ್ಯಾನಮಾಹಾತ್ಮ್ಯಚೀರತಾಭಿಜ್ಞೇನ ಭವಿತವ್ಯಂ ।
ಆದಿತ್ಯವ್ರತಂ ಸಪ್ತಮ್ಯಾಂ ಚರೇತ್ ನ ಗಾಂ ।

---

ಗಳಲ್ಲಿ ಭಾಗವಹಿಸಕೂಡದು. ದರ್ಶನಮಾಡಲು ಅದಕ್ಕೆ ಆಹ್ವಾನವನ್ನು ಅಪೇಕ್ಷಿಸ ಬಾರದು. ಒಬ್ಬನೇ ಒಂಟಿಯಾಗಿ ರಾತ್ರಿಯಲ್ಲಿ ಪ್ರವಾಸಮಾಡಬಾರದು.

ಸಾಯಂಕಾಲದ ಮೇಲೆ ಮನೆಯನ್ನು ಸೇರಬೇಕು. ಮಾತಾಪಿತೃಗಳಮಾತು ಹಿತವಾಗಿರಲಿ, ಅಹಿತವಾಗಿರಲಿ, ಅದನ್ನು ನಡೆಸಬೇಕು. ಧನುರ್ವಿದ್ಯೆ, ಆನೆ, ಕುದುರೆ, ರಥ, ಚಾಲನ ಮುಂತಾದುವುಗಳ ವಿದ್ಯಾಸ್ವರೂಪವನ್ನು ಸ್ವಲ್ಪವಾದರೂ ಅರಿತಿರಬೇಕು. ಸುತರ್ಕ, ಸಂಗೀತ, ನಾಟ್ಯ, ಪುರಾಣ, ಇತಿಹಾಸ ಇವುಗಳಲ್ಲಿ ಬರುವ ಮಹಾವಿಷಯಗಳನ್ನು ತಿಳಿಯಲು ಪ್ರಯತ್ನಿಸಬೇಕು. ಪ್ರತಿ ಸಪ್ತಮಿ ತಿಥಿಯಲ್ಲಿಯೂ ಸೂರ್ಯೋಪಾಸನೆ ಮಾಡಬೇಕು. ಹಸುವನ್ನು ಕಾಲಿನಿಂದ ಒದೆಯ ಕೂಡದು. ದನದ ಹಗ್ಗವನ್ನು ದಾಟಕೂಡದು. ಇಟ್ಟಿದ್ದ ಗಂಟನ್ನು ನಂಬಿಕೆಯಿಂದ ಅಪಹರಿಸಿದವರ ಮತ್ತು ಗೋ, ಬ್ರಾಹ್ಮಣ, ಸ್ತ್ರೀ, ಇವರಿಗೆ ತೊಂದರೆಪಡಿಸಿದವರ ಯಜಮಾನನಾಗಿ ಎಂದೂ ನಿಲ್ಲಬಾರದು. ಸರ್ವದಾ ಉಪಕಾರ ಮಾಡಿದವರಿಗೆ ಕೃತಜ್ಞನಾಗಿರಬೇಕು. ತಾನೊಬ್ಬನೇ ಮೃಷ್ಟಾನ್ನವನ್ನು ಭುಜಿಸಕೂಡದು. ಸ್ತ್ರೀ ಸಂಪಾದನೆಯಿಂದ ಅಥವಾ ಸ್ತ್ರೀ ಬಂಧುಗಳವರ ಆಸ್ತಿಪಾಸ್ತಿಯಿಂದ ತಾನು ಜೀವನ

ಪಾದೇನ ಸ್ಪೃಶೇತ್ ಗೋರಜ್ಜುಂ ನ ಲಂಘಯೇತ್ ।
ನ್ಯಾಸವಿಶ್ವಾಸಹಾರಿಮಧವರ್ನ್ಯೋಯಮುಹತೋ ಗೋ ।
ಬ್ರಾಹ್ಮಣಸ್ತ್ರೀಷು ನ ಶೂರಃ ಸ್ಯಾತ್ ಅಕೃತಜ್ಞಶ್ಚ ।
ಏಕೋಮಿಷ್ಟಂ ನಾಶ್ನೀಯಾತ್ ಸ್ತ್ರೀಭ್ಯಃ ।
ಸ್ತ್ರೀಬಂಧುಭ್ಯಶ್ಚ ವೃತ್ತಿಂ ನಾಶ್ರಯೇತ್ ।

॥ ಅತ್ರಗಾಥಾಃ ॥

ಆಕ್ರೋಶಕಸಮಾಲೋಕೇ ಸುಹೃದನ್ಯೋ ನ ವಿದ್ಯತೇ ।
ಯಸ್ತು ದುಷ್ಕೃತಮಾದಾಯ ಸುಕೃತೇನಾಭಿಶಂಸತಿ ।
ಕೂಟಸಾಕ್ಷೀ ನ ಭವೇತ್ ಶರಣಾಗತಂ ನ ತ್ಯಜೇತ್ ।
ದಾನಂ ನ ಕೀರ್ತಯೇತ್, ಬಲ್ವಜಾನಾಂ ದಾನೇನ ।
ಕಾಂಸ್ಯದೋಹನೇನ ಪರವತ್ಸೇನ ಚ ಗೌರ್ನ ದೋಗ್ಧವ್ಯಾ ।
ಪತ್ನಿಂ ರಜಸ್ವಲಾಂ ನಾಭಿಗಚ್ಛೇತ್ ಶುದ್ಧಸ್ನಾತಾಂ ಚತುರ್ಥ್ಯಾಂ ।

---

ನಡೆಸಬಾರದು. ಸ್ನೇಹಿತರ ವಿಷಯದಲ್ಲಿ ಒಂದು ವಿಷಯವನ್ನು ಜ್ಞಾಪಕದಲ್ಲಿಡಬೇಕು. ನಿಜವಾದ ಸ್ನೇಹಿತನೆಂದರೆ ಮನುಷ್ಯನು ಮಾಡಿದ ಅನ್ಯಾಯಗಳನ್ನು ತಪ್ಪಿಸಿ, ಅಥವಾ ಹೋಗಲಾಡಿಸಿ, ಅವನಿಂದ ಸತ್ಕಾರ್ಯಗಳನ್ನು ನಡೆಸಿ, ಆ ಮೂಲಕ ಆತನು ಸುಕೃತಿಯೆಂದು ಹೇಳಿ ಕೊಂಡಾಡುವವನೇ ನಿಜವಾದ ಸ್ನೇಹಿತ. ಉಳಿದವರು ಸುಹೃತ್ತುಗಳಲ್ಲ ಎಂಬುದನ್ನು ದೃಢವಾಗಿ ತಿಳಿಯಬೇಕು. ದೊಂಬಿಯುದ್ಧದಲ್ಲಿ ಸಾಕ್ಷಿಹೇಳಲು ಹೋಗಬಾರದು. ಮೊರೆಹೊಕ್ಕವರನ್ನು ಕೈಬಿಡಬಾರದು ಮಾಡಿದ ದಾನವನ್ನು ಹೊಗಳಿಕೊಳ್ಳಬಾರದು. ಆಹಾರಾದಿಗಳ ಆಸೆಯನ್ನು ತೋರಿಸಿ ಪರರ ಗೋವುಗಳಿಂದ ಕಂಚಿನಪಾತ್ರೆಯಲ್ಲಿ ಹಾಲನ್ನು ಕರೆಯಬಾರದು. ಬಹಿಷ್ಠೆಯಾಗಿರುವ ಸ್ವಪತ್ನಿಯನ್ನು ಭೋಗಿಸಕೂಡದು. ಋತುಸ್ನಾತಳಾದ ಪತ್ನಿಯನ್ನು ನಾಲ್ಕನೆಯ ದಿನದಿಂದ ಹಿಡಿದು ಹದಿನಾರನೆಯ ದಿನ ಪರ್ಯಂತ, ಪುತ್ರಕಾಮನಾದ

ವಾ ಷೋಡಶೀಂ ಸಮವಿಷಮದಿನೇಷು ಪುತ್ರ್ಯರ್ಥೀ ।
ತ್ಯಕಾಮೋ ನಿರ್ವಿಕಾರೋಽಧಿಶಯೀತ ।

ನಾಗ್ನಾವಮೇಧ್ಯಂ ಪ್ರಕ್ಷಿಪೇತ್ ।
ನ ವರ್ಷತಿ ಧಾವೇತ್ ।
ನ ಹಸ್ತವಾತೇನಾಪಚೇತ್ ।
ಅನಿಷ್ಟ್ವಾ ನವಂ ಸಸ್ಯಂ ನಾದ್ಯಾತ್ ।
ಶುಕ್ಲವಸ್ತ್ರಧಾರೀ ಸ್ಯಾತ್ ।
ಶ್ಮಶ್ರುಕೇಶನಖಾನ್ನದೀರ್ಘಾನ್ನ ಬಿಭೃಯಾತ್ ।
ನೋದಕೇ ಸ್ವರೂಪಂ ಪಶ್ಯೇತ್ ।

ನಾಪಃ ಪರಿಚಕ್ಷೀತ ಭಾರ್ಯಯಾ ಸಹ ನಾಶ್ನೀಯಾತ್ ।
ನ ತಾಮೀಕ್ಷೇತ್ ಸುಖಾಸೀನಾಂ ಅಶ್ನಂತೀಂ ಕ್ಷುವಂತೀಂ ।
ಸ್ನುಷ್ಟಮೈಥುನಾಂ ಜೃಂಭಮಾಣಾಂ ಚ ಪರಸ್ತ್ರಿಯಂ ಚ ನಗ್ನಾಂ ।

ನಾಗ್ನಿಂ ಮುಖೇನ ಧಮೇತ್ ।
ನ ಪಾದೌ ಪ್ರತಾಪಯೇತ್ ।
ಅಸ್ತ್ರಾನ್ನೋಪದಧ್ಯಾತ್ ।

---

ವನು ಸಮದಿನಗಳಲ್ಲಿಯೂ, ಪುತ್ರೀಕಾಮಿಯಾದವನು ವಿಷಮದಿನಗಳಲ್ಲಿಯೂ, ಸ್ಥಿರಮನಸ್ಸಿನಿಂದ ಉಪಭೋಗಿಸಬೇಕು.

ಅಗ್ನಿಯಲ್ಲಿ ಅಮೇಧ್ಯವನ್ನು ಹಾಕಬಾರದು. ಮಳೆಬರುತ್ತಿರುವಾಗ ಓಡಿಹೋಗ ಬಾರದು. ಕೈಯಿಂದಬೀಸಿ ಅಗ್ನಿಯನ್ನು ಉರಿಸಬಾರದು. ಹೊಸದಾಗಿ ಬಂದ ಬೆಳೆ ಯನ್ನು ದೇವರಿಗೆ ನಿವೇದಿಸದೆ ತಾನು ಊಟಮಾಡಬಾರದು. ಶುದ್ಧವಾದ ವಸ್ತ್ರ ವನ್ನುಡುವುದನ್ನು ಅಭ್ಯಸಿಸಬೇಕು. ಮೀಸೆ, ತಲೆಗೂದಲು, ಉಗುರು ಇವುಗಳನ್ನು ಉದ್ದವಾಗಿ ಬೆಳೆಸಿಕೊಳ್ಳಬಾರದು. ನೀರಿನಲ್ಲಿ ತಮ್ಮ ಪ್ರತಿಬಿಂಬವನ್ನು ನೋಡಿಕೊಳ್ಳ ಬಾರದು. ಜಲಮೂಲವನ್ನು ಪರೀಕ್ಷಿಸಬಾರದು. ಪತ್ನಿಯೊಡನೆ ಒಟ್ಟಾಗಿ ಕುಳಿತು ಊಟಮಾಡಬಾರದು. ಸುಖವಾಗಿ ಕುಳಿತಿದ್ದ, ಊಟಮಾಡುತ್ತಿದ್ದ, ಸೀನುತ್ತಿದ್ದ, ಸಂಭೋಗಾಸಕ್ತಳಾಗಿದ್ದ, ಆಕಳಿಸುತ್ತಿದ್ದ, ನಗ್ನಳಾಗಿದ್ದ ಪರಸ್ತ್ರೀಯನ್ನು ನೋಡ ಬಾರದು. ಅಗ್ನಿಯನ್ನು ಬಾಯಿಯಿಂದ ಊದಿ ಹೊತ್ತಿಸಬಾರದು. ಪಾದಗಳನ್ನು ಬೆಂಕಿಯಲ್ಲಿ ಕಾಯಿಸಬಾರದು. ಕಾಲಕೆಳಗೆ ಬೆಂಕಿಯನ್ನು ಇಡಬಾರದು.

ನೈನಂ ಲಂಘಯೇತ್ ।
ನ ಪಾದತಃ ಕುರ್ಯಾತ್ ।
ನ ಭೂಮಿಂ ಪ್ರವಿಲಿಖೇತ್ ।
ಷ್ಠೀವನಾಮೇಧ್ಯಲಿಪ್ತರುಧಿರವಸಾಸ್ಥೀನಿ ನ ಜಲೇಕ್ಷಿಪೇತ್ ।
ಶೂನ್ಯಗೃಹೇ ನೈಕಃ ಶಯೀತ ।
ನ ಚಾಗ್ನಿಗುರುದೇವದ್ವಿಜಪತಿಧೇನ್ವಧ್ಯಯನ ।
ಭೋಜನೇಷು ದಕ್ಷಿಣಪಾಣಿಮುದ್ಧರೇತ್ ।
ನ ವಾದಯೇದ್ಗಾಂ ಚರಂತೀಂ ಪರಸಸ್ಯ ।
ಮಾದಯಂತೀಂ ಪರಸ್ಮೈ ನಾಚಕ್ಷೀತ ।
ದಿವೀಂದ್ರಾಯುಧಂ ದೃಷ್ಟ್ವಾ ನ ಕಸ್ಯಚಿದ್ದರ್ಶಯೇತ್ ।
ಅಧಾರ್ಮಿಕದೇಶೇ ನ ವಸೇತ್ ।
ವ್ಯಾಧಿಬಹುಲೋ ನೈಕೋ ವೀಥೀಂ ಪ್ರಪದ್ಯೇತ ।

---

ಬೆಂಕಿಯನ್ನು ದಾಟಬಾರದು. ಕಾಲಿನಿಂದ ತುಳಿಯಲೂಬಾರದು. ಕಾಲಿನಿಂದ ಭೂಮಿಯನ್ನು ಗೀಚಬಾರದು. ರಕ್ತ, ಮಾಂಸ, ಎಂಜಲು, ಕೊಳೆ, ಇವುಗಳಿಂದ ಮಲಿನವಾಗಿರುವ ಮೂಳೆಗಳನ್ನು ನೀರಿನೊಳಕ್ಕೆ ಹಾಕಬಾರದು. ಯಾರೂ ಇಲ್ಲದ ಮನೆಯಲ್ಲಿ ಒಬ್ಬನೇ ಮಲಗಬಾರದು. ಗುರುಗಳ, ದೇವರ, ಯಜಮಾನನ, ಹಸುವಿನ ಮುಂದೆಯೂ, ಅಧ್ಯಯನಮಾಡುವಾಗ, ಭೋಜನಮಾಡುವಾಗ ಬಲಗೈಯನ್ನು ಮೇಲೆತ್ತಬಾರದು. ಹಸುವು ಪರಕ್ಷೇತ್ರದಲ್ಲಿ ಮೇಯುತ್ತಿರುವುದನ್ನು ನೋಡಿ ಅದನ್ನು ಮತ್ತೊಬ್ಬರಿಗೆ ಹೇಳಬಾರದು. ಹಗಲುಹೊತ್ತಿನಲ್ಲಿ ಕಂಡುಬಂದ ಕಾಮನ ಬಿಲ್ಲನ್ನು ನೋಡಿ ಆ ವಿಷಯವನ್ನು ಮತ್ತೊಬ್ಬರಿಗೆ ತೋರಿಸಕೂಡದು.

ಧರ್ಮಿಷ್ಠರಿಲ್ಲದ ದೇಶದಲ್ಲಿ ವಾಸಮಾಡಕೂಡದು. ಕಾಯಿಲೆಯು ಬಹಳವಾಗಿರುವಾಗ ಬೀದಿಯಲ್ಲಿ ಒಬ್ಬನೇ ಹೋಗಬಾರದು. ಪರ್ವತದಲ್ಲಿ ಬಹುಕಾಲ ವಾಸಿಸಬಾರದು. ವ್ಯರ್ಥವಾಗಿ ಬೊಗಸೆಯಿಂದ ನೀರು ಕುಡಿಯುವುದು, ತೊಡೆಗೆ ನೀರು ಹಾಕುವುದು, ತಿನ್ನಬಾರದ ವಸ್ತುವನ್ನು ತಿನ್ನುವುದು ಇವುಗಳನ್ನು ಬಿಡಬೇಕು.

ಪರ್ವತೇ ನ ಚಿರಂ ವಸೇತ್ ।

ವೃಥಾ ಚೇಷ್ಟಾಮಂಜಲಿನಾ ಜಲಪಾನಮುತ್ಸಂಗೇನ ।

ಭಕ್ಷ್ಯಭಕ್ಷಣಂ ಕುತೂಹಲಂ ತ್ಯಜೇತ್ ।

ನೃತ್ಯಗೀತವಾದಿತ್ರಾಸ್ಫೋಟನಾಕ್ಷ್ವೇಲನಾನಿ ಚ ।

ವಿರಕ್ತೋಽಪಿ ನೇಕ್ಷೇತ ।

ಕಾಂಸ್ಯಭಾಜನೇ ನ ಪಾದಂ ಪ್ರಕ್ಷಾಳಯೇತ್ ।

ಪಾದೇನ ಚ ವದಿತಾಶ್ವಾದಿಭಿರ್ನ ವ್ರಜೇತ್ ।

ಬಾಲಾತಪಪ್ರೇತಧೂಮ ಸಂಮಾರ್ಜನೀರಜಾಂಸಿ ಪರಿಹರೇತ್ ।

ನ ದ್ಯೂತಂ ಕ್ರೀಡೇತ್ ।

ನ ಸ್ವಯಮುಪಾನಹೌ ಹರೇತ್ ।

ಶಯನಸ್ಥೋ ನಾಶ್ನೀಯಾತ್ ।

ನ ಪಾಣಿಸ್ಥಾನೇಚಾಸನೇನ ಬಾಹುಭ್ಯಾಂ ನದೀಂ ಪ್ರತರೇತ್ ।

---

ನಾಟ್ಯ, ಸಂಗೀತ, ವಾದ್ಯರವ, ಇತರ ನಾಟ್ಯ ಭೇದಾದಿಗಳನ್ನು ವಿರಕ್ತನಾಗಿಯೂ ನೋಡಬಾರದು. ಕಂಚಿನಪಾತ್ರೆಯಲ್ಲಿ ಕಾಲು ತೊಳೆಯಬಾರದು. ಓಡಿಹೋಗುವ ಕುದುರೆ ಮೊದಲಾದುವುಗಳೊಡನೆ ತಾನೂ ಕಾಲಿನಿಂದ ಓಡಬಾರದು. ಎಳೆಬಿಸಿಲು ಪ್ರೇತಧೂಮ, ರಸ್ತೆಯ ಧೂಳು ಇವುಗಳನ್ನು ಸೇವಿಸಬಾರದು.

ಜೂಜಾಡಬಾರದು. ತಾನೇ ತನ್ನ ಪಾದರಕ್ಷೆಗಳನ್ನು ಹೊತ್ತುಕೊಂಡು ಹೋಗಬಾರದು. ಹಾಸಿಗೆಯಮೇಲೆ ಕುಳಿತು ಊಟಮಾಡಬಾರದು. ಕೈಯಿಂದ, ಆಸನದಿಂದ, ತೋಳುಗಳಿಂದ ನದಿಯನ್ನು ದಾಟಲು ಪ್ರಯತ್ನಿಸಬಾರದು. ಮರವನ್ನು ಹತ್ತಬಾರದು. ಸಂದೇಹದಿಂದ ಕೂಡಿದ ದೋಣಿಯಮೇಲೆ ಏರಬಾರದು. ಭಾವಿಯಲ್ಲಿ ಇಳಿಯಬಾರದು. ದೇವತೆಗಳು, ಬ್ರಾಹ್ಮಣರು, ಗುರುಗಳು, ರಾಜರು, ಸ್ನಾತಕವ್ರತಿಗಳು, ಆಚಾರ್ಯರು, ಇವರು ಮೈಥುನಮಾಡುವ ಪ್ರದೇಶದಲ್ಲಿ ತಾನು ನಿಲ್ಲಕೂಡದು. ಊಟವಾದಮೇಲೆ ಸ್ನಾನಮಾಡಬಾರದು. ಕಾಯಿಲೆಯವರೂ, ಅರ್ಧರಾತ್ರಿಯಲ್ಲಿಯೂ, ಸ್ನಾನಮಾಡಬಾರದು. ಪರಿಚಯವಿಲ್ಲದ ಕೊಳದಲ್ಲಿ ಸ್ನಾನ

ನ ವೃಕ್ಷಮಾರೋಹೇತ್ ।
ನ ಸಂದಿಗ್ಧಾಂ ನಾವಮಾರೋಹೇತ್ ।
ನ ಕೂಪಮವತರೇತ್ !
ನ ದೇವದ್ವಿಜಗುರುರಾಜಸ್ನಾತಕಾಚಾರ್ಯವ್ಯೈಥುನವಾಸಃ ।
ನ ಚ ಭುಕ್ತ್ವಾ ಸ್ನಾಯಾತ್ ।
ನಾತುರೋ ನ ಮಹಾನಿಶಿ ।
ನಾವಿಜ್ಞಾತೇ ಜಲಾಶಯೇ ।
ನ ವಾಸೋಭಿರಜಸ್ರಂ ।
ವೈರೀತತ್ಸಾಹಾಯಾಧಾರ್ಮಿಕತಸ್ಕರದೇವಾ ಪರಿಹರ್ತವ್ಯಾ ।

ಸತೀಪ್ರಿಯಂ ಸತ್ಯಂ ಬ್ರೂಯಾತ್ ।
ಸತ್ಯಮಪ್ರಿಯಂ ಪ್ರಿಯಮನೃತಂ ಚ ನ ಬ್ರೂಯಾತ್ ।

---

ಕ್ಕಾಗಿ ಇಳಿಯಬಾರದು. ದೊಡ್ಡವಸ್ತ್ರಗಳಿಂದ ಕೂಡಿ ಕೊಳದಲ್ಲಿ ಮುಳುಗಬಾರದು. ಶತ್ರುಗಳು, ತತ್ಪಕ್ಷೀಯರು, ಅಧಾರ್ಮಿಕರು, ಕಳ್ಳರು, ಇವರಸೇವೆ ಮಾಡಬಾರದು.

ಹೆಂಗಸರಿಗೆ ನಿಜವಾದ ಮತ್ತು ಹಿತಕರವಾದ ಮಾತುಗಳನ್ನಾಡುತ್ತಿರಬೇಕು. ಪ್ರಿಯವಲ್ಲದ ನಿಜಾಂಶವನ್ನೂ, ಹಿತವಾಗಿರುವ ಸುಳ್ಳನ್ನೂ ಎಂದೂ ಹೇಳಬಾರದು. ವ್ಯರ್ಥವಾದ ದ್ವೇಷವನ್ನಾಗಲೀ ಮಾತನ್ನಾಗಲೀ ಸಾಧಿಸಕೂಡದು. ಮಂಗಳಕಾರ್ಯ ದಲ್ಲಿ ಸರ್ವದಾ ಆಸಕ್ತನಾಗಿರಬೇಕು. ತನ್ನ ಸರ್ವಾವಯವವನ್ನೂ, ಉಗುರು, ನಾಭಿ ಮುಂತಾದುವುಗಳನ್ನೂ ಮಂತ್ರಪೂರ್ವಕವಾಗಿಯೇ ಅಂಗೈಯಿಂದ ಮುಟ್ಟಬೇಕು. ರಹಸ್ಯಸ್ಥಳದಲ್ಲಿ ಬೆಳೆದಿರುವ ಕೂದಲುಗಳನ್ನು ಆಗಾಗ್ಗೆ ತೆಗೆದು ದೂರಮಾಡಬೇಕು. ದೇವತೆಗಳು, ಬ್ರಾಹ್ಮಣರು, ಗುರುಗಳು, ಇವರನ್ನು ಸರ್ವದಾ ಸೇವಿಸಬೇಕು. ಆತ್ಮರಕ್ಷಾರ್ಥವಾಗಿ ಈಶ್ವರನನ್ನು ಪೂಜಿಸಬೇಕು. ಪರಾಧೀನವಾಗಿ ಕೆಲಸಮಾಡ ಬಾರದು. ಸುಖಾಭಿಲಾಷೆಯುಳ್ಳವನು ಎಲ್ಲವನ್ನೂ ತನಗೆ ಅಧೀನವನ್ನಾಗಿ ಮಾಡಿ

ಶುಷ್ಕವೈರಂ ವಚನಂ ವರ್ಜಯೇತ್ ।
ಸರ್ವಮಂಗಲಾಚರಣಯುಕ್ತಃ ಸ್ಯಾತ್ ।
ಸರ್ವಗಾತ್ರಾಣಿ ನಖಾನಿ ನಾಭಿಸಾಣಿತಲೇನ ನ ಸ್ಪೃಶೇದನಾಂತ್ರತಃ।
ರಹಸ್ಯಾನಿ ರೋಮಾಣಿ ವರ್ಜಯೇತ್ ।
ದೇವದ್ವಿಜೋತ್ತಮಗುರೂನ್ ಸೇವಯೇತ್ ।
ಈಶ್ವರಂ ಚ ರಕ್ಷಾರ್ಥಂ ।
ಪರವಶಕರ್ಮ ಜಹ್ಯಾತ್ ।
ಆತ್ಮವಶಂ ಕುರ್ವೀತ ಸುಖಾರ್ಥೀ ।
ಅಂತರಾತ್ಮಪರಿತೋಷಕೃದ್ಧಾರ್ಮಿಕಃ ಸ್ಯಾತ್ ।
ಅರ್ಥಕಾಮೌ ಧರ್ಮವಿವರ್ಜಿತೌ ತ್ಯಾಜ್ಯೌ ।
ವಾಕ್ಪಾಣಿಪಾದನೇತ್ರಚಪಲೋ ನ ಭವೇತ್ ।

---

ಕೊಳ್ಳಬೇಕು. ಧರ್ಮಮಾಡುವವನು, ತನ್ನ ಮನಸ್ಸಿಗೆ ಹರ್ಷವಾಗುವಂತೆ ದಾನ ಮಾಡಬೇಕು.

ಧರ್ಮದೂರವಾದ ಅರ್ಥವನ್ನಾಗಲೀ, ಕಾಮವನ್ನಾಗಲೀ ಬಯಸಕೂಡದು. ಕೈ, ಕಾಲು, ಮೂಗು, ಕಣ್ಣು ಇವುಗಳನ್ನು ಯಾವಾಗಲೂ ಚಲಿಸುತ್ತಿರಬಾರದು. ಪರದ್ರೋಹವೆಸಗುವವನು, ಹೋಮಮಾಡುವವನು, ಪುರೋಹಿತ, ಆಚಾರ್ಯ, ಸೋದರಮಾವ, ಅತಿಥಿಗಳು, ಆಶ್ರಿತರು, ಮುದುಕರು, ಹುಡುಗರು, ರೋಗಿಗಳು ವೈದ್ಯರು, ಜ್ಞಾತಿಗಳು, ನೆಂಟರು, ತಂದೆ, ತಾಯಿ, ಅಣ್ಣ, ಹೆಂಡತಿ, ಸಪತ್ನೀಕ ಮಾತೃ, ಮಗಳು, ಸೇವಕರು, ಇವರೊಡನೆ ಜಗಳವಾಡಬಾರದು. ವಿದ್ವಾಂಸ ನಲ್ಲದವನು ಗೋದಾನ, ಆರಣ್ಯದಾನ, ಭೂದಾನ, ಅಶ್ವದಾನ, ವಸ್ತ್ರದಾನ, ಅನ್ನದಾನ ತಿಲದಾನ, ಘೃತದಾನ, ಇವುಗಳನ್ನು ಸ್ವೀಕರಿಸಬಾರದು. ಪರಕೀಯರ ಬಾವಿಗಳಲ್ಲಿ ಇಳಿದು ಸ್ನಾನಮಾಡಬಾರದು. ಬಾವಿಯಲ್ಲಿ ಇಳಿದು ಸ್ನಾನಮಾಡುವಾಗ ಏಳುಂಡೆ ಮೃತ್ತಿಕೆಗಳನ್ನು ತೆಗೆದು ಅನಂತರಸ್ನಾನಮಾಡಬೇಕು. ನದಿಯಲ್ಲಿ ಕೋಪಿಷ್ಠರಾಗಿ

ಪರದ್ರೋಹೀ ಚ ಋತ್ವಿಕ್ಪುರೋಹಿತಾಚಾರ್ಯ ।
ಮಾತುಲಾತಿಥಿಸಾಶ್ರಿತವೃದ್ಧಬಾಲಾತುರ ।
ವೈದ್ಯಜ್ಞಾತಿ ಸಂಬಂಧಿ ಬಾಂಧವ ಮಾತೃಪಿತೃ ।
ಭ್ರಾತೃಪಿತೃಭಾರ್ಯಾ ದುಹಿತೃದಾಸೈರ್ವಿವಾದಂ ನ ಸಮಾಚರೇತ್ ।
ಗೋಹಿರಣ್ಯಭೂಮ್ಯಶ್ವವಾಸೋನ್ನತಿಲಸ್ಪೈ ।
ತಾನ್ಯವಿದ್ವಾನ್ನ ಪ್ರತಿಗೃಹ್ಣೀಯಾತ್ ।
ಪರಕೀಯನಿಪಾನೇಷು ನ ಸ್ನಾಯಾತ್ ।
ವಾಪೀಂ ಚ ಸಪ್ತಪಿಂಡಾನುದ್ಧೃತ್ಯ ।
ನದೀದೇವಖಾತಪ್ರಸ್ರವಣೇಷು ಸ್ನಾನಂ ಕುರ್ಯಾತ್ ।
ಕ್ರುದ್ಧಮಂದಾತುರಸ್ತ್ರೀಸ್ಯಗಣಿಕಾವಿದ್ವಜ್ಜುಗುಪ್ಸಿತಂ ।
ಸ್ತೇನತಕ್ಷಕೇ ವಾರ್ಧುಷಿಕೇ ಗಾಯಕೇ ಕದರ್ಯದೀಕ್ಷಿತಂ ।

ನಿಂದ್ಯವದ್ಧಾಭಿಶಸ್ತ ಶಠಪುಂಶ್ಚಲೀಬಂದಿ ಚಿಕಿತ್ಸಕಂ ।
ಪೂಗಾನ್ನಶೂದ್ರೋಚ್ಛಿಷ್ಟಕುಷ್ಕಪರ್ಯುಷಿತಾವಕ್ಷುತಂ ನಾದ್ಯಾತ್ ।

---

ರುವವರು, ದಡ್ಡರು, ರೋಗಿಗಳು, ಸೂಳೆಯರು, ವಿದ್ವಾಂಸರಿಗೆ ಇಷ್ಟವಿಲ್ಲದವರು, ಕಳ್ಳರು, ಹಾವಾಡಿಗರು, ಬಡ್ಡಿಯಿಂದ ಜೀವಿಸುವವರು, ಗಾಯಕರು, ಕೃಪಣರು· ದೀಕ್ಷಿತರು, ಇವರಿಂದ ಕೊಡಲ್ಪಟ್ಟ ಆಹಾರವನ್ನು ಭುಜಿಸಕೂಡದು.

ನಿಂದ್ಯರಿಂದ ಸಂಪಾದಿತವಾದ,· ಶಾಪಯುಕ್ತವಾದ, ಮತ್ತು ಮೋಸಗಾರರು, ಗಂಡಸಿನಂತೆಯೇ ವರ್ತಿಸುವ ಹೆಂಗಸರು, ಬಂಧಿತರಾದವರು, ವೈದ್ಯರು ಇವರಿಂದ ಕೊಡಲ್ಪಟ್ಟ ಆಹಾರವನ್ನು ತ್ಯಾಜ್ಯಮಾಡಬೇಕು. ಅಡಕೆಯಿಂದ ಬೆರೆದಿರುವ, ಶೂದ್ರನ ಎಂಜಲಾಗಿರುವ, ಒಣಗಿ ತಂಗಳಾಗಿರುವ, ಕ್ರಿಮಿ ವಿಶಿಷ್ಟವಾಗಿರುವ ಆಹಾರವನ್ನು ತಿನ್ನಬಾರದು. ಆಯುಷ್ಕಾಮನಾದವನು ಶತ್ರುಗಳ ಮತ್ತು ಸುವರ್ಣಕಾರರ ಅನ್ನವನ್ನು ದೂರಮಾಡಬೇಕು. ಅಧ್ಯಯನ ಮಾಡದಿರುವವರನ್ನು ದೂರೀಕರಿಸಬೇಕು. ನೀರಾಗಿರುವ ಅನ್ನ, ಎಳ್ಳು, ದೀಪ, ಭೂಮಿ, ಚಿನ್ನ, ಗೃಹ, ವಸ್ತ್ರ,

ದ್ವಿಷತಶ್ಚಾಯುಷ್ಕಾಮಃ ಸುವರ್ಣಕಾರಾನ್ನಂ ಪರಿಹರೇತ್ ।
ಅನಧ್ಯಾಯಿನಂ ವರ್ಜಯೇತ್ ।
ವಾರ್ಯನ್ನತಿಲದೀಪಭೂಮಿ ಹಿರಣ್ಯಗೃಹವಸ್ತ್ರಗಾವಶ್ಚ ।
ನೇದ್ಧಾಧಾನಸದ್ಮೋಧ್ಯಾನಾಭಯ ಬ್ರಹ್ಮಣೇ ।
ಯಥಾಶಕ್ತಿತೋ ದದ್ಯಾತ್ ।
ತೃಪ್ತ್ಯತಿಶಯಸುಖಪ್ರಜಾಚಕ್ಷುರ್ಭೋತ್ಯಾಯು ।
ರಗ್ರವೇಶ್ಮರೂಪ ಚಂದ್ರಸೂರ್ಯ ಸಾಲೋಕ್ಯೇಷ್ಟ ।
ಭಾರ್ಯಾಶಾಶ್ವತ ಸರ್ವೈಶ್ವರ್ಯ ಬ್ರಹ್ಮಲೋಕಾವಾಪ್ತಿಕಾಮಃ ।
ಸೂರ್ಯನಿಮಿತ್ತಛತ್ರೋಪಾನಹೌ ಚ ದದ್ಯಾತ್ ।

ಉತ್ತಮೋತ್ತಮ ಸಂಬಂಧವಿತ್ತಕುಲೋನ್ನತಿಕಾಮಃ ।
ಶಯ್ಯಾಗೃಹಕುಶಬಂಧ ಪುಷ್ಪೋದಕಮಣಿದಧಿನಾ ।
ಮತ್ಸ್ಯಪಯೋಮಾಂಸಶಾಕಾನಿ ರತ್ನಿರ್ನಿದೇತ್ ।
ದೇವತಾತಿಥಿ ಗುರುಭೃತ್ಯಾರ್ಚನೋದ್ಧರಣೇ ।

---

ಗೋವು ಇವುಗಳನ್ನು ಪರಿಗ್ರಹಿಸಬಾರದು. ವಿಧಿಪೂರ್ವಕವಾದ ಹೋಮ, ಧ್ಯಾನಾದಿ ಕಾರ್ಯಗಳು, ಅಭಯಪ್ರದಾನಮಾಡುವ ಸಂಸ್ಥೆಗಳು ಇವುಗಳಿಗೆ ತನ್ನ ಶಕ್ತಿಯನ್ನನುಸರಿಸಿ, ದಾನಮಾಡಬೇಕು. ತನಗೆ ತೃಪ್ತಿ, ಅತಿಶಯಸುಖ, ಪುತ್ರಸಂಪತ್ತು, ನೇತ್ರಸುಖ, ಆಯುಸ್ಸು, ಗೃಹ, ಚಂದ್ರಲೋಕ ಸೂರ್ಯಲೋಕಪ್ರಾಪ್ತಿ, ಇಷ್ಟಭಾರ್ಯಾ ಪ್ರಾಪ್ತಿ, ಶಾಶ್ವತಸುಖ, ಬ್ರಹ್ಮಲೋಕ ಇವುಗಳನ್ನು ಅಪೇಕ್ಷಿಸುವವನು, ಸೂರ್ಯ ಪ್ರೀತ್ಯರ್ಥವಾಗಿ, ಛತ್ರಿ, ಪಾದುಕೆಗಳನ್ನು ದಾನಮಾಡಬೇಕು.

ಶ್ರೇಷ್ಠವಾದ ಸಂಬಂಧ, ಹಣ, ಕುಲ, ಏಳಿಗೆ, ಮುಂತಾದುವುಗಳನ್ನು ಬಯಸುವವನು, ಶಯ್ಯಾದಾನ, ಗೃಹದಾನ, ಕುಲಬಂಧ, ಪುಷ್ಪ, ಉದಕ, ಮೊಸರು ಮತ್ಸ್ಯ, ಹಾಲು, ಮಾಂಸ, ಕಾಯಿಪಲ್ಯ, ಇವುಗಳನ್ನು ದಾನಮಾಡಬೇಕು. ದೇವತಾರಾಧನೆ, ಅತಿಥಿಸೇವೆ, ಗುರುಪೂಜೆ, ಇವುಗಳಲ್ಲಿ ನಿರತನಾದವನು ಆತ್ಮಜ್ಞಾನಿಯಾಗುವನು. ಎಲೈ ರಾಜನೇ, ಇಲ್ಲಿನವರೆಗೆ ಜನರು ಅನುಸರಿಸಬೇಕಾದ ಸದಾಚಾರ

ಕಾಮಃ ಅಧ್ಯಾತ್ಮಜ್ಞಾನನಿರತಃ ಸ್ಯಾತ್ ।
ಇತಿ ತೇ ಕಥಿತಂ ಸಮ್ಯಗಾಚಾರಃ ಪುಣ್ಯ ।
ಲಕ್ಷಣಃ ಆಯುರ್ಲಕ್ಷ್ಮೀ ಯಶೋಭೂತಿಕಾರಣಂ ಬ್ರಹ್ಮನಿರ್ಮಿತಂ।
ಆಚಾರಯುಕ್ತಃ ಪುರುಷಃ ಪ್ರೇತ್ಯ ಚೇಹ ಚ ಮೋದತೇ ।
ಆಚಾರಾದ್ವರ್ಧತೇ ಹ್ಯಾಯುರಾಚಾರೋ ಹಂತ್ಯಲಕ್ಷಣಂ ।
ದುರಾಚಾರೋ ಹಿ ಪುರುಷೋ ಲೋಕೇ ಭವತಿ ನಿಂದಿತಃ ।
ದುಃಖಭಾಗೀ ಚ ಸತತಂ ವ್ಯಾಧಿತೋಽಲ್ಪಾಯುರೇವ ಚ ।
ತಸ್ಮಾದ್ಭವೇತ್ಸದಾಚಾರಃ ಸ ಮುದಾಶ್ರೀರನೇರ್ನರಃ ।
ದೇವಸ್ಯ ಪ್ರಿಯತಾಮೇತಿ ಲಕ್ಷ್ಮೀಂ ವಿಂದತಿ ನಿಶ್ಚಲಾಂ ।

ಇತಿ ಶ್ರೀ ಸಾಂಬಪುರಾಣೇ ಚತುಶ್ಚತ್ವಾರಿಂಶೋಽಧ್ಯಾಯಃ.

---

ಗಳನ್ನೆಲ್ಲಾ ನಿನಗೆ ತಿಳಿಸಿರುವೆನು. ಈ ಆಚಾರಾನುಷ್ಠಾನದಿಂದ ಮಾನವರು ಸುಕೃತವನ್ನೂ, ಆಯುಸ್ಸು, ಸಂಪತ್ತು, ಕೀರ್ತಿ, ಜ್ಞಾನ ಮುಂತಾದುವುಗಳನ್ನು ಪಡೆಯುವರೆಂಬುದರಲ್ಲಿ ಸಂಶಯವಿಲ್ಲ.

ಆಚಾರಯುಕ್ತನಾದ ಮಾನವರು ಐಹಿಕಸುಖಗಳನ್ನು ಅನುಭವಿಸಿ, ಅನಂತರ ಸೂರ್ಯಲೋಕವನ್ನು ಹೊಂದುವರು. ಆಯುಸ್ಸು ಆಚಾರದಿಂದಲೇ ವೃದ್ಧಿ ಹೊಂದುತ್ತದೆ. ಆಚಾರದಿಂದಲೇ ಅಮಂಗಲ ನಿವೃತ್ತಿಯಾಗುವುದು. ದುರಾಚಾರವಿಶಿಷ್ಟರಾದವರು ನಿತ್ಯರೋಗಿಗಳಾಗಿ, ಅಲ್ಪಾಯುಷ್ಯಂತರೆನಿಸಿ ಐಹಿಕಾ ಮುಷ್ಮಿಕ ಸುಖಗಳನ್ನು ಕಳೆದು ಕೊಳ್ಳುವರು. ಆದ್ದರಿಂದ ಆಯುರಾರೋಗ್ಯಾದಿ ಸೌಖ್ಯಗಳನ್ನು ಅಪೇಕ್ಷಿಸುವವರು, ಸಂತೋಷದಿಂದ ಇಲ್ಲಿ ಸೂರ್ಯಪ್ರೋಕ್ತವಾದ ಸದಾಚಾರಗಳನ್ನು ಅನುಷ್ಠಾನದಲ್ಲಿಟ್ಟು ಕೊಂಡು ನಡೆದರೆ ಅವರು ಐಹಿಕಸುಖಗಳಿಂದ, ಆಯುರಾರೋಗ್ಯಾದಿಗಳನ್ನು ಪೂರ್ತಿ ಯಾಗಿ ಹೊಂದುವರಲ್ಲದೆ ಅತಿಶಯವಾದ ಮೋಕ್ಷಪದವಿಯನ್ನು ಕಾಣುವರು, ಎಂದು ವಸಿಷ್ಠಮಹರ್ಷಿಯು ಸಾಂಬನಿಗೆ ಉಪದೇಶಿದರೆಂಬಲ್ಲಿಗೆ

ಶ್ರೀ ಸಾಂಬಪುರಾಣದಲ್ಲಿ ನಲವತ್ತು ನಾಲ್ಕನೆಯ ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಪಂಚಚತ್ವಾರಿಂಶೋಽಧ್ಯಾಯಃ



॥ ಸಾಂಬ ಉವಾಚ ॥

ಇದಮುಕ್ತಂ ತ್ವಯಾ ಬ್ರಹ್ಮನ್ ಛತ್ರಂ ಸೂರ್ಯೇಣ ನಿರ್ಮಿತಂ ।
ಉಪಾನಹೌ ಚ ಯೋ ದದ್ಯಾಚ್ಛಕ್ರಲೋಕಂ ಸ ಗಚ್ಛತಿ ॥ ೧ ॥

ಏತದಾಚಕ್ಷ್ವ ಭಗವನ್ ಕಥಂ ಸೂರ್ಯವಿನಿರ್ಮಿತಂ ।
ಛತ್ರಪಾದುಕಯೋರ್ದಾನಮುದ್ಧ್ವತಾಂತದ್ವಿಜಾತಯೇ ॥ ೨ ॥

॥ ನಾರದ ಉವಾಚ ॥

ಏತತ್ತೇ ಸಂಪ್ರವಕ್ಷ್ಯಾಮಿ ಯಥಾ ವೃತ್ತಮಿದಂ ಪುರಾ ।
ಜಮದಗ್ನಿಃ ಕಿಲ ಶರಾನ್ ಪುರಾ ಚಿಕ್ಷೇಪ ಭಾರ್ಗವಃ ॥ ೩ ॥

---

## ನಲವತ್ತೈದನೆಯ ಅಧ್ಯಾಯ.

೧-೨. ಸಾಂಬನು ಮತ್ತೆ ನಾರದಮಹರ್ಷಿಯನ್ನು ಕುರಿತು "ಮಹರ್ಷಿವರ್ಯನೇ, ಛತ್ರಿದಾನವು ಸೂರ್ಯನಿಂದ ಪ್ರೋಕ್ತವಾದುದು ; ಪಾದರಕ್ಷಾದಾನಮಾಡಿದವನಿಗೆ ಇಂದ್ರಲೋಕಪ್ರಾಪ್ತಿಯಾಗುವುದು ಎಂದು ಹೇಳಿದೆಯಲ್ಲವೆ ? ಸೂರ್ಯನಿಗೆ ಛತ್ರಿಯು ದಾನವು ತೃಪ್ತಿಕರವಾಗುವುದು ಹೇಗೆ ? ಮಾರ್ಗಾಯಾಸದಿಂದ ಬಳಲಿದ ಬ್ರಾಹ್ಮಣರಿಗೆ ಛತ್ರಿ, ಪಾದುಕೆ ಇವುಗಳನ್ನು ದಾನಮಾಡಿದ್ದರಿಂದ ಬರುವ ಫಲವೇನು ? ಇದನ್ನು ವಿವರಿಸಬೇಕು " ಎಂದು ಪ್ರಾರ್ಥಿಸಿಕೊಂಡನು.

೩-೪. ಅದಕ್ಕೆ ನಾರದಮಹರ್ಷಿಯು ಹಿಂದೆ ನಡೆದ ಒಂದು ಇತಿಹಾಸವನ್ನು ಸಾಂಬನಿಗೆ ಉಪದೇಶಿಸಿದನು " ಸಾಂಬನೇ, ಹಿಂದೆ ಪರಶುರಾಮನು ಜಮದಗ್ನಿ

**ತಾನ್ ಕ್ಷಿಪ್ತಾನ್ರೇಣುಕಾ ತಸ್ಯ ಭಾನೋರ್ಜಾಜ್ವಲ್ಯತೇಜಸಃ ।**
**ಆನೀಯಾಸೀದದಾತ್ತಸ್ಯ ಸಾ ಚ ಶೀಘ್ರಮನಿಂದಿತಾ ॥ ೪ ॥**

**ಅಥ ತೇನ ಸುಶಬ್ದೇನ ಜ್ಯಾತಿಲಸ್ಯ ಶರಸ್ಯ ಚ ।**
**ಪ್ರಹೃಷ್ಟಃ ಸಂಪ್ರಚಿಕ್ಷೇಪ ಸಾ ಚ ಪ್ರತ್ಯಾಜಹಾರ ತಂ ॥ ೫ ॥**

**ತತೋ ಮಧ್ಯಾಹ್ನಮಾರೂಢೇ ಜ್ಯೇಷ್ಠಾಮೂಲೇ ದಿವಾಕರೇ ।**
**ಸಾಯಕಾನ್ಯಾನ್ ದ್ವಿಜಃ ಕ್ಷಿಪ್ತ್ವಾ ರೇಣುಕಾಮಿದಮಬ್ರವೀತ್ ॥ ೬ ॥**

**ಗಚ್ಛಾನಯ ವಿಶಾಲಾಕ್ಷಿ ಶರಾನೇತಾನ್ ಧನುಶ್ಚ್ಯುತಾನ್ ।**
**ಯಾವದೇತಾನ್ ಪುನಃ ಸುಭ್ರು ಕ್ಷಿಪಾಮೀತಿ ಮುನಿರ್ವದನ್ ॥ ೭ ॥**

**ಗಚ್ಛಂತೀ ಸಾ ತುಚ್ಛಾಯಾಂ ವಾರ್ಕ್ಷೀಮಾಶ್ರಿತ್ಯ ಭಾಮಿನೀ ।**
**ತಸ್ಥೌ ಸೂರ್ಯಾಂಶು ಸಂತಪ್ತಶಿರಃಪಾದಾಂಬುಜದ್ವಯಾ ॥ ೮ ॥**

---

ಋಷಿಗೆ ಒಂದು ದಿವ್ಯಬಾಣವನ್ನು ಅನುಗ್ರಹಿಸಿದನು. ಅದು ಕೋಟಿಸೂರ್ಯರ ತೇಜಸ್ಸಿಗೆ ಸರಿಸಮನಾಗಿತ್ತು. ಇಂತಹ ಬಾಣವನ್ನು ರೇಣುಕಾದೇವಿಯು ಪತಿಯಾದ ಜಮದಗ್ನಿಗೆ ತಂದೊಪ್ಪಿಸಿದಳು.

೫-೬. ಆ ಬಾಣವು ಸುಶಬ್ದಮಯವಾಗಿ ಹೆದೆಯಿಂದ ಹೊರಬೀಳುತ್ತಿತ್ತು. ಅದನ್ನು ಜಮದಗ್ನಿಋಷಿಯು ಆಗಾಗ ಬಿಲ್ಲಿನಿಂದ ಹೊಡೆದು ಮತ್ತೆ ಮತ್ತೆ ಅದನ್ನು ತಂದುಕೊಡುವಂತೆ ಪತ್ನಿಗೆ ಅಪ್ಪಣೆಮಾಡುತ್ತಿದ್ದನು. ಒಂದು ದಿನ ಜ್ಯೇಷ್ಠಾ ನಕ್ಷತ್ರದ ಒಂದನೆಯ ಪಾದದಲ್ಲಿ ಸೂರ್ಯನು ಸಂಚರಿಸುತ್ತಿದ್ದಾಗ ಅಂದರೆ ವೃಶ್ಚಿಕ ಮಾಸದ ಒಂದು ಮಧ್ಯಾಹ್ನ ಕಾಲದಲ್ಲಿ ಇನ್ನೂ ಅನೇಕ ಬಾಣಗಳನ್ನು ಧನುಸ್ಸಿಗೆ ಹೂಡಿ ಪ್ರಯೋಗಮಾಡಿದನು.

೭-೮. ಒಡನೆಯೇ ಪತ್ನಿಯನ್ನು ಕರೆದು ಬಿಲ್ಲಿನಿಂದ ಪ್ರಯೋಗಮಾಡಿರುವ ಆ ಬಾಣಗಳನ್ನೆಲ್ಲಾ ಹಿಂದಕ್ಕೆ ತಾ ಎಂದು ಅಪ್ಪಣೆ ಮಾಡಿದನು. ಆಕೆಯು ಅದರಂತೆ ವೇಗವಾಗಿ ಓಡಾಡಿ, ಕೊನೆಗೆ ಅತಿಶಯವಾದ ಬಿಸಿಲಿನಿಂದ ಬಳಲಿದವಳಾಗಿ, ಕೈ, ಕಾಲು, ಶಿರಸ್ಸು ಇವು ಬಿಸಿಲಿನಿಂದ ಉರಿಯುತ್ತಿರಲು ಒಂದು ಮರದ ನೆರಳನ್ನು ಆಶ್ರಯಿಸಿ ಸ್ವಲ್ಪಹೊತ್ತು ನಿಂತುಕೊಂಡಳು.

ಸ್ಥಿತ್ವಾ ತತ್ರ ಮುಹೂರ್ತಂ ಸಾ ಭರ್ತುಃ ಶಾಪಭಯಾಚ್ಛುಭಾ ।
ಗತ್ವಾದಾಯ ಶರಾನ್ ಭೂಯಸ್ತಸ್ಮೈ ಪ್ರಾದಾದ್ಯಶಸ್ವಿನೀ ॥ ೯ ॥

ಸ ತಾಮ್ಪೃಷ್ಟ ಪ್ರಸ್ವಿನ್ನಾಂ ಧಿಯಾವೇದಿತವೇದನಾಂ ।
ಜಗೌ ವಚನಮಾರುಷ್ಟಃ ಕಿಂ ಚಿರೇಣಾಗತಾಹ್ಯಸಿ ॥ ೧೦ ॥

ರೇಣುಕಾ ವಾಕ್ಯಮಾಹೇದಂ ಚಂಡಾಂಶುಕರಪೀಡಿತಾ ।
ಶಿರಃ ಪಾದಂ ಪ್ರತಪ್ತಂ ಮೇ ಸೂರ್ಯತೇಜೋಭಿರುದ್ಧೃತೈಃ ॥ ೧೧ ॥

ವೃಕ್ಷಚ್ಛಾಯಾಗತಾ ತಸ್ಮಾಚ್ಚಿರಮೇತನ್ಮಯಾ ಕೃತಂ ।
ಶ್ರುತ್ವೈವಂ ಜಮದಗ್ನಿಸ್ತು ಕ್ರುದ್ಧಃ ಸೂರ್ಯಾಯ ಚಾಪಿನೇ ॥ ೧೨ ॥

ಸ ವಿಸ್ಫೂರ್ಜ್ಯ ಧನುರ್ಧೀಮಾನ್ ಗೃಹೀತ್ವಾ ಸಾಯಕಾನ್ ಬಹೂನ್ ।
ಅತಿಷ್ಠತ್ಸೂರ್ಯಮಭಿತೋ ಯತೋ ಯಾತಿ ತತೋ ಮುಖಂ ॥ ೧೩ ॥

---

೯-೧೦. ಸಾವಕಾಶಮಾಡಿದರೆ ಪತಿಯು ಶಾಪಕೊಡುವನೆಂದು ಹೆದರಿ ಒಡನೆಯೇ ರೇಣುಕೆಯು ಬಾಣಸಹಿತಳಾಗಿ ಬಂದಳು. ಬಿಸಿಲಿನಿಂದ ಬಳಲಿ ಕಂಗೆಟ್ಟು ಬೆಂದು ಬಂದ ರೇಣುಕೆಯನ್ನು ನೋಡಿ ಜಮದಗ್ನಿಯು ಕೋಪದಿಂದ ಇಷ್ಟು ತಡವಾಗಲು ಕಾರಣವೇನೆಂದು ಪ್ರಶ್ನಿಸಿದನು.

೧೧-೧೨. ಆಗ ರೇಣುಕೆಯು ತಾನು ಸೂರ್ಯಕಿರಣಗಳಿಂದ ಬಳಲಿದವಳಾಗಿ ಕಾಲು, ತಲೆ, ಇವು ಸುಡುತ್ತಿದ್ದುದರಿಂದ ನಡೆಯಲಾರದೆ ಮರದ ನೆರಳಿನಲ್ಲಿ ನಿಂತಿದ್ದಳೆಂದೂ, ಅದಕ್ಕಾಗಿ ಅಷ್ಟು ಸಾವಕಾಶವಾಯಿತೆಂದೂ ಹೇಳಿದಳು. ಆ ಮಾತನ್ನು ಕೇಳಿ ಜಮದಗ್ನಿಯು ಕೋಪದಿಂದ ಸೂರ್ಯನಿಗೆ ಕ್ರೂರವಾದ ಬಾಣಗಳನ್ನು ಪ್ರಯೋಗಿಸಿದನು.

೧೩-೧೪. ಆ ನಿಶಿತಾಸ್ತ್ರಗಳು ಸೂರ್ಯನ ಸುತ್ತಲೂ ವ್ಯಾಪಿಸಿ ಸೂರ್ಯಗತಿಯನ್ನು ನಿರೋಧಿಸಿದವು. ಅದನ್ನು ನೋಡಿ ಸೂರ್ಯದೇವನು ಬ್ರಾಹ್ಮಣವೇಷದಿಂದ

ದ್ವಿಜರೂಪಂ ಸಮಾಸ್ಥಾಯ ಸೂರ್ಯೋಽಭ್ಯೇತ್ಯ ವಚೋಽಬ್ರವೀತ್ ।
ಕಿಮರ್ಥಂ ರುಷಿತೋಽಸಿ ತ್ವಂ ಕಿಂ ತೇ ಸೂರ್ಯೋಽಪರಾಧ್ಯತಿ ॥ ೧೪ ॥

ಆದತ್ತೇ ರಶ್ಮಿಭಿಸ್ಸೂರ್ಯೋ ಜಲಂ ಸರ್ವಜಗತ್ಸ್ಥಿತಂ ।
ಆದಾಯ ಸಜಲಂ ದೇವೋ ವರ್ಷಾಕಾಲೇ ಪ್ರವರ್ಷತಿ ॥ ೧೫ ॥

ತತೋಽನ್ನಂ ಜಾಯತೇ ವಿಪ್ರಮಾನುಷಾಣಾಂ ಸುಖಾವಹಂ ।
ಅನ್ನಂ ಪ್ರಾಣ ಇತಿ ಪ್ರೋಕ್ತಂ ವೇದೇ ಚ ಪರಿಪಠ್ಯತೇ ॥ ೧೬ ॥

ತತೋ ಲೋಕಹಿತಾರ್ಥಾಯ ರಶ್ಮಿಭಿಃ ಪರಿವಾರಿತಃ ।
ಸಪ್ತದ್ವೀಪಾನಿಮಾನ್ ಬ್ರಹ್ಮನ್ ವರ್ಷೇಣಾಭಿಪ್ರವರ್ಷತಿ ॥ ೧೭ ॥

ತತಸ್ತತೌಷಧೀನಾಂ ಚ ವೀರುಧಾಂ ಪತ್ರಪುಷ್ಪಜಂ ।
ಸರ್ವವರ್ಷಾಭಿನಿರ್ವೃತ್ತಮನ್ನಂ ಸಂಭವತಿ ದ್ವಿಜ ॥ ೧೮ ॥

---

ಮುನಿಯ ಸಮೀಪಕ್ಕೆ ಬಂದು " ಮುನಿಯೇ, ನೀನು ಏತಕ್ಕಾಗಿ ಸೂರ್ಯನಮೇಲೆ ಕೋಪಮಾಡುವೆ ? ಆ ದೇವನು ನಿನಗೆ ಮಾಡಿದ ಅಪರಾಧವೇನು ?

೧೫-೧೬. ಸೂರ್ಯದೇವನು ತನ್ನ ಕಿರಣಗಳ ಸಹಾಯದಿಂದ ಭೂಮಿಯಲ್ಲಿರುವ ಜಲಭಾಗವನ್ನೆಲ್ಲಾ ಆಕರ್ಷಿಸಿ, ಕೊನೆಗೆ ವರ್ಷಾಕಾಲದಲ್ಲಿ ವೃಷ್ಟಿರೂಪದಿಂದ ಅದನ್ನು ಸುರಿಸುವನು. ಅದರಿಂದ ಜನರು ತಮ್ಮ ಆಹಾರಾದಿಗಳನ್ನು ಸಂಪಾದಿಸಿಕೊಳ್ಳುವರು. ಮನುಷ್ಯರಿಗೆ ಅನ್ನವೇ ಪ್ರಾಣ ಎಂದು ಸಕಲ ವೇದಗಳೂ ಪ್ರತಿಪಾದಿಸುತ್ತಿವೆ.

೧೭-೧೮. ಈ ರೀತಿ ಸೂರ್ಯನು ಲೋಕಹಿತಾರ್ಥವಾಗಿ ಕಿರಣಗಳ ಸಹಾಯದಿಂದ ಏಳು ದ್ವೀಪಗಳಿಗೂ ವೃಷ್ಟಿಪ್ರದಾನಮಾಡುತ್ತಿರುವನು. ಅಲ್ಲದೆ ವನಸ್ಪತಿಗಳು, ಬಳ್ಳಿಗಳು, ಪತ್ರ, ಪುಷ್ಪ, ಇವುಗಳನ್ನೆಲ್ಲಾ ಅಭಿವೃದ್ಧಿಗೊಳಿಸಿ, ಆ ಮೂಲಕ ಜನರಿಗೆ ಪ್ರಾಣಪ್ರದನಾಗಿರುವನು.

ಭವಂತಿ ಜಾತಕರ್ಮಾಣಿ ವ್ರತೋಪನಯನಾನಿ ಚ ।
ಗೋದಾನನಿವಹಾಶ್ಚೈವ ತಥಾ ವರ್ಣಸಮೃದ್ಧಯಃ ॥ ೧೯ ॥

ಸತ್ರಾಣಿ ದಾನಾನಿ ತಥಾ ಸಂಯೋಗಾಬೀಜಸಂಚಯಾಃ ।
ಅನ್ನತಃ ಸಂಪ್ರವರ್ತಂತೇ ಯಥಾ ತ್ವಂ ವೇತ್ಸಿ ಭಾರ್ಗವ ॥ ೨೦ ॥

ರಮಣೀಯಾನಿ ಯಾವಂತಿ ವರ್ತಂತೇ ಯಾನಿಕಾನಿ ಚಿತ್ ।
ತಾವಂತ್ಯನ್ನಾತ್ಸಂಭವಂತಿ ವಿದಿತಂ ಕೀರ್ತಯಾಮಿ ತೇ ॥ ೨೧ ॥

ಸರ್ವಂ ಹಿ ವೇತ್ಸಿ ವಿಪ್ರ ತ್ವಂ ಯದೇತತ್ಕೀರ್ತಿತಂ ಮಯಾ ।
ಯಾಚೇ ತ್ವಾಹಂ ಭೃಗುಶ್ರೇಷ್ಠ ಕಿಂ ತ್ವಂ ಸೂರ್ಯಾಯಕುಪ್ಯಸಿ ॥ ೨೨ ॥

ಏವಂ ತದೋಚ್ಯಮಾನೋ ವೈ ಭಾಸ್ಕರೇಣ ಮಹಾತ್ಮನಾ ।
ಜಮದಗ್ನಿರ್ಮಹಾತೇಜಾ ಕೈಂಕರ್ಯೇ ಪ್ರತ್ಯಪದ್ಯತ ॥ ೨೩ ॥

---

೧೯-೨೦. ಹೀಗೆ ಸೂರ್ಯದೇವನು ಆಹಾರವೀಯುತ್ತಿರುವುದರಿಂದಲೇ ಲೋಕದಲ್ಲಿ ಜಾತಕರ್ಮಾದಿ ಸಂಸ್ಕಾರಗಳೂ, ವಿವಾಹೋಪನಯನ, ಗೋದಾನಾದಿ ಮಹಾವ್ರತಗಳೂ ಜರುಗುತ್ತಿರುವುವು. ಮಹಾಮಹಾ ಯಾಗಗಳೂ, ಮಹಾ ದಾನಗಳು, ಇವೆಲ್ಲವೂ ನಡೆಯುವುದು ಈ ಅನ್ನಪ್ರಭಾವದಿಂದಲ್ಲವೆ ? ಇದೆಲ್ಲವೂ ನಿನಗೆ ತಿಳಿಯದೆ !

೨೧-೨೨. ಲೋಕದಲ್ಲಿ ಸುಂದರವಾಗಿರುವ ವಸ್ತುಗಳೆಲ್ಲಾ ಆಹಾರದಿಂದ ಬೆಳೆದವುಗಳೇ ಅಲ್ಲವೆ ! ಇಂತಹ ಆಹಾರದಾತೃವಾದ ಈ ಸೂರ್ಯದೇವನ ವಿಷಯದಲ್ಲಿ ನೀನೇಕೆ ಕೋಪಗೊಂಡಿರುವೆ ? ಎಲ್ಲವನ್ನೂ ತಿಳಿದ ನೀನು ಹೀಗೆ ಮಾಡುವುದು ಯುಕ್ತವೇ ?

೨೩-೨೪. ಹೀಗೆ ಸೂರ್ಯನಿಂದ ಹೇಳಲ್ಪಟ್ಟ ಮಾತುಗಳನ್ನು ಕೇಳಿ ಮಹಾತೇಜಸ್ವಿಯಾದ ಜಮದಗ್ನಿ ಮಹಾಮುನಿಯು ಆ ಮಾತುಗಳೆಲ್ಲಾ ನಿಜವೆಂದು

ತತಸ್ಸಭಗವಾನ್ ದೇವೋ ಮುನಿಮಗ್ನಿಸಮನ್ವಿತಂ ।
ಸೂರ್ಯೋ ಮಧುರಯಾ ವಾಚಾ ತಮಿದಂ ಪುನರಬ್ರವೀತ್ ॥ ೨೪ ॥

ಚಲಂ ನಿಮಿತ್ತಂ ವಿಪ್ರರ್ಷೇ ಸದಾ ಸೂರ್ಯಸ್ಯ ಗಚ್ಛತಃ ।
ಕಥಂ ಚಲಂ ವೇತ್ಸ್ಯಸಿ ತ್ವಂ ಸದಾಯಾಂತಂ ದಿವಾಕರಂ ॥ ೨೫ ॥

ಏವಂ ಬ್ರುವಾಣಂ ದೇವಂ ತಂ ಸೂರ್ಯಂಬ್ರಾಹ್ಮಣರೂಪಿಣಂ ।
ವಿಜ್ಞಾಯ ಜ್ಞಾನಯುಕ್ತಾತ್ಮಾ ಇದಂ ವಚನಮಬ್ರವೀತ್ ॥ ೨೬ ॥

ಸ್ಥಿರಂ ರವಿಂ ಚಲಂ ವಾಪಿ ಜಾನಾಮಿ ಜ್ಞಾನಚಕ್ಷುಷಾ ।
ಅವಶ್ಯಂ ವಿನಯಾಧ್ಯಾಯಂ ಕಾರ್ಯಮದ್ಯ ತವಾನಘ ॥ ೨೭ ॥

---

ತಿಳಿದು ತಾನು ಸೂರ್ಯಭಕ್ತನೆಂದೂ ತಾನುಮಾಡಿದ ಕೆಲಸವು ಅಪರಾಧವಾಯಿತೆಂದೂ ಒಪ್ಪಿಕೊಂಡನು. ಅನಂತರ ಅಗ್ನಿಸಮೇತನಾಗಿ ಕುಳಿತಿದ್ದ ಜಮದಗ್ನಿಯನ್ನು ನೋಡಿ ಮತ್ತೆ ಸೂರ್ಯದೇವನು ಹೀಗೆ ಹೇಳಲಾರಂಭಿಸಿದನು.

೨೫-೨೬. "ಎಲೈ ಮಹರ್ಷಿಯೇ, ಸೂರ್ಯನು ಸರ್ವದಾ ಚಂಚಲಸ್ವಭಾವದವನೆಂದೂ ನೀನು ತಿಳಿದಿರಬಹುದು. ಅದು ತಪ್ಪು. ನಿಮಿತ್ತಮಾತ್ರಕ್ಕೆ ಸೂರ್ಯನು ಚಲಿಸುವಂತೆ ಕಂಡರೂ ಅವನು ಸರ್ವದಾ ಓಡಾಡುವವನಲ್ಲ. ಎಲ್ಲಿ ನೆಲಸಿದರೂ ಅಲ್ಲಿ ಗೋಚರಿಸುವ ಮಹಾ ಮಹಿಮೆಯುಳ್ಳವನು ಸೂರ್ಯದೇವನು" ಎಂದು ಹೇಳುತ್ತಿರುವ ಬ್ರಾಹ್ಮಣನನ್ನು ನೋಡಿ ಜಮದಗ್ನಿಮಹರ್ಷಿಯು ಈತನೇ ಬ್ರಾಹ್ಮಣವೇಷಧಾರಿಯಾದ ಸೂರ್ಯನು ಎಂದರಿತು ಹೀಗೆ ಮಾತನಾಡಿದನು.

೨೭-೨೮. "ಸ್ವಾಮಿಯೇ, ಸೂರ್ಯದೇವನು ಚಲಿಸುವವನೇ ಆಗಲಿ, ಅಚಲವಸ್ತುವೇ ಆಗಲಿ, ಅವನ ಸ್ವರೂಪವನ್ನು ನಾನು ನನ್ನ ಜ್ಞಾನಚಕ್ಷುಸ್ಸಿನಿಂದ ಸುಲಭವಾಗಿ ತಿಳಿಯುವೆನು. ಅಪರಾಹ್ಣಕಾಲದಲ್ಲಿ ನಿಮಿಷಮಾತ್ರ ನೀನು ಸ್ಥಿರವಾಗಿ

ಅಪರಾಹ್ಣೇ ನಿಮೇಷಂ ಹಿ ತಿಷ್ಠಸಿ ತ್ವಂ ದಿವಾಕರ ।
ತತ್ರ ವೇತ್ಸ್ಯಾಮಿ ಸೂರ್ಯಂ ತ್ವಾಂ ನಾಸ್ತಿ ಮೇತ್ರ ವಿಚಾರಣಾ ॥ ೨೮ ॥

॥ ಶ್ರೀ ಸೂರ್ಯ ಉವಾಚ ॥

ಅಸಂಶಯಂ ಮಾಂ ವಿಪ್ರರ್ಷೇ ವೇತ್ಸ್ಯಸೇ ಧನ್ವಿನಾಂ ವರ ।
ಉಪಕಾರಿಣಂ ಹಿ ಮಾಂ ವಿದ್ಧಿ ಭವತೋ ಗೋಚರಂ ಗತಂ ॥ ೨೯ ॥

ತ್ವಂ ಸರ್ವಲೋಕರಕ್ಷಾಯೈ ಪ್ರವೃತ್ತಂ ಮಾಂ ದುರಾಸದಂ ।
ದೀಪ್ತಂ ರಶ್ಮಿಸಹಸ್ರೇಣ ಜ್ಞಾತವಾನ್ ಜ್ಞಾನಚಕ್ಷುಷಾ ॥ ೩೦ ॥

ತತಃ ಪ್ರಹಸ್ಯ ಭಗವಾನ್ ಜಮದಗ್ನಿರುವಾಚ ಹ ।
ಭಾಸ್ಕರಂ ಪ್ರೀತಯಾ ದೃಷ್ಟ್ಯಾ ದೃಷ್ಟ್ವಾ ಲೋಕಪ್ರತಾಪನಂ ॥ ೩೧ ॥

ತಾಪಸ್ಯಾಸ್ಯಾಪಗಮನೇ ಸಮಾಧಿಂ ತು ವಿಚಿಂತಯ ।
ಯಥಾ ಸುಖೇನ ಗಮನಂ ಪರಮುಕ್ಷಯ್ಯಮೇವ ಚ ॥ ೩೨ ॥

---

ರುವನೆಂದೂ ನಾನು ತಿಳಿದಿರುವೆನು. ಒಟ್ಟಿನಲ್ಲಿ ಮಹಾಮಹಿಮನೇ ! ನಿನ್ನಲ್ಲಿ ನಾನು ವಿನಯಪೂರಿತನಾಗಿರಬೇಕಾದುದನ್ನು ಅನುಗ್ರಹಿಸು.

೨೯-೩೦. ಎಲೈ ಮಹರ್ಷಿಯೇ, ನೀನು ಧನುರ್ಧಾರಿಗಳಲ್ಲಿ ಮಹಾಶ್ರೇಷ್ಠನು ನಾನೂ ಸಹ ಲೋಕೋಪಕಾರಾರ್ಥವಾಗಿಯೇ ನಿನಗೆ ಈಗ ದರ್ಶನಕೊಟ್ಟಿರುವೆನು. ಈಗ ನನ್ನನ್ನೂ ಜ್ಞಾನದೃಷ್ಟಿಯಿಂದ ನೀನು ತಿಳಿದಿರುವುದು ಲೋಕರಕ್ಷಣೆಗಾಗಿಯೇ ಎಂದು ಅರಿಯಬೇಕು.

೩೧-೩೨. ಎಂದು ಹೇಳಿದ ದೇವದೇವನ ವಾಣಿಯನ್ನು ಕೇಳಿ ಜಮದಗ್ನಿಯು ಲೋಕತಾಪಕರನಾದ, ಸೂರ್ಯನನ್ನು ನೋಡಿ, ಪ್ರೀತಿಯಿಂದಲೂ, ಭಕ್ತಿಯಿಂದಲೂ ಧ್ಯಾನಿಸಿ, ಮತ್ತೆ, " ಮಹಾತ್ಮನೇ, ನಿನ್ನ ತಾಪವನ್ನು ಪರಿಹರಿಸಿಕೊಳ್ಳುವ ಒಂದು ದಿವ್ಯ ಶಕ್ತಿಯನ್ನು ಅನುಗ್ರಹಿಸು ಮತ್ತು ನಿನ್ನ ಕಿರಣಜಾಲದಲ್ಲಿಯೂ ಸುಖವಾಗಿ ನಡೆಯುವ ಸಾಧನವೊಂದನ್ನು ವಿವರಿಸಿ ಹೇಳಬೇಕು " ಎಂದು ಕೇಳಿಕೊಂಡನು.

ಛತ್ರಂ ದ್ವಿಜಾತಯೇ ದದ್ಯಾತ್ಸಪ್ರೇತ್ಯ ತು ಸುಖೀ ಭವೇತ್ ।
ನ ಚ ತೇಽಸ್ತಿ ಮಮುಕ್ರೋಧೋ ನಾಭಿಕಾರ್ಯಃ ಸುರೋತ್ತಮ ॥ ೩೩ ॥

ಮದ್ಗೋಚರಗತಶ್ಚಾಪಿ ಸರ್ವಲೋಕಹಿತಪ್ರದಃ ।
ತತಃ ಸೂರ್ಯೋ ದದೌ ತಸ್ಮೈ ಛತ್ರೋಪಾನಹಮಾಶು ವೈ ॥ ೩೪ ॥

ಉವಾಚ ಸ ಮುನಿಶ್ರೇಷ್ಠಮಿದಂ ವಚನಮುತ್ತಮಂ ।
ಮಹರ್ಷೇ ಶಿರಸಸ್ತ್ರಾಣಂ ಛತ್ರಂ ಮದ್ರಶ್ಮಿವಾರಣಂ ॥ ೩೫ ॥

ಪ್ರತಿಗೃಹ್ಣೀಹಿ ಪದ್ಭ್ಯಾಂತು ಧಾರಣಾರ್ಥಂ ಚ ಪಾದುಕೇ ।
ಅದ್ಯ ಪ್ರಭೃತಿ ಚೈವಾಸ್ಮಿಂಲ್ಲೋಕೇ ಸಂಪ್ರಚರಿಷ್ಯತಿ ॥ ೩೬ ॥

ಪುಣ್ಯಕೇಷ್ವಪಿ ಸರ್ಗೇಷು ಪರಮಕ್ಷಯ್ಯಮೇವ ಚ ।
ಛತ್ರಂ ದ್ವಿಜಾಯ ಯೋ ದದ್ಯಾತ್ಸಪ್ರೇತ್ಯ ಸುಖಮೇಧತೇ ॥ ೩೭ ॥

---

೩೩–೩೪. ಆಗ ಸೂರ್ಯದೇವನು "ಅಯ್ಯಾ ಋಷಿವರ್ಯನೇ, ನನ್ನ ಕಿರಣ ಬಾಧೆಯನ್ನು ಹೋಗಲಾಡಿಸಿಕೊಳ್ಳಲು ಬ್ರಾಹ್ಮಣರಿಗೆ ಛತ್ರಿ ದಾನಮಾಡಬೇಕು. ಇದರಿಂದ ನನಗೆ ತೃಪ್ತಿಯುಂಟಾಗುವುದು. ಆ ಮೂಲಕ ಅವರಿಗೆ ನನ್ನ ಕಿರಣಗಳ ಬಾಧೆಯು ತಾಗಲಾರದು" ಎಂದು ಹೇಳಿ, ಸೂರ್ಯನಾರಾಯಣನು ಸರ್ವಲೋಕಹಿತ ಪ್ರದನಾದ್ದರಿಂದ, ಅವನಿಗೆ ಛತ್ರಿ, ಪಾದರಕ್ಷೆ ಇವುಗಳನ್ನು ಅನುಗ್ರಹಿಸಿದನು.

೩೫-೩೬. ಹೀಗೆ ಕೊಟ್ಟು ಸೂರ್ಯದೇವನು ಮತ್ತೆ ಮುನಿಶ್ರೇಷ್ಠನಾದ ಜಮದಗ್ನಿಗೆ ಈ ರೀತಿಯಾಗಿ ಹೇಳಿದನು. ಮಹರ್ಷಿಯೇ ಈಗ ಕೊಟ್ಟಿರುವ ಛತ್ರಿಯು ನಿನ್ನ ಶಿರಸ್ಸನ್ನೂ ರಕ್ಷಿಸುತ್ತಾ. ಮತ್ತು ನನ್ನ ಕಿರಣಗಳ ಉರಿಯನ್ನು ತಪ್ಪಿಸ ತಕ್ಕದ್ದು. ಈ ಪಾದುಕೆಯನ್ನು ಕಾಲಿನಲ್ಲಿ ಧರಿಸಿಕೋ. ಇದರಿಂದ ನೀನು ಸರ್ವಲೋಕ ಸಂಚಾರದಿಂದಲೂ ಆಯಾಸಗೊಳ್ಳುವುದಿಲ್ಲ.

೩೭-೩೯. ಪುಣ್ಯಕ್ಷೇತ್ರಗಳಲ್ಲಿ ಯಾರು ಛತ್ರಿಯ ದಾನವನ್ನು ದ್ವಿಜರಿಗೆ ದಾನಮಾಡುವರೋ, ಅವರು ನಾಶರಹಿತನಾದ ಸುಖವನ್ನು ಹೊಂದುವರು. ಮತ್ತು

ಶಕ್ರಲೋಕೇ ಚ ವಸತಿಹ್ಯಪ್ಸರೋಭಿಃ ಸಮಾವೃತಃ ॥ ೩೮ ॥

ಉಪಾನಹೌ ಚ ಯೋ ದದ್ಯಾತ್ ಶ್ಲಕ್ಷ್ಣೇ ಸ್ನೇಹಸಮನ್ವಿತೇ ।
ಗೋಲೋಕೇ ಸ ಮುದಾ ಯುಕ್ತೋ ವಸತಿ ಪ್ರೇತ್ಯ ಮಾನವಃ ॥ ೩೯ ॥

ಏವಮುಕ್ತ್ವಾ ತು ಭಗವಾನ್ ಭಾಸ್ಕರೋ ಲೋಕಪಾವನಃ ।
ಶಾಂತಯಿತ್ವಾ ದ್ವಿಜಶ್ರೇಷ್ಠಂ ತತ್ರೈವಾಂತರಧೀಯತ ॥ ೪೦ ॥

ಮಯಾಪಿ ತೇ ಯದುಶ್ರೇಷ್ಠ ಕಥಿತಂ ಪುಣ್ಯವರ್ಧನಂ ।
ಛತ್ರಪಾದುಕಯೋರ್ದಾನಂ ಯಥಾ ಸೂರ್ಯೇಣ ಭಾಷಿತಂ ॥ ೪೧ ॥

ಇತಿ ಶ್ರೀ ಸಾಂಬಪುರಾಣೇ ಪಂಚಚತ್ವಾರಿಂಶೋಽಧ್ಯಾಯಃ.

---

ಇಂದ್ರಲೋಕವನ್ನು ಸೇರಿ, ಅಪ್ಸರಸ್ತ್ರೀಯರಿಂದ ಪರಿವೃತರಾಗಿ ಸುಖಪಡುವರು. ಅಲ್ಲದೆ ಮೃದುವಾದ ಮತ್ತು ಎಣ್ಣೆಯಿಂದ ನೆನೆದ ಪಾದರಕ್ಷೆಯನ್ನು ದಾನಮಾಡುವವರು ಗೋಲೋಕವನ್ನು ಹೊಂದಿ ಅಲ್ಲಿ ಸುಖಸಂತೋಷಾದಿಗಳನ್ನು ಪಡೆಯುವರು.

೪೦–೪೧. ಎಂದು ಹೇಳಿ ಸೂರ್ಯದೇವನು ಜಮದಗ್ನಿಯನ್ನು ಸಮಾಧಾನಗೊಳಿಸಿ ಅಂತರ್ಧಾನನಾದನು. ಎಲೈ ಯಾದವನಾದ ಸಾಂಬನೇ, ಸೂರ್ಯನು ಛತ್ರಿಪಾದುಕಾದಾನಗಳ ವಿಷಯವಾಗಿ ತಿಳಿಸಿದುದನ್ನು ನಾನು ಈಗ ನಿನಗೆ ಉಪದೇಶಿಸಿರುವೆನು. ಇದು ಅತ್ಯಂತ ಪವಿತ್ರವೂ ಪುಣ್ಯವರ್ಧಕವೂ ಆದುದೆಂಬುದನ್ನು ತಿಳಿ ಎಂದು ನಾರದಮಹರ್ಷಿಯು ಹೇಳಿದನು.

ಇಲ್ಲಿಗೆ ಶ್ರೀ ಸಾಂಬಪುರಾಣದ ನಲವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಷಟ್ಚತ್ವಾರಿಂಶೋಽಧ್ಯಾಯಃ

---

॥ ಸಾಂಬ ಉವಾಚ ॥

ಭಗವನ್ ಶ್ರೋತುಮಿಚ್ಛಾಮಿ ಸಪ್ತಮ್ಯಾಸ್ತು ವಿಧಿಕ್ರಮಂ ।
ಸರ್ವಾಸಾಮಾನುಪೂರ್ವ್ಯೇಣ ಕಥಯಸ್ವ ಮಹಾಮುನೇ ॥ ೧ ॥

॥ ನಾರದ ಉವಾಚ ॥

ಶೃಣು ಸಾಂಬ ಮಹಾಬಾಹೋ ಸಪ್ತಮೀನಾಂ ವಿಧಿಂ ಪರಂ ।
ತಮಹಂ ಕೀರ್ತಯಿಷ್ಯಾಮಿ ಭಕ್ತ್ಯಾ ಯತ್ಪರಿಪೃಚ್ಛತೇ ॥ ೨ ॥

ತುಭ್ಯಂ ಯದುಕುಲಶ್ರೇಷ್ಠ ಯಥಾಖ್ಯಾತಂ ವಿವಸ್ವತಾ ।
ಶುಕ್ಲಪಕ್ಷೇ ರವಿದಿನೇ ಪ್ರವೃತ್ತೇ ಚೋತ್ತರಾಯಣೇ ॥ ೩ ॥

---

## ನಲವತ್ತಾರನೆಯ ಅಧ್ಯಾಯ.

೧-೨. ಸಾಂಬನು ನಾರದರನ್ನು ಕುರಿತು "ಮಹಾಮುನಿಯೇ, ಭಾನುಸಪ್ತಮೀವ್ರತವಿಧಿಯನ್ನು ಸಂಪೂರ್ಣವಾಗಿ ಕೇಳಬಯಸುವೆನು. ದಯೆಯಿಂದ ವಿವರಿಸಬೇಕು" ಎಂದು ಪ್ರಾರ್ಥಿಸಲು, ನಾರದಮಹರ್ಷಿಯು "ಸಾಂಬನೇ ನೀನು ಭಕ್ತಿಯಿಂದ ಪ್ರಶ್ನಿಸಿದ ಭಾನುಸಪ್ತಮೀ ವ್ರತವಿಧಾನವನ್ನು ವಿವರವಾಗಿಹೇಳುವೆನು ಕೇಳು" ಎಂದು ಮುಂದುವರಿಸಿದನು.

೩-೪. ಸಾಂಬನೇ, ಹಿಂದೆ ಈ ವ್ರತದ ವಿಷಯವಾಗಿ ಸೂರ್ಯನು ಅಪ್ಪಣೆ ಕೊಡಿಸಿದುದನ್ನೇ ನಿನಗೆ ಈಗ ವಿವರಿಸಲಿರುವೆನು. ಉತ್ತರಾಯಣದ ಶುಕ್ಲಪಕ್ಷ

**ಪುನ್ನಾಮಧೇಯನಕ್ಷತ್ರೇ ಗೃಹ್ಣೀಯಾತ್ಸಪ್ತಮೀವ್ರತಂ ।**
**ಋಷಿಭಿರ್ಜ್ಞಾನಸಂಪನ್ನೈಃ ಸರ್ವಕಾಮಫಲಪ್ರದಾ ॥ ೪ ॥**

**ಸಪ್ತಭ್ಯಃ ಸಪ್ತಕಥಿತಾಸ್ತಾಸಾಂ ನಾಮಾನಿ ಮೇ ಶೃಣು ।**
**ಅರ್ಕಸಂಪುಟಿಕೈರೇಕಾ ದ್ವಿತೀಯಾ ಮರೀಚೈಸ್ತಥಾ ॥ ೫ ॥**

**ತೃತೀಯಾನಿಂಬಪತ್ರೈಸ್ತು ಚತುರ್ಥೀ ಫಲಸಪ್ತಮೀ ।**
**ಪಂಚಮ್ಯನೋದಿನೀ ಸ್ಯಾತ್ತು ಷಷ್ಠೀ ವಿಜಯಸಪ್ತಮೀ ।**
**ಸಪ್ತಮೀ ಕಾಮಿಕಾ ನಾಮ ವಿಧಿಮಾಸಾನ್ನಿಬೋಧ ಮೇ ॥ ೬ ॥**

**ಸರ್ವಾಸು ಬ್ರಹ್ಮಚಾರೀ ಸ್ಯಾಚ್ಛೌಚಯುಕ್ತೋ ಜಿತೇಂದ್ರಿಯಃ ।**
**ಸೂರ್ಯಾರ್ಚನಪರೋ ದಾಂತೋ ಜಪಹೋಮಸಮನ್ವಿತಃ ॥ ೭ ॥**

---

ಸಪ್ತಮೀ ತಿಥಿಯು ಭಾನುವಾರದೊಡನೆ ಕೂಡಿ ಬಂದಾಗ ಪುರುಷ ದೇವತಾಕವಾದ ನಕ್ಷತ್ರವಿದ್ದರೆ ಆ ದಿನ ಈ ಸಪ್ತಮೀವ್ರತವನ್ನು ಆರಂಭಿಸಬೇಕು. ಜ್ಞಾನಿಗಳಾದ ಮಹರ್ಷಿಗಳು ಈ ವ್ರತವು ಸರ್ವಕಾಮಫಲಪ್ರದವಾದದ್ದೆಂದು ನಂಬಿರುವರು.

೫-೬. ಸಪ್ತಮೀ ವ್ರತವನ್ನು ಏಳು ಸಪ್ತಮೀ ತಿಥಿಗಳಲ್ಲಿ ಆಚರಿಸಬೇಕು. ಅದರಲ್ಲಿ ಮೊದಲನೆಯ ಸಪ್ತಮಿಗೆ ಅರ್ಕಸಂಪುಟಿಕಾ, ಎರಡನೆಯ ಸಪ್ತಮಿಗೆ ಮರೀಚ ಸಪ್ತಮೀ, ಮೂರನೆಯದು ನಿಂಬಪತ್ರಸಪ್ತಮೀ, ನಾಲ್ಕನೆಯದು ಫಲಸಪ್ತಮೀ, ಐದನೆಯದೇ ಅನೋದಿನೀ ಸಪ್ತಮೀ, ಆರನೆಯದು ವಿಜಯಸಪ್ತಮೀ, ಏಳನೆಯದೇ ಕಾಮಿಕಾಸಪ್ತಮೀ ಹೀಗೆ ಏಳು ಸಪ್ತಮೀತಿಥಿಗಳಿಗೂ ಏಳು ಪ್ರತ್ಯೇಕವಾದ ಹೆಸರುಗಳಿವೆ. ಇದರ ನಿಯಮಗಳನ್ನು ಈಗ ಕೇಳುವವನಾಗು

೭-೮. ಈ ಏಳು ಸಪ್ತಮೀ ವ್ರತಗಳನ್ನು ಅನುಷ್ಠಿಸುವಾಗಲೂ, ವ್ರತಿಯು ಶುಚಿರ್ಭೂತನಾಗಿ, ಜಿತೇಂದ್ರಿಯನಾಗಿ, ಸೂರ್ಯಾರ್ಚನೆಯಲ್ಲಿಯೇ ನೆಟ್ಟಮನಸ್ಸುಳ್ಳವನಾಗಿ, ಜಪ, ಹೋಮ ಇವುಗಳನ್ನು ನೆರವೇರಿಸುತ್ತಾ ಸ್ಥಿರಮನಸ್ಕನಾಗಿರಬೇಕು. ಸಪ್ತಮೀ ವ್ರತಮಾಡುವವನು ಪಂಚಮಿಯ ದಿನವೇ ನಿಯಮಬದ್ಧನಾಗಿರಬೇಕು.

ಪಂಚಮ್ಯಾಮೇವ ಪುರುಷಃ ಕುರ್ಯಾನ್ನಿಯರ್ಮಸಮಾತ್ಮನಃ ।
ಷಷ್ಠ್ಯಾಂ ನ ಮೈಥುನಂ ಗಚ್ಛೇನ್ಮಧುಮಾಂಸಾನಿ ವರ್ಜಯೇತ್ ॥ ೮ ॥

ಅರ್ಕಸಂಪುಟಮೇಕೈಕಂ ಪ್ರಥಮಾಯಾಂ ವಿಧಾನವಿತ್ ।
ಅನ್ಯದ್ದತ್ತಮಭುಂಜಾನಃ ಸಪ್ತಮ್ಯಾಂ ಭಕ್ಷಯೇನ್ನರಃ ॥ ೯ ॥

ಏಕೈಕವೃದ್ಧಾನಿ ಪುನರ್ಮರೀಚಾನಿ ಚ ಭಕ್ಷಯೇತ್ ।
ತಥೈವ ನಿಂಬಪತ್ರಾಣಿ ಪರಮಂ ವ್ರತಮಾಸ್ಥಿತಃ ॥ ೧೦ ॥

ಫಲಾಖ್ಯಾಯಾಂ ಫಲೇನೈವ ಅನೇನಾತ್ರ ವಿಧೀಯತೇ ।
ಅನೋದಿನ್ಯಾಮೋದನೇನ ರಹಿತಮುಪ್ಯಾತ್ರಾಶ್ನೀಯಾತ್ ॥ ೧೧ ॥

ಅಹೋರಾತ್ರಂ ವಾಯುಭಕ್ಷಃ ಕುರ್ಯಾದ್ವಿಜಯಸಪ್ತಮೀಂ ।
ಅಥೈಕೈಕಾಂ ಸಪ್ತಮೀಂ ತು ಪ್ರತಿಪಕ್ಷೇ ವಿಚಕ್ಷಣಃ ॥ ೧೨ ॥

---

ಷಷ್ಠಿಯದಿನ ಸ್ತ್ರೀಸಂಭೋಗವನ್ನಾಗಲಿ, ಮಧುಮಾಂಸಾದಿಗಳ ಭಕ್ಷಣವನ್ನಾಗಲಿ ಮಾಡಬಾರದು.

೯-೧೦. ಮೊದಲನೆಯ ಸಪ್ತಮಿಯಲ್ಲಿ ಅರ್ಕಸಂಪುಟ (ಇದರ ವಿವರಣೆ ಮುಂದೆಬರುವುದು) ವೊಂದನ್ನು ಮಾತ್ರ ವಿಧಿವತ್ತಾಗಿ ಭಕ್ಷಣಮಾಡಿ, ಮತ್ತಾವುದನ್ನೂ ತಿನ್ನದೆ ನಿಯಮದಿಂದ ಎರಡನೆಯದಾದ ಮರೀಚಸಪ್ತಮಿಯಲ್ಲಿ ಎರಡು ಮೆಣಸನ್ನು ತಿನ್ನಬೇಕು. ಮೂರನೆಯ ಸಪ್ತಮಿಯಲ್ಲಿ ಬೇವಿನ ಎಲೆಗಳನ್ನು ತಿಂದು ನಿಯಮವಾಗಿರಬೇಕು.

೧೧-೧೨. ಫಲಸಪ್ತಮಿಯಲ್ಲಿ ಕೇವಲ ಫಲವನ್ನೇ ಭಕ್ಷಿಸಬೇಕು. ಆದರೆ ಆ ಫಲಗಳು ಬೇಯಿಸಿದವುಗಳಾಗಿರಬಾರದು. ಅನೋದಿನಿ ಸಪ್ತಮಿಯಲ್ಲಿ ಯಾವ ಆಹಾರವನ್ನೂ ತಿಂದಿರಬಾರದು. ವಿಜಯಸಪ್ತಮಿಯಲ್ಲಿ ಅನಿಲಾಹಾರದಿಂದಿರಬೇಕು. ಹೀಗೆ ಏಳು ಸಪ್ತಮೀವ್ರತಗಳನ್ನು ಪ್ರತಿಪಕ್ಷದ ಸಪ್ತಮೀ ತಿಥಿಗಳಲ್ಲಿ ಆಚರಿಸಬಹುದು.

ಕೃತ್ವಾ ವಿಧಾನಕುಶಲಸ್ತತಃ ಕುರ್ವೀತ ಕಾಮಿಕಾಂ ।
ಆಸಾಂ ಲಿಖಿತ್ವಾ ನಾಮಾನಿ ಪತ್ರಕೇಷು ಪೃಥಕ್ಪೃಥಕ್ ॥ ೧೩ ॥

ತಾನಿ ಪತ್ರಾಣಿ ಸರ್ವಾಣಿ ಪ್ರಕ್ಷಿಪೇನ್ನವಕೇ ಘಟೇ ।
ತದರ್ಥಂ ಯೋ ನ ಜಾನಾತಿ ಬಾಲೋ ವಾನ್ಯೋಽಪಿವಾ ನರಃ ॥ ೧೪ ॥

ಸಪ್ತ್ಯೈವ ಯಾವತ್ಸಂಪ್ರಾಪ್ತಾ ವಿಜ್ಞೇಯಾ ಸಾ ತು ಕಾಮಿಕಾ ।
ಇತ್ಯೇತಾಸ್ಸಪ್ತ ಸಪ್ತಮ್ಯಃ ಸ್ವಯಂ ಪ್ರೋಕ್ತಾ ವಿವಸ್ವತಾ ॥ ೧೬ ॥

ಕುರ್ವೀತ ಯೋ ನರಃ ಸಾಂಬ ಸರ್ವಪಾಪೈಃ ಪ್ರಮುಚ್ಯತೇ ।
ಅರ್ಕಸಂಪುಟಕೈರ್ವಿತ್ತಂ ಮರೀಚೈಃ ಪ್ರಿಯಸಂಗಮಂ ॥ ೧೭ ॥

ನಿಂಬಪತ್ರೈರ್ರೋಗನಾಶಂ ಫಲೈಃ ಪುತ್ರಾನ್ಯಥೇಪ್ಸಿತಂ ।
ಧನಧಾನ್ಯಮನೋದಿನ್ಯಾಂ ವಿಜಾಯೇ ವಿಜಯಂ ತಥಾ ॥ ೧೮ ॥

---

೧೩-೧೪. ಕೊನೆಯದಾಗಿ ಕಾಮಿಕಾಸಪ್ತಮೀ ವ್ರತಮಾಡಬೇಕು. ಅದರಲ್ಲಿ ಈ ಏಳು ಸಪ್ತಮಿಗಳ ಹೆಸರನ್ನೂ ಪ್ರತ್ಯೇಕವಾಗಿ ಪತ್ರಗಳಲ್ಲಿ ಬರೆದು ಅವುಗಳನ್ನು ಒಂದು ಹೊಸಮಡಕೆಯಲ್ಲಿ ಹಾಕಿಟ್ಟು, ಈ ವಿಷಯವನ್ನರಿಯದ ಮನುಷ್ಯನಿಂದಾಗಲೀ, ಹುಡುಗನಿಂದಾಗಲೀ, ಒಂದು ಪತ್ರವನ್ನು ಈಚೆಗೆ ತೆಗಿಸಬೇಕು. ಈ ಕಾರ್ಯವನ್ನು ಪ್ರತಿ ಪಕ್ಷದಲ್ಲಿಯೂ ನಡೆಸಬಹುದು.

೧೬-೧೭. ಏಳನೆಯದಾದ ಸಪ್ತಮಿಯ ವ್ರತವೇ ಕಾಮಿಕಾವ್ರತ. ಹೀಗೆ ಸೂರ್ಯದೇವನು ಏಳು ಸಪ್ತಮಿಯ ವಿಷಯಗಳನ್ನೂ ತಾನೇ ಭಕ್ತರಿಗಾಗಿ ವಿವರಿಸ್ದುವನು. ಹೀಗೆ ಏಳು ಸಪ್ತಮಿಯ ವ್ರತಗಳನ್ನೂ ಭಕ್ತಿಯಿಂದ ನೆರವೇರಿಸುವವನು ಸಕಲ ಪಾಪಗಳಿಂದಲೂ ಪರಿಮುಕ್ತನಾಗುವನು. ಆ ಪತ್ರವನ್ನು ತೆಗೆಸಿದಾಗ ಅರ್ಕಸಂಪುಟಕಸಪ್ತಮಿಯ ಹೆಸರು ಬಂದರೆ ದ್ರವ್ಯಲಾಭವೂ, ಮರೀಚಸಪ್ತಮಿಯ ಹೆಸರುಬಂದಾಗ, ಪ್ರಿಯಜನರ ಸಮಾಗಮವೂ ಫಲವೆಂದು ಅರಿಯಬೇಕು.

೧೮-೨೦. ನಿಂಬಪತ್ರದ ಸಪ್ತಮಿಯ ಹೆಸರಿನಿಂದ ರೋಗನಾಶವಾಗುವುದು. ಫಲಸಪ್ತಮಿಯಿಂದ ಪುತ್ರಪ್ರಾಪ್ತಿಯಾಗುವುದು. ಅನೋದನೀ ಸಪ್ತಮಿಯಿಂದ

ಸರ್ವಾನ್ ಕಾಮಾನ್ ಕಾಮಿಕಾಯಾಂ ಪ್ರಾಪ್ನುಯಾನ್ನಾತ್ರ ಸಂಶಯಃ ।
ನರೋ ವಾ ಯದಿ ವಾ ನಾರೀ ಯಃ ಕುರ್ಯಾತ್ಸಪ್ತಮೀವ್ರತಂ ॥ ೧೯ ॥

ಯೇ ಕರಿಷ್ಯಂತಿ ನಿತರಾಂ ತೇಷಾಂ ಲೋಕೋ ವಿಭಾವಸೋಃ ।
ನ ತೇಷಾಂ ತೇಷು ಲೋಕೇಷು ಕಿಂಚಿದಸ್ತೀಹ ದುರ್ಲಭಂ ॥ ೨೦ ॥

ಯೇ ಭಕ್ತ್ಯಾ ಲೋಕನಾಥಸ್ಯ ವ್ರತಿನಃ ಸಂಯತೇಂದ್ರಿಯಾಃ ।
ತತ್ಫಲಂ ತೇ ಪ್ರಾಪ್ನುವಂತಿ ಕ್ರತುಭಿರ್ಭೂರಿದಕ್ಷಿಣೈಃ ॥ ೨೧ ॥

ವ್ರತೈರೇವಂ ವಿಧೈಸ್ತ್ವನ್ಯೈಸ್ತಪೋಭಿಸ್ತು ಸುದುಷ್ಕರೈಃ ।
ಕರ್ಮಭಿಃ ಶಮನ್ಯೈರ್ವಾಪಿ ದಾನಹೋಮಜಪ್ಯೈರಪಿ ॥ ೨೨ ॥

ಯತ್ಫಲಂ ಸಮವಾಪ್ನೋತಿ ಚರಿತ್ವಾ ಸಪ್ತಮೀವ್ರತಂ ।
ಸೂರ್ಯಲೋಕೇಷು ನಿಯತಂ ವಾಸೋ ನೈವಾತ್ರ ಸಂಶಯಃ ॥ ೨೩ ॥

---

ಧನಧಾನ್ಯವೃದ್ಧಿಯಾಗುವುವು. ಕಾಮಿಕಾಸಪ್ತಮಿಯಿಂದ ಸರ್ವಕಾಮ್ಯಗಳೂ ವೃದಿ ಹೊಂದುವುವು. ಹೀಗೆ ಪುರುಷನಾಗಲೀ, ಸ್ತ್ರೀಯಾಗಲೀ, ಸಪ್ತಮೀ ವ್ರತಾಚರಣೆಯಿಂದ ಸಕಲ ಸಿದ್ಧಿಗಳನ್ನೂ ಪಡೆಯುವರಲ್ಲದೆ, ಸಾಕ್ಷಾತ್ಸೂರ್ಯಲೋಕವನ್ನು ಹೊಂದುವರೆಂಬುದರಲ್ಲಿ ಸಂಶಯವಿಲ್ಲ.

೨೧-೨೩. ಈ ವ್ರತಗಳನ್ನು ಆಚರಿಸುವುದರಿಂದ ಮನುಷ್ಯರು ದುಷ್ಕರವಾದ ತಪಶ್ಚರ್ಯೆಯಿಂದಲೂ, ಅನೇಕ ದಾನದಕ್ಷಿಣೆಯಿಂದಕೂಡಿದ ಯಜ್ಞಾಚರಣೆಗಳಿಂದಲೂ, ದಾನ, ಹೋಮ, ಜಪ ಮುಂತಾದುವುಗಳಿಂದಲೂ, ಯಾವ ಸುಕೃತವು ಲಭಿಸುವುದೋ, ಆ ಫಲವನ್ನೆಲ್ಲಾ ಸುಲಭವಾಗಿ ಪಡೆಯುವರು. ಅಲ್ಲದೆ ಈ ವ್ರತಾಚಾರದಿಂದ ಆಮುಷ್ಮಿಕಫಲವಾಗಿ ಸೂರ್ಯಲೋಕವಾಸವನ್ನು ಸ್ಥಿರವಾಗಿ ಪಡೆಯುವರು. ಇದರಲ್ಲಿ ಯಾವ ಸಂಶಯವೂ ಇಲ್ಲ.

ಬ್ರಹ್ಮೇಂದ್ರರುದ್ರಲೋಕೇಷು ತಸ್ಯಾಪ್ರತಿಹತಾ ಗತಿಃ ।
ನಾಂಧೋ ನ ಕುಷ್ಠೀ ನ ಕ್ಲೀಬೋ ವ್ಯಂಗೋ ನಾಪಿ ಚ ನಿರ್ಧನಃ ॥೨೪॥

ಕುಲೇ ತಸ್ಯ ಭವೇತ್ಕಶ್ಚಿತ್ ಯಶ್ಚರೇತ್ಸಪ್ತಮೀವ್ರತಂ ।
ನಾರೀಪಶ್ವಶ್ವಯಾನಾನಾಂ ವಿವಿಧಾನಾಂ ಚ ನಾಶಸಾಂ ॥ ೨೫ ॥

ಧ್ರುವಂ ಸಭಾಜನಂ ಸಾಂಬ ಯಶ್ಚರೇತ್ಸಪ್ತಮೀವ್ರತಂ ।
ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಧನಮಾಪ್ನುಯಾತ್ ॥ ೨೬ ॥

ಭಾರ್ಯಾರ್ಥೀ ರೂಪಸಂಪನ್ನಾಂ ಲಭೇದ್ಭಾರ್ಯಾಂ ಕುಲೋದ್ಭವಾಂ ।
ಪುತ್ರಾರ್ಥೀ ಶ್ರುತಸಂಪನ್ನಾಂಲ್ಲಭೇತ್ಪುತ್ರಾಂಶ್ಚಿರಾಯುಷಃ ॥ ೨೭ ॥

ಭೋಗಾರ್ಥೀ ಲಭತೇ ಭೋಗಾನ್ ವ್ರತೇನಾನೇನ ಯಾದವ ।
ಮೋಹಾತ್ಪ್ರಮಾದಾಲ್ಲೋಭಾದ್ವಾ ವ್ರತಭಂಗಂ ಸಮಾಚರೇತ್ ॥ ೨೮ ॥

---

೨೪-೨೫. ಅಲ್ಲದೆ ಅವರಿಗೆ, ಬ್ರಹ್ಮ, ಇಂದ್ರ, ರುದ್ರ, ಮುಂತಾದವರ ಲೋಕಗಳಲ್ಲಿ ಅಪ್ರತಿಹತವಾದ ಸಂಚಾರವು ದೊರೆಯುವುದು. ಮತ್ತು ಮುಂದೆ ಅವನ ವಂಶದಲ್ಲಿ ಯಾರೂ, ಕುರುಡರಾಗಿ, ಕುಷ್ಠರೋಗಿಗಳಾಗಿ, ನಪುಂಸಕರಾಗಿ ಅಂಗಹೀನರಾಗಿ, ದರಿದ್ರರಾಗಿ ಜನಿಸಲಾರರು. ಅವರ ವಂಶದವರು, ಸ್ತ್ರೀ ಸಂಪತ್ತು ಆನೆ, ಕುದುರೆ, ಯಾನಾದಿಗಳು ಇವೇ ಮೊದಲಾದ ಸುಖಸಾಧನಗಳನ್ನು ಪಡೆಯುವರು.

೨೬-೨೮. ಅಲ್ಲದೆ ವಿದ್ಯಾರ್ಥಿಯು ಈ ವ್ರತವನ್ನಾಚರಿಸುವುದರಿಂದ ಆತನು ಸಂಪೂರ್ಣವಿದ್ಯೆಯನ್ನು ಹೊಂದುವನು. ಧನಾರ್ಥಿಯು ಧನವನ್ನೂ, ಭಾರ್ಯಾರ್ಥಿಯು ರೂಪವಂತಳೂ, ಕುಲೀನಳೂ ಆದ ಪತ್ನಿಯನ್ನೂ, ಪುತ್ರಾಪೇಕ್ಷೆಯುಳ್ಳವರು ಆಯುಷ್ಮಂತರೂ, ಸುಶೀಲರೂ ಆದ ಮಕ್ಕಳನ್ನೂ, ಭೋಗಾಪೇಕ್ಷೆಯುಳ್ಳವರು ಸಕಲ ಸೌಖ್ಯಗಳನ್ನೂ ಪಡೆಯುವರು. ಆದರೆ ಯಾರು ಈ ವ್ರತ ಮಾಡುತ್ತಿರುವಾಗ ಅಜ್ಞಾನದಿಂದಲೋ, ಲೋಭದಿಂದಲೋ, ವ್ರತಭಂಗವನ್ನು ಹೊಂದುವರೋ ಅವರು ಮುಂದೆ ಹೇಳುವಂತೆ ಪ್ರಾಯಶ್ಚಿತ್ತವನ್ನು ಪಡೆದು ವ್ರತಮಾಡಬಹುದು.

ತ್ರಿರಾತ್ರಂ ನ ತು ಭುಂಜೀತ ಕುರ್ಯಾದ್ವಾ ಕೇಶಮುಂಡನಂ ।
ಪ್ರಾಯಶ್ಚಿತ್ತಮಿದಂ ಕೃತ್ವಾ ಪುನರೇವ ವ್ರತೀ ಭವೇತ್ ॥ ೨೯ ॥

ಸಪ್ತ್ಯೈವ ಯಾವತ್ಸಂಪ್ರಾಪ್ತಾಃ ಸಪ್ತಮ್ಯಃ ಸಪ್ತಸದ್ಗುಣಾಃ ।
ಅಭ್ಯರ್ಚ್ಯ ಸೂರ್ಯಂ ಸಪ್ತಮ್ಯಾಂ ಮಾಲ್ಯಧೂಪಾದಿಭಿರ್ನರಃ ॥ ೩೦ ॥

ಭೋಜಯಿತ್ವಾ ದ್ವಿಜಾನ್ ಭಕ್ತ್ಯಾ ಪ್ರಾಪ್ನುಯಾತ್ಸ್ವರ್ಗಮಕ್ಷಯಂ ।
ಸಪ್ತಮ್ಯಾಂ ವಿಪ್ರಮುಖ್ಯೇಭ್ಯೋ ವಸ್ತು ಯದ್ಯತ್ಪ್ರಯಚ್ಛತಿ ॥ ೩೧ ॥

ತತ್ತದಕ್ಷಯಮಾಪ್ನೋತಿ ಸೂರ್ಯಲೋಕಂ ಸ ಗಚ್ಛತಿ ।
ಇತಿ ತೇ ಕೀರ್ತಿತಃ ಸಾಂಬ ಸಪ್ತಮ್ಯಾವಿಧಿರುತ್ತಮಃ ॥ ೩೨ ॥

ಭೂಯ ಏವಾಭಿಧಾನಸ್ಯ ಶೃಣುಷ್ವೈಕಾಗ್ರಮಾನಸಃ ।
ಯಃ ಕುರ್ಯಾದ್ಭೋಮಯಾಹಾರಃ ಶುಕ್ಲಾ ದ್ವಾದಶಸಪ್ತಮೀಃ ॥ ೩೩ ॥

---

೨೯-೩೦. ವ್ರತಭಂಗವಾದಮೇಲೆ ಆ ವ್ರತಿಯು ಮೂರುದಿನ ಉಪವಾಸ ಮಾಡಿ, ಕ್ಷೌರವನ್ನು ಮಾಡಿಸಿಕೊಂಡರೆ ಅದೇ ಅದಕ್ಕೆ ಪ್ರಾಯಶ್ಚಿತ್ತವೆನಿಸುವುದು ಅನಂತರ ಅತನು ಮತ್ತೆ ವ್ರತಮಾಡಲು ರಂಭಿಸಬಹುದು. ಹಾಗೆ ಮತ್ತೆ ಸಪ್ತಮೀ ತಿಥಿಯಲ್ಲಿ ಸೂರ್ಯದೇವನನ್ನು ಗಂಧಪುಷ್ಪಾದಿಗಳಿಂದ ಅರ್ಚಿಸಿ ಬ್ರಾಹ್ಮಣಭೋಜನ ಮಾಡಿಸುವುದರಿಂದ ಅತನಿಗೆ ಸಕಲ ಸೌಖ್ಯಗಳೂ ಸ್ವರ್ಗಪ್ರಾಪ್ತಿಯೂ ಲಭಿಸುವುವು.

೩೧-೩೨. ಸಪ್ತಮಿಯ ತಿಥಿಯಲ್ಲಿ ಸೂರ್ಯಪ್ರೀತ್ಯರ್ಥವಾಗಿ ಯಾವ ಪದಾರ್ಥ ವನ್ನು ದಾನಮಾಡಿದರೂ ಅದರಿಂದ ಸಂಪೂರ್ಣಫಲವನ್ನು ಪಡೆದು ಸೂರ್ಯಲೋಕ ವನ್ನು ಹೊಂದುವನು. ಸಾಂಬನೇ, ಹೀಗೆ ಮಾಡಬೇಕಾದ ಸಪ್ತಮೀ ವ್ರತವಿಧಾನ ವನ್ನು ನಿನಗೆ ವಿವರಿಸಿರುವೆನು.

೩೩-೩೭. ಮತ್ತೂ ಒಂದು ಸಪ್ತಮೀ ವ್ರತವಿಧಾನವನ್ನು ಹೇಳುವೆನು ಕೇಳು. ಶುಕ್ಲಪಕ್ಷದ ಹನ್ನೆರಡು ಸಪ್ತಮೀ ತಿಥಿಗಳಲ್ಲಿ ಸೂರ್ಯನಾರಾಯಣನನ್ನು ಹೂವು, ಗಂಧ, ಮನೋಹರ ನೈವೇದ್ಯಾದಿಗಳು, ಪಾಯಸ, ಕೃಸರಾನ್ನ, ಮುಂತಾ ದುವುಗಳ ಉಪಹಾರದಿಂದಲೂ, ಸುಗಂಧಮಯವಾದ ಪುಷ್ಪಾಂಜಲಿಗಳಿಂದಲೂ,

ಅಥವಾ ಯಾವಕಾಹಾರಃ ಶೀರ್ಣಪತ್ರಾಶನೋಽಥವಾ ।
ಕ್ಷೀರಾಶೀ ನೈಕಭುಕ್ತೋ ವಾ ಭಿಕ್ಷಾಹಾರೋಽಥವಾ ಪುನಃ ॥ ೩೪ ॥

ಜಲಾಹಾರೋಽಪಿ ವಾ ವಿದ್ವಾನ್ ಪೂಜಯಿತ್ವಾ ದಿವಾಕರಂ ।
ಪುಷ್ಪೋಪಹಾರೈರ್ವಿವಿಧೈರ್ನೈವೇದ್ಯೈಸ್ಸುಮನೋಹರೈಃ ॥ ೩೫ ॥

ನಾನಾಪ್ರಕಾರೈರ್ಗಂಧೈಶ್ಚ ಧೂಪೈರ್ಗುಗ್ಗುಲುಚಂದನೈಃ ।
ಕೃಸರೈಃ ಪಾಯಸಾನ್ನಾದ್ಯೈ ರ್ವಿವಿಧೈಶ್ಚ ವಿಭೂಷಣೈಃ ॥ ೩೬ ॥

ಅರ್ಚಯಿತ್ವಾ ದ್ವಿಜಾನ್ ಶ್ರೇಷ್ಠಾನ್ ಹಿರಣ್ಯಾನ್ನಾದಿಭಿರ್ನರಃ ।
ಸ ಯತ್ಫಲಮವಾಪ್ನೋತಿ ತಚ್ಛೃಣುಷ್ವ ಸಮಾಹಿತಃ ॥ ೩೭ ॥

ಕಾಂಚನೇನ ವಿಮಾನೇನ ಮನೋಮಾರುತರಂಹಸಾ ।
ವೈಡೂರ್ಯಮಣಿರತ್ನೇನ ಕಿಂಕಿಣೀಜಾಲಮಾಲಿನಾ ॥ ೩೮ ॥

---

ಭಕ್ತಿಯಿಂದ ಅರ್ಚಿಸಿ, ಆ ದಿನಗಳಲ್ಲಿ ಗೋಮಯ, ಗಂಜಿ, ಒಣಎಲೆ, ಹಾಲು, ನೀರು, ಅಥವಾ ಭಿಕ್ಷಾನ್ನ, ಮುಂತಾದ ವಸ್ತುಗಳಲ್ಲಿ ಯಾವುದಾದರೊಂದನ್ನು ಏಕಭುಕ್ತನಾಗಿ ತಿಂದು ನಿಯಮದಿಂದಿರಬೇಕು. ಅಲ್ಲದೆ ಯಥಾಶಕ್ತಿಯಿಂದ ದ್ವಿಜಶ್ರೇಷ್ಠರಿಗೆ ಆ ದಿನಗಳಲ್ಲಿ ಹಿರಣ್ಯ, ಅನ್ನ ಮುಂತಾದುವುಗಳನ್ನು ದಾನಮಾಡಿ ಅವರನ್ನು ತೃಪ್ತಿಪಡಿಸಿದ್ದೇ ಆದರೆ, ಅದರಿಂದ ಬರುವ ಪುಣ್ಯಫಲಗಳು ಯಾವುದೆಂಬುದನ್ನು ಕೇಳು.

೩೮-೪೦. ಈ ವ್ರತಾಚರಣೆಯಿಂದ ಆತನಿಗೆ ಮನೋವೇಗ ಮತ್ತು ವಾಯುವೇಗವನ್ನೂ ಮೀರಿಸಿದ ಸುವರ್ಣವಿಮಾನವು ಸೂರ್ಯಲೋಕಗಮನಕ್ಕೆ ಸಿದ್ಧವಾಗುವುದು. ಆ ವಿಮಾನವು ವೈಡೂರ್ಯಾದಿ ಅನೇಕ ಅಮೂಲ್ಯರತ್ನಗಳಿಂದ ಅಲಂಕರಿಸಲ್ಪಟ್ಟಿರುವುದು. ಕುಂಡಲ, ತೋಳುಬಳೆ, ಮುಂತಾದ ಆಭರಣಗಳು ಆತನ ದೇಹವನ್ನು ಅಲಂಕಾರಗೊಳಿಸುವುವು. ವಿಚಿತ್ರ ಮಾಲ್ಯಾಭರಣಗಳಿಂದ ಅಲಂಕೃತರಾದ ಅಪ್ಸರಸ್ತ್ರೀಯರು ಆತನನ್ನು ಓಲೈಸುತ್ತಾ ಸೂರ್ಯಲೋಕವನ್ನು ಹೊಂದಿಸುವರು. ಅಲ್ಲಿನ ಸುಖಾನುಭವಾನಂತರ ಮತ್ತೆ ಭೂಲೋಕದಲ್ಲಿ ದಿವ್ಯವಾದ ವಂಶದಲ್ಲಿ

ಕುಂಡಲಾಂಗದಭೂಷಾಢ್ಯೈರ್ಗಾಯಮಾನೋಽಪ್ಸರೋಗಣೈಃ ।
ವಿಚಿತ್ರಮಾಲಾಭರಣೈಃ ಸ ಯಾತಿ ಸೂರ್ಯಲೋಕತಾಂ ॥ ೩೯ ॥

ತಪಸೋಽಂತೇ ಪುನಸ್ಸಾಂಬ ಕುಲೇ ಮಹತಿ ಜಾಯತೇ ।
ಏವಂ ಯಜೇದ್ವಿವಸ್ವಂತಂ ಪ್ರತಿಮಾಸಂ ಸಮಾಹಿತಃ ॥ ೪೦ ॥

ಯಥಾಕ್ರಮಂ ಪ್ರಯತ್ನೇನ ನಾಮಾನಿ ಪರಿಕೀರ್ತಯೇತ್ ।
ಮಧೌ ಮಾಸೇ ವಿಷ್ಣುರಿತಿ ಮಾಧವೇತ್ವರ್ಯಮೇತಿ ಚ ॥ ೪೧ ॥

ಶುಕ್ರೇ ವಿವಸ್ವಾನಿತಿ ಚ ಶುಚೌ ಮಾಸೇಂಶುಮಾನಿತಿ ।
ಪರ್ಜನ್ಯಃ ಶ್ರಾವಣೇ ಮಾಸಿ ನಭಸ್ಯೇ ವರುಣಸ್ತಥಾ ॥ ೪೨ ॥

ಇಷೇತ್ವಿಂದ್ರ ಇತಿಜ್ಞೇಯ ಊರ್ಜೇಧಾತೇತಿ ವಾ ಪುನಃ ।
ಮಾರ್ಗಶೀರ್ಷೇ ಮಿತ್ರ ಇತಿ ಪೌಷೇ ಪೂಷೇತಿ ಕೀರ್ತ್ಯತೇ ॥ ೪೩ ॥

ಮಾಘಮಾಸೇ ಭಗ ಇತಿ ತ್ವಷ್ಟಾ ಇತ್ಯೇವ ಫಾಲ್ಗುನೇ ।
ಏವಂ ಕ್ರಮೇಣ ತೀಕ್ಷ್ಣಾಂಶುನಾಮಭಿಃ ಪರಿಪೂಜಯೇತ್ ॥ ೪೪ ॥

---

ಜನ್ಮತಾಳುವನು. ಹೀಗೆ ಹನ್ನೆರಡು ಶುದ್ಧ ಸಪ್ತಮೀ ವ್ರತವನ್ನು ಅಂದರೆ ಒಂದು ವರ್ಷ ಈ ವ್ರತವನ್ನು ಆಚರಿಸಿದವರಿಗೆ ಮೇಲೆ ಹೇಳಿದಂತಹ ಭೋಗಗಳು ಒದಗುವುವು.

೪೧-೪೪. ಈ ಹನ್ನೆರಡು ತಿಂಗಳಲ್ಲಿಯೂ ಸೂರ್ಯನಿಗೆ ಪ್ರತ್ಯೇಕ ಪ್ರತ್ಯೇಕಗಳಾದ ಹನ್ನೆರಡು ನಾಮಗಳಿರುವುವು. ಚೈತ್ರಮಾಸದಲ್ಲಿ ವಿಷ್ಣು, ವೈಶಾಖದಲ್ಲಿ ಅರ್ಯಮಾ, ಜ್ಯೇಷ್ಠದಲ್ಲಿ ವಿವಸ್ವಾನ್, ಆಷಾಢಮಾಸದಲ್ಲಿ ಅಂಶುಮಾನ್, ಶ್ರಾವಣದಲ್ಲಿ ಪರ್ಜನ್ಯ, ಭಾದ್ರಪದದಲ್ಲಿ ವರುಣ, ಆಶ್ವಯುಜದಲ್ಲಿ ಇಂದ್ರ, ಕಾರ್ತಿಕ ಮಾಸದಲ್ಲಿ ಧಾತೃ, ಮಾರ್ಗಶೀರ್ಷದಲ್ಲಿ ಮಿತ್ರ, ಪುಷ್ಯದಲ್ಲಿ ಪೂಷಾ, ಮಾಘಮಾಸದಲ್ಲಿ ಭಗ, ಫಾಲ್ಗುನದಲ್ಲಿ ತ್ವಷ್ಟೃ, ಹೀಗೆ ಪ್ರತಿತಿಂಗಳಲ್ಲಿಯೂ ಸೂರ್ಯದೇವನಿಗೆ ಬೇರೆ ಬೇರೆ ಹೆಸರುಗಳಿರುವುವು.

ಪುಷ್ಪಾರ್ಚನವಿಧಾನೇನ ಸಪ್ತಮ್ಯಾಂ ಸುಸಮಾಹಿತಃ ।
ನೈತದ್ದೇಯಮಶಿಷ್ಯಾಯ ನಾಭಕ್ತಾಯ ಚ ಭಾಸ್ವತಃ ॥ ೪೫ ॥

ನ ಚ ಪಾಪಕೃತೇ ಸಾಂಬ ದೇಯಂ ನೈವಾಭ್ಯಸೂಯಕೇ ।
ಪಠೇದ್ಯಶ್ಚಾಪಿ ನಿಯತೋ ವಿಧಿಮೇತಂ ನರಃ ಸದಾ ॥ ೪೬ ॥

ಇಹ ಲೋಕೇ ಸುಖಂ ಪ್ರಾಪ್ಯ ಸೂರ್ಯಲೋಕೇ ಮಹೀಯತೇ ॥ ೪೭ ॥

ಇತಿ ಶ್ರೀ ಸಾಂಬಪುರಾಣೇ ಸಪ್ತಮೀಕಲ್ಪೇ
ಷಟ್‌ಚತ್ವಾರಿಂಶೋಽಧ್ಯಾಯಃ.

---

೪೫-೪೭. ಈ ಹೆಸರುಗಳಿಂದಲೇ ಪ್ರತಿ ಸಪ್ತಮಿಯೂ ಸೂರ್ಯನನ್ನು ಪುಷ್ಪಾರ್ಚನಾದಿಗಳಿಂದ ಪೂಜಿಸಬೇಕು. ಈ ರಹಸ್ಯವನ್ನು ಸೂರ್ಯಭಕ್ತರಲ್ಲದ, ಶಿಷ್ಯವೃತ್ತಿ ಮಾಡದ ಮನುಷ್ಯರಿಗೆ ಎಂದೂ ಬೋಧಿಸಬಾರದು. ಪಾಪಿಷ್ಠರಿಗೆ, ಅಸೂಯಾಪರರಿಗೆ, ಎಂದಿಗೂ ಇದನ್ನು ತಿಳಿಸಬಾರದು. ಎಲೈ ಸಾಂಬನೇ, ಈ ಅಧ್ಯಾಯವನ್ನು ಭಕ್ತಿಯಿಂದ ಪಠಿಸಿ, ಈ ವಿಧಿಯನ್ನರಿತವರು, ಈ ಲೋಕದಲ್ಲಿಯೂ, ಸೂರ್ಯಲೋಕದಲ್ಲಿಯೂ, ಪ್ರಸಿದ್ಧ ಭೋಗಭಾಗಿಗಳಾಗುವರೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಎಂದು ನಾರದಮಹರ್ಷಿಗಳು ಸಾಂಬನಿಗೆ ಬೋಧಿಸಿದರೆಂಬಲ್ಲಿಗೆ ನಲವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಸಪ್ತಚತ್ವಾರಿಂಶೋಽಧ್ಯಾಯಃ

---

॥ ನಾರದ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಜಪಯಜ್ಞವಿಧಿಕ್ರಮಂ ।
ಯೈರ್ಯತ್ನೈಸ್ಸರ್ವಥಾ ಚೈವ ಕರ್ತವ್ಯಃ ಕಥಯಾಮಿ ತೇ ॥ ೧ ॥

ಸರ್ವೇಷಾಮೇವ ಯಜ್ಞಾನಾಂ ಜಪಯಜ್ಞೋಽವಶಿಷ್ಯತೇ ।
ಕೃತೇನ ವಿಧಿನಾನೇನ ಪ್ರೀತೋ ಭವತಿ ಭಾಸ್ಕರಃ ॥ ೨ ॥

ಯದನ್ಯತ್ಕುರುತೇ ಕರ್ಮ ಯದಿ ವಾ ನ ಕರೋತಿ ಚ ।
ಕೃತೇನ ಜಪಯಜ್ಞೇನ ಪರಾಂ ಸಿದ್ಧಿಮವಾಪ್ನುಯಾತ್ ॥ ೩ ॥

---

## ನಲವತ್ತೇಳನೆಯ ಅಧ್ಯಾಯ.

೧-೨. ಅನಂತರ ನಾರದಮಹರ್ಷಿಯು ಸಾಂಬನನ್ನು ಕುರಿತು, ಸೂರ್ಯ ದೇವತಾಕವಾದ ಮೂಲಮಂತ್ರ ಜಪವಿಧಿಯನ್ನು ವಿವರಿಸಲಾರಂಭಿಸಿ, ಹೀಗೆಂದನು. " ಸಾಂಬನೆ, ಸರ್ವಪ್ರಯತ್ನದಿಂದಲೂ ವಿಧಿವತ್ತಾಗಿ ಸೂರ್ಯಮೂಲಮಂತ್ರವನ್ನು ಜಪಿಸುವುದು ಒಳ್ಳೆಯದು. ಎಲ್ಲಾ ವಿಧವಾದ ಯಜ್ಞಗಳಿಗಿಂತಲೂ ಈ ಜಪ ಯಜ್ಞವು ಅತ್ಯಂತ ಶ್ರೇಷ್ಠವಾದದ್ದು. ವಿಧಿಪೂರ್ವಕವಾದ ಈ ಜಪಯಜ್ಞದಿಂದ ಸೂರ್ಯನು ತೃಪ್ತನಾಗುವನು.

೩-೪. ಉಳಿದ ಕರ್ಮಗಳನ್ನು ಮಾಡಿದರೂ, ಮಾಡದಿದ್ದರೂ, ಮುಂದೆ ಹೇಳುವ ಖಖೋಲ್ಕ ಎಂಬ ಮೂಲಮಂತ್ರವನ್ನು ಜಪಿಸುವುದರಿಂದ ಸಕಲ

ಮಹದ್ಭಿಃ ಪಾತಕೈರ್ಯುಕ್ತಾ ಯೇಚಾನ್ಯೇ ಕಾರ್ಯಕಾರಿಣಃ ।
ಖಖೋಲ್ಕಜಾಪ್ಯಾನ್ಮುಚ್ಯಂತೇ ಸರ್ವೇ ತೈಸ್ತೈಸ್ತು ಪಾತಕೈಃ ॥ ೪ ॥

ಜಪ್ಯಂ ಜಪಂತಃ ಸಂನ್ಯಾಸಂ ಕುರ್ವಂತಿ ಸುಸಮಾಹಿತಾಃ ।
ಅಸುರಾಸ್ತಂ ತು ಹಿಂಸಂತಿ ಚಾನ್ಯಥಾ ದುಷ್ಟಚೇತಸಃ ॥ ೫ ॥

ಪ್ರವಾಳಹೇಮಮುಕ್ತಾಭಿರ್ಮಣಿರುದ್ರಾಕ್ಷಪುಷ್ಕರೈಃ ।
ದರ್ಭಾರಿಷ್ಟಕಜೀವೈಶ್ಚ ಶಂಖೇನ ಚ ರವಿಂ ಯಜೇತ್ ॥ ೬ ॥

ಶಬ್ದಕಾಯಮನೋವೃತ್ತ್ಯಾ ಸ ಚಾಪಿ ತ್ರಿವಿಧಃ ಸ್ಮೃತಃ ।
ಶತಂ ಸಹಸ್ರಮಯುತಂ ತಸ್ಯಾಪಿ ತ್ರಿವಿಧಂ ಫಲಂ ॥ ೭ ॥

---

ಕರ್ಮಗಳ ಫಲವನ್ನೂ, ಪಡೆಯಬಹುದು. ಅನೇಕವಾದ ಮಹಾ ಪಾಪಗಳನ್ನೆಲ್ಲಾ ನಿವಾರಿಸುವ ಶಕ್ತಿಯು ಈ ಮಂತ್ರಜಪಕ್ಕಿರುವುದು.

೫. ಆದರೆ ಈ ಮಂತ್ರಕ್ಕೆ ಜಪವಿಹಿತವಾದ ನ್ಯಾಸಾದಿಗಳನ್ನು, ಕ್ರಮ ವರಿತು ಮಾಡಬೇಕು. ಹಾಗಿಲ್ಲದಿದ್ದರೆ ಈ ಜಪಮಾಡುವವರನ್ನು ದುಷ್ಟಾತ್ಮರಾದ ರಾಕ್ಷಸರು ಬಹುವಾಗಿ ಹಿಂಸಿಸುವರು.

೬. ಹವಳ, ಸುವರ್ಣ, ಮುತ್ತು, ರತ್ನ, ರುದ್ರಾಕ್ಷಿ, ಕಮಲ, ದರ್ಭೆ, ಅರಿಷ್ಟಕ, (ಅಂಟುವಾಳದಕಾಯಿ) ಜೀವ (ಕಮಲದಬೀಜ) ಶಂಖ ಇವುಗಳಿಂದ ಸೂರ್ಯನನ್ನು ಪೂಜಿಸಬೇಕು. ಅಂದರೆ ಜಪಸಂಖ್ಯೆಯನ್ನು ಮೇಲಿನ ವಸ್ತುಗಳಿಂದ ಎಣಿಸಬಹುದು.

೭. ಈ ಜಪವು ಶಾಬ್ದ, ಕಾಯಿಕ, ಮಾನಸಿಕ, ಎಂದು ಮೂರುವಿಧ. ನೂರು, ಸಾವಿರ, ಹತ್ತುಸಾವಿರ ಹೀಗೆ ಜಪಸಂಖ್ಯೆಯೂ ಮೂರು ರೀತಿಯಲ್ಲಿರುವುದು. ಈ ಮೂರು ವಿಧದ ಜಪಕ್ರಮಕ್ಕೂ ಬೇರೆಬೇರೆ ಫಲಗಳುಂಟು.

ಲಕ್ಷಾರ್ಧಂ ಚೈವ ಮಣಿನಾ ರುದ್ರಾಕ್ಷೇಣಾಯುತಂ ಸ್ಮೃತಂ ।
ಪುಷ್ಕರೇಣಾಷ್ಟಸಾಹಸ್ರಂ ದರ್ಭೈಶ್ಚೈವ ತದರ್ಧಕಂ ॥ ೮ ॥

ಜಪೇ ಕೃತೇ ಪ್ರವಾಲೇನ ಫಲಮಾನಂತ್ಯಮುಚ್ಯತೇ ।
ಹೇಮ್ನಾ ಕೋಟಿಗುಣಂ ಪ್ರೋಕ್ತಂ ಲಕ್ಷಂ ಮುಕ್ತಾಫಲೈಃ ಸ್ಮೃತಂ ॥ ೯ ॥

ಅರಿಷ್ಟಾಕ್ಷಾಜ್ಜಪಾತ್ತಸ್ಯ ಫಲಂ ಸಾಹಸ್ರಕಂ ಭವೇತ್ ।
ಶತಾನಿ ಜೀವಕೈಃ ಪಂಚ ಶಂಖೇ ಶತಗುಣಂ ಭವೇತ್ ॥ ೧೦ ॥

ಜಪಂ ಕುರ್ವನ್ಯದಿ ಷ್ಠೀವೇಜ್ಜಲ್ಪೇದುಜ್ಜೃಂಭತೇಽಪಿ ವಾ ।
ಆಚಮೇದ್ಧುನಿ ವಿನ್ಯಸ್ಯ ಸ್ಪೃಶೇದಂಭೋಽಥ ಗೋಮಯೇ ॥ ೧೧ ॥

ಅಕ್ಷಸೂತ್ರಂ ತು ನಿಪತೇದ್ಭೂಮೌ ಚೇತ್ಕುರ್ವತೋ ಜಪಂ ।
ಉದ್ಧಾರಂ ತಸ್ಯ ಕುರ್ವೀತ ಜಾಪಕೋ ಹೃದಯೇನ ತು ॥ ೧೨ ॥

---

೮-೧೦. ಮೇಲೆ ಹೇಳಿದ ತ್ರಿವಿಧ ಜಪಗಳನ್ನು ಮೂರು ವಿಧವಾದ ಸಂಖ್ಯೆಗಳಲ್ಲಿ, ರತ್ನಗಳಿಂದ ಎಣಿಸಿದರೆ ಅರ್ಧಲಕ್ಷ ಜಪದ ಫಲವು ಬರುವುದು. ಹಾಗೆಯೇ ರುದ್ರಾಕ್ಷಿಯಿಂದ ಎಣಿಸಿ ಜಪಿಸಿದರೆ, ಹತ್ತುಸಾವಿರಜಪದಫಲವೂ, ಕಮಲದಿಂದ ಎಂಟುಸಾವಿರ ಜಪಫಲವೂ, ದರ್ಭೆಯಿಂದ ನಾಲ್ಕುಸಾವಿರ ಜಪಫಲವೂ, ಪ್ರವಾಲದಿಂದ ಅನಂತಸಂಖ್ಯೆಯ ಜಪಫಲವೂ, ಸುವರ್ಣದಿಂದ ಕೋಟಿ ಜಪದಫಲವೂ, ಮುತ್ತುಗಳಿಂದ ಲಕ್ಷ ಜಪ ಫಲವೂ, ಅರಿಷ್ಟಾಕ್ಷದಿಂದ (ಅಂಟುವಾಳದ ಕಾಯಿಯಿಂದ) ಸಹಸ್ರ ಜಪದ ಫಲವೂ, ಜೀವಕ (ಕಮಲದ ಬೀಜ) ದಿಂದ ಐನೂರು ಜಪದ ಫಲವೂ, ಶಂಖದಿಂದ ಹತ್ತುಸಾವಿರ ಜಪದ ಫಲವೂ ಲಭಿಸುವುವು.

೧೧-೧೨. ಜಪಮಾಡುವಾಗ ಮಧ್ಯೆ ಸೀನುವುದಾಗಲೀ, ಮತ್ತೊಬ್ಬರೊಡನೆ ಮಾತನಾಡುವುದಾಗಲೀ, ಆಕಳಿಸುವುದಾಗಲೀ ನಡೆದರೆ ಒಡನೆಯೇ ಆಚಮನದಿಂದ ಶುದ್ಧನಾಗಿ ಗೋಮಯೋದಕಸ್ಪರ್ಶದಿಂದ ಪುನಃ ಜಪಾರಂಭ ಮಾಡಬೇಕು. ಜಪಮಾಡುವಾಗ ಜಪಸರವು ಅಕಸ್ಮಾತ್ತಾಗಿ ಜಾರಿ ಕೆಳಕ್ಕೆ ಬಿದ್ದರೆ, ಮಂತ್ರವನ್ನು ಮನಸ್ಸಿನಲ್ಲಿ ಜಪಿಸುತ್ತಲೇ ಅದನ್ನು ಕೈಯಿಂದ ಎತ್ತಿಕೊಳ್ಳಬೇಕು. ಜಪವನ್ನು ನಿಲ್ಲಿಸಬಾರದು.

ದಕ್ಷಿಣಾಂಗುಷ್ಠಮಧ್ಯಾಗ್ರೇ ಅಷ್ಟನೋಕೈಕಮಾದೃತಃ ।
ಪ್ರತ್ಯೇಕಮಾನುಪೂರ್ವ್ಯೇಣ ಕರ್ಷಯನ್ ಜಪಮಾರಭೇತ್ ॥ ೧೩ ॥

ಶತಮಷ್ಟಾಧಿಕಂ ಚೈವ ಚತುಃಪಂಚಾಶದೇವ ಚ ।
ಸಪ್ತವಿಂಶತಿಸಂಖ್ಯಾ ವಾ ಅಕ್ಷಸಂಖ್ಯೋಪದಿಶ್ಯತೇ ॥ ೧೪ ॥

ವಿಷ್ಟರೇ ಚೋಪವಿಷ್ಟಶ್ಚ ಜಪಂ ಕುರ್ಯಾದವೇದನಃ ।
ದೇವಸ್ಯಾಭಿಮುಖೋ ಭೂತ್ವಾ ಸಂಯತೇನಾಂತರಾತ್ಮನಾ ॥ ೧೬ ॥

ಗ್ರಹೋಪರಾಗೇ ಸಂಪ್ರಾಪ್ತೇ ಮೇಘಾಶನಿಸಮುದ್ಭವೇ ।
ದುಃಸ್ವಪ್ನೇ ಸಾಗರೋತ್ತಾರೇ ಸಮಯಾಲಾಪಭೇದನೇ ॥ ೧೭ ॥

ಉತ್ಪಾತಾನಿಷ್ಟಸಂಪ್ರಾಪ್ತೇ ಮಹಾಪಾತಕಭೂಷಿತೇ ।
ಜಪೇನ್ಮಂತ್ರೀ ಚ ಸಾವಿತ್ರ್ಯಃ ಶತಮಷ್ಟಾಧಿಕಂ ಶುಚಿಃ ॥ ೧೮ ॥

---

೧೩-೧೪. ಜಪಸರವನ್ನು ಬಲಗೈಯ ಹೆಬ್ಬೆರಳಿನ ಮಧ್ಯದಲ್ಲಿಟ್ಟುಕೊಂಡು ಅಂಗುಷ್ಠದಿಂದ ಒಂದೊಂದನ್ನೇ ಎಳೆದು ಹಿಡಿದು ಜಪಿಸಬೇಕು. ಜಪಸರದಲ್ಲಿ ೧೦೮, ೫೪, ೨೭, ಈ ರೀತಿ ಇರುವುದು ನ್ಯಾಯವಾದದ್ದು.

೧೬-೧೮. ಜಪಮಾಡುವವನು ಸುಖಮಯವಾದ ಆಸನದಲ್ಲಿ ಕುಳಿತುಕೊಂಡಿರಬೇಕು. ಸೂರ್ಯದೇವನಿಗೆ ಅಭಿಮುಖನಾಗಿ ಸ್ಥಿರವಾದ ಮನಸ್ಸಿನಿಂದ ಜಪಮಾಡುವುದು ಶ್ರೇಯಸ್ಕರ. ಸೂರ್ಯಚಂದ್ರಗ್ರಹಣಕಾಲದಲ್ಲಿ ಮೇಘಾವೃತವಾದ ಮತ್ತು ಸಿಡಿಲಿನ ಹೊಡೆತವು ಬಹಳವಾಗಿರುವ ದುರ್ದಿನಗಳಲ್ಲಿ, ದುಃಸ್ವಪ್ನಗಳುಂಟಾದಾಗ, ಸಮುದ್ರಯಾನಕಾಲದಲ್ಲಿ, ಗುಟ್ಟಾದ ಅಭಿಪ್ರಾಯವನ್ನೂ ಗ್ರಹಿಸುವ ಕಾಲದಲ್ಲಿ, ಇನ್ನಾವುದಾದರೂ ಉತ್ಪಾತಾದಿಗಳು ಸಂಭವಿಸಿದಾಗ ಮಹಾ ಪಾಪಕಾರಿಯೆಂಬ ಅಪವಾದ ಬಂದಾಗ, ಈ ಸೂರ್ಯದೇವತಾಕವಾದ ಮಂತ್ರವನ್ನು ಶುಚಿಭೂರ್ತನಾಗಿ ನೂರೆಂಟುಸಾರಿ ಜಪಮಾಡುವುದು ಅತ್ಯಂತ ಶ್ರೇಯಸ್ಕರವೆಂದು ನಾರದಮಹರ್ಷಿಯು ಸಾಂಬನಿಗೆ ಹೇಳುತ್ತಾ,

ಏವಂ ಸಂಕ್ಷೇಪತಃ ಪ್ರೋಕ್ತಃ ಪುಣ್ಯೋ ಜಪವಿಧಿರ್ಮಯಾ ।
ಮುದ್ರಾಣಾಂ ಲಕ್ಷಣಂ ಸಮ್ಯಗಿದಾನೀಂ ಕಥಯಾಮಿ ತೇ ॥ ೧೯ ॥

ಇತಿ ಶ್ರೀ ಸಾಂಬಪುರಾಣೇ ಜಪವಿಧಿರ್ನಾಮ
ಸಪ್ತಚತ್ವಾರಿಂಶತ್ತಮೋಽಧ್ಯಾಯಃ.

---

೧೯. ಎಲೈ ಸಾಂಬನೇ, ಇಲ್ಲಿನವರೆಗೂ ಜಪಮಾಡುವ ವಿಧಾನವನ್ನು ನಿನಗೆ ಸಂಕ್ಷೇಪವಾಗಿ ತಿಳಿಸಿರುವೆನು. ಈಗ ತದಂಗವಾಗಿರುವ ಮುದ್ರಾಲಕ್ಷಣವನ್ನು ವಿವರಿಸುವೆನು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ನಾರದ ಮತ್ತು ಸಾಂಬ ಇವರ ಸಂವಾದದಲ್ಲಿ
ಸೂರ್ಯಮಂತ್ರ ಜಪವಿಧಾನ ಮತ್ತು ಜಪಕಾಲ, ಜಪಸರದ ಲಕ್ಷಣ
ಇವುಗಳನ್ನು ತಿಳಿಸುವ ನಲವತ್ತೇಳನೆಯ ಅಧ್ಯಾಯವು
ಸಮಾಪ್ತವಾದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಅಷ್ಟಚತ್ವಾರಿಂಶೋಽಧ್ಯಾಯಃ



॥ ನಾರದ ಉವಾಚ ॥

ಮುದ್ರಾಣಾಂ ಲಕ್ಷಣಂ ಸಮ್ಯಗಿದಾನೀಂ ಕಥಯಾಮಿ ತೇ ॥ ೧ ॥

॥ ದೇವ ಉವಾಚ ॥

ಕರಂ ಶಿಖಾಸು ವಿನ್ಯಸ್ಯ ಅರುಣಾದೀನ್ಯಥಾಕ್ರಮಂ ।
ವಿಜಯಂ ವಾ ಮೂಲಮಂತ್ರಂ ಮುದ್ರಾಬಂಧಂ ಸಮಾಚರೇತ್ ॥ ೨ ॥

ಲಗ್ನಾಸ್ಯ ಪೃಷ್ಠಮಧ್ಯಾಸ್ಯೇ ಈಶದುಗ್ನಸ್ತೇ ತು ತರ್ಜನೀ ।
ತಿರ್ಯಗ್ವಿನ್ಯಸೇದಂಗುಷ್ಠೇ ಶಿರಃ ಕಾಂತೇತ್ವನಾಮಿಕೇ ॥ ೩ ॥

---

## ನಲವತ್ತೆಂಟನೆಯ ಅಧ್ಯಾಯ.

೧-೨. ನಾರದಮಹರ್ಷಿಯು ಸಾಂಬನಿಗೆ ಹಿಂದೆ ಸೂರ್ಯದೇವನು ಹೇಳಿದಂತಹ ಮುದ್ರಾಲಕ್ಷಣವನ್ನು ವಿವರಿಸಲಾರಂಭಿಸಿದನು. " ಸಾಂಬರಾಜನೇ, ಹಿಂದೆ ಹೇಳಿದ ಅರುಣಾದಿಯಾದ ಅಥವಾ ವಿಜಯಾದಿಯಾದ ಮೂಲಮಂತ್ರಗಳನ್ನು ಜಪಿಸಿ ಅನಂತರ ಮುದ್ರಾಬಂಧನವನ್ನು ಆರಂಭಿಸಬೇಕು.

೩-೪. ಜಪಮಾಡುವವನ ಮುಖದ ಮಧ್ಯಭಾಗ ಮತ್ತು ಹಿಂಭಾಗದಲ್ಲಿ ಅಂಗುಷ್ಠ ಮತ್ತು ತರ್ಜನೀಬೆರಳುಗಳನ್ನು ಅಡ್ಡಲಾಗಿಟ್ಟು, ಅನಾಮಿಕದಿಂದ

ಕನಿಷ್ಠಕೇ ಸಮೇ ತುಂಗೇ ಪೃಷ್ಠಲಗ್ನೇ ಉಭೇ ಅಪಿ ।
ಏಷಾ ವಿಶ್ವಾತ್ಮನೋ ಮುದ್ರಾ ರಥಸ್ಯ ಪರಿಕೀರ್ತಿತಾ ॥ ೪ ॥

ಮಧ್ಯಮಾನಾಮಿಕಾನಾಂ ಚ ಸಂಪೃಷ್ಟಾಂಗುಷ್ಠಯೋರ್ದ್ವಯೋಃ ।
ಕುರ್ವೀತ ಶೇಷಾನುತ್ತುಂಗಾನ್ಮುದ್ರೇಯಂ ವಾಜಿನಾಂ ಸ್ಮೃತಾ ॥ ೫ ॥

ಫಣಿಭೋಗನಿಭಾಃ ಕಾರ್ಯಾಃ ಸವ್ಯದಕ್ಷಿಣಹಸ್ತತಃ ।
ಚಕ್ರಂ ಬಲಾತ್ತಲಾಂತುಲ್ಯೋಃ ಕರಯೋರ್ಭಗ್ನಮೂಲಯೋಃ ॥ ೬ ॥

ಪೃಷ್ಠಲಗ್ನಾ ಕರೌ ಕೃತ್ವಾ ಪ್ರಗುಣೇ ತರ್ಜನೀ ಸಮೇ ।
ಕನಿಷ್ಠಿಕೇ ಕ್ರೋಡಲಗ್ನೇ ಅಂಗುಷ್ಠೌ ತು ಸಮೌ ಯುತೌ ॥ ೭ ॥

ಶಿಖಾಶ್ಚಲಾಸ್ತು ಸಕುಟಿಲಾಸ್ಸಂಕ್ರೋಡಾಭಿಮುಖಾ ಗತಾ ।
ಇಯಂ ಮುದ್ರಾ ಸಮುದ್ದಿಷ್ಟಾ ಹ್ಯರುಣಸ್ಯ ವಿಧಾನತಃ ॥ ೮ ॥

---

ಶಿರಸ್ಸಿನ ಮಧ್ಯಭಾಗವನ್ನೂ, ಕನಿಷ್ಠವನ್ನು ನೇರವಾಗಿಯೂ ಇಡುವ ಮುದ್ರೆಗೆ ವಿಶ್ವಾತ್ಮಕನ (ಸೂರ್ಯನ) ರಥಮುದ್ರೆ ಎಂದು ಹೆಸರು.

೫. ಎರಡು ಕೈಗಳಮಧ್ಯನು, ಮತ್ತು ಅನಾಮಿಕ ಬೆರಳುಗಳನ್ನು ಅಂಗುಷ್ಠವನ್ನೂ ಒಟ್ಟಾಗಿ ಸೇರಿಸಿ, ಉಳಿದವುಗಳನ್ನು ಮೇಲ್ಮುಖವಾಗಿ ಸೇರಿಸಿ ಹಿಡಿದಿರುವುದೇ ವಾಜಿಮುದ್ರೆ. (ಇದು-ಎರಡು ಕಿವಿಗಳುಳ್ಳಕುದುರೆಯ ಮುಖದಂತೆ ತೋರುವುದು).

೬-೮. ಎಡ ಮತ್ತು ಬಲಗೈಗಳನ್ನು ಹಾವಿನದೇಹದಂತೆ ಹೆಣೆದು ಜೋಡಿಸಿ ಎರಡುಕೈಗಳ ಸಮಾನಾಂಗುಳಿಗಳನ್ನು ಮೂಲ ಮತ್ತು ಪೃಷ್ಠಭಾಗವು ಒಟ್ಟಾಗಿ ಸೇರುವಂತೆಮಾಡಿ ಎರಡು ತರ್ಜನಿಗಳನ್ನೂ ಸಮನಾಗಿಟ್ಟು, ಎರಡು ಕನಿಷ್ಠಗಳನ್ನೂ ಬಗ್ಗಿಸಿ, ಅಂಗುಷ್ಠಗಳನ್ನೂ ಸರಿಯಾಗಿಟ್ಟು, ತಲೆಯನ್ನು ಸ್ವಲ್ಪಮಟ್ಟಿಗೆ ಬಾಗಿಸಿ, ಅಭಿಮುಖನಾಗಿ ನಿಲ್ಲುವುದಕ್ಕೆ ಅರುಣಮುದ್ರೆಯೆಂದು ಹೆಸರು.

ಅಷ್ಟೌ ರಣೌ (?) ರವೀಂದ್ರೌ ಚ ಲಗ್ನಾನ್ಯಂಗಾನಿ ಪೂರ್ವಗೌ ।
ಅರುಣೇಂದ್ರೌ ರವಿಸ್ತ್ವಷ್ಟಾ ಏತಾ ಮುದ್ರಾಃ ಪೃಥಕ್ಪೃಥಕ್ ॥ ೯ ॥
ಸ್ವೈವಾನ್ಯೋನ್ಯಲಗ್ನಾಃ ಸ್ಯುಃ ಶೇಷಾ ವ್ಯೋಮಕ್ರಿಯಾಃ ಸ್ಮೃತಾಃ ।
ಯಮಸೂರ್ಯೌ ಮಿಥಃ ಶ್ಲಿಷ್ಟಾವಂಶುಮತ್ಸ್ವರ್ಣರೇತಸಾ ॥ ೧೦ ॥

ಊರ್ಧ್ವಗೌ ರವಿಧಾತಾರೌ ಯುತಾವಿಂದುಗಭಸ್ತಿನೌ ।
ಯಮಸ್ಯ ಮೂಲಲಗ್ನೌ ತು ತಥಾ ತ್ವಷ್ಟಾರುಣಾವುಭೌ ॥ ೧೧ ॥
ಏಷಾಮ್ಯತಾನಿ ಗದಿತಾ ರಥೇನ ಹೃದಯಂ ಸಮಂ ।
ಅಂತಸ್ತು ಸೂರ್ಯಾರುಣಯೋರ್ಲಗ್ನಸ್ತ್ವಷ್ಟಾ ತ್ವಧೋಮುಖಃ ॥ ೧೨ ॥
ವಾಮಮುಷ್ಟೌ ಸದಾ ಲಗ್ನಾ ಶೇಷಾಃ ಶಿರ ಉದಾಹೃತಾಃ ।
ಅನ್ಯೋನ್ಯಂ ತರ್ಜನೀಲಗ್ನಾ ತುಂಗೇಷ್ಟೌ ಚ ತದ್ಯುತಾ ॥ ೧೩ ॥

---

೯-೧೧. ಮೇಲೆ ಹೇಳಿದ ರಥ, ವಾಜಿ, ಮುದ್ರೆಗಳಿಂದ ಕೂಡಿದ ಅರುಣ ಮುದ್ರೆಯು ಎಂಟುಪ್ರಕಾರಗಳಾಗುತ್ತವೆ. ಸೂರ್ಯ, ಇಂದ್ರ, ಅರುಣ, ಇಂದು, ರವಿ ತ್ವಷ್ಟೃ ಎಂಬ ಭೇದದಿಂದ ಬೇರೆಬೇರೆ ಮುದ್ರೆಗಳಾಗುತ್ತವೆ. ಇವು ಸ್ವತಂತ್ರ ಮುದ್ರೆಗಳು. ಇನ್ನುಳಿದ ಕೆಲವು ಮುದ್ರಾವಿನ್ಯಾಸಗಳು ವ್ಯೋಮಕ್ರಿಯೆಗೆ ಸಂಬಂಧಪಡುವುವು. ಕ್ಕೆ ಬೆರಳುಗಳು ಅರುಣ ಮುದ್ರಾವಿಧಾನದಿಂದ ನಿಕಟಸಂಬಂಧವುಳ್ಳದ್ದಾದರೆ ಯಮ ಮತ್ತು ಸೂರ್ಯಮುದ್ರೆಗಳಾಗುವುವು. ಊರ್ಧ್ವಗಾಮಿಯಾದ ಕೈಬೆರಳುಗಳಿಂದ ಸೂರ್ಯಬ್ರಹ್ಮಮುದ್ರೆಗಳುಂಟಾಗುವುವು. ಯಮಮುದ್ರೆಯಿಂದೊಡಗೂಡಿದ ಸೂರ್ಯಚಂದ್ರಮುದ್ರೆಗಳು ತ್ವಷ್ಟಾರುಣಮುದ್ರೆಗಳೆನಿಸುವುವು.

೧೨-೧೩. ಈ ಮುದ್ರೆಗಳು ರಥನಿರ್ಮಾಣಕ್ಕೆ ಹೃದಯಸ್ಥಾನದಲ್ಲಿ (ಮುಖ್ಯಸ್ಥಾನ) ನಿಲ್ಲುವುವು. ಸೂರ್ಯ ಮತ್ತು ಅರುಣಮುದ್ರೆಗಳೇ ಮಧ್ಯಭಾಗ. ತ್ವಷ್ಟೃ ಮುದ್ರೆಯೇ ಅಧೋಭಾಗ. ವಾಮಮುಷ್ಟಿಗೆ ಸಂಬಂಧವಾದ ಮುದ್ರೆಗಳೆಲ್ಲಾ ಶಿರಸ್ಸ್ಥಾನವೆನಿಸುವುವು. ತರ್ಜನೀ ಬೆರಳುಗಳಿಂದ ಊರ್ಧ್ವಮುಖವಾಗಿ ಒಟ್ಟುಗೂಡಿ ಆಗುವ ಮತ್ತು ವಿಶೇಷದಿಂದ ಆಗುವ ಮುದ್ರೆಗಳು ಶಿಖಾಮುದ್ರೆಗಳೆನಿಸುವುವು.

ಅನ್ಯೋನ್ಯಂ ರಂತ್ರಗಾಃ ಶ್ಲಿಷ್ಟಾಃ ಶೇಷಾ ಭಗ್ನಾಃ ಶಿಖಾಃ ಸ್ಮೃತಾಃ ।
ಅನ್ಯೋನ್ಯಾ ನ ಚ ಸಂಲಗ್ನಾ ದಿವಸಂಘಾ ವರುಣಾದಯಃ ॥ ೧೪ ॥

ಕರಮೂಲಪೃಥಗ್ಭೂತಾನೇತ್ರನೇತ್ರಾಕೃತಿಃ ಸ್ಮೃತಾಃ ।
ಉತ್ತಾನವಾಮಹಸ್ತೇ ತು ದೃಷ್ಟಂ ಕೃತ್ವಾ ಹ್ಯಧೋಮುಖಂ ॥ ೧೫ ॥

ಅಂಗುಷ್ಠೇ ತರ್ಜನೀಲಗ್ನೇ ಪ್ರಗುಣೇ ಕರಮೂಲಯೋಃ ।
ಅನ್ಯೋನ್ಯಕ್ರೋಡಸಂಲಗ್ನಾ ಹ್ಯಚಾರ್ಃ ಶೇಷಾಃ ಸುಕುಂಚಿತಾಃ ॥ ೧೬ ॥

ಮುದ್ರಾ ಕವಚಸಂಜ್ಞೇಯಂ ಮಯಾ ವಃ ಪರಿಕೀರ್ತಿತಾ ।
ರವೀಂದೂಮೂಲಾದಾರಭ್ಯ ಊರ್ಧ್ವಗಂ ತ್ವಷ್ಟ್ರರುಣಾವುಭೌ ॥ ೧೭ ॥

ಸ್ಪೃಶೇದಗ್ರಾನ್ನತಾನ್ ಸರ್ವಾನ್ನತಾಂ ಶ್ಚೈವ ಸಮುತ್ಕ್ಷಿಪೇತ್ ।
ಕುಂಚಿತಾನಾಮಿಕಾಗ್ರಂ ಚ ಹ್ಯಂಗುಷ್ಠಾಗ್ರೇಣ ಯೋಜಯೇತ್ ॥ ೧೮ ॥

---

೧೪-೧೫. ದ್ಯುಸಂಘ ಮುದ್ರೆಗಳೆಂದರೂ ಈ ವರುಣಾದಿಮುದ್ರೆಗಳೇ, ಇವು ಪರಸ್ಪರ ಒಂದಕ್ಕೊಂದು ಸೇರತಕ್ಕವುಗಳಲ್ಲ. ಅಂಗುಷ್ಠ ಮತ್ತು ಮೂಲ ಇವುಗಳ ಪೃಥಕ್ಕರಣಗಳಿಂದ ನೇತ್ರಾಕಾರವು ಉದಯಿಸುವುದು. ಇದೇ ನೇತ್ರಮುದ್ರೆಯೆನಿಸುವುದು. ಎಡಗೈಯನ್ನು ಮೇಲಕ್ಕೆತ್ತಿ ಅಧೋಮುಖವಾದ ದೃಷ್ಟಿಯಿಂದ ಸೂರ್ಯದರ್ಶನ ಮಾಡುವುದೇ ನೇತ್ರಮುದ್ರೆ.

೧೬. ಅಂಗುಷ್ಠ ಮತ್ತು ತರ್ಜನೀಬೆರಳುಗಳನ್ನು ಒಟ್ಟುಗೂಡಿಸಿ ಎರಡು ಕೈಗಳಲ್ಲಿಯೂ ಅದು ಕರಮೂಲಕ್ಕೆ ಬರುವಂತೆ ಬಗ್ಗಿಸಿಕೊಂಡರೆ ಅದಕ್ಕೆ ಕವಚ ಮುದ್ರೆಯೆಂದು ಹೆಸರು.

೧೭-೧೮. ಹಿಂದೆ ಹೇಳಿದ ಸೂರ್ಯಚಂದ್ರರ ಮುದ್ರೆಗಳ ಜೊತೆಗೆ ಕ್ರಮವಾಗಿ ತ್ವಷ್ಟೃ, ಮತ್ತು ಅರುಣಮುದ್ರೆಗಳನ್ನು ಒಂದುಗೂಡಿಸಿ, ಅನಾಮಿಕಾಗ್ರವನ್ನು ಅಂಗುಷ್ಠಾಗ್ರಕ್ಕೆ ಸೇರಿಸಿ ಉಳಿದ ಅಂಗುಳಿಗಳನ್ನು ಎತ್ತರವಾಗಿ ನಿಲ್ಲಿಸುವುದರಿಂದ ಉಂಟಾಗುವ ಮುದ್ರೆಗೆ ವಸುಮುದ್ರೆಯೆಂದು ಹೆಸರು.

ಕುರ್ಯಾಚ್ಛೇಷಾನ್ ಸಮುತ್ತುಂಗಾನ್ನಸುಮುದ್ರಾ ಉದೀರಿತಾಃ ।
ಅಧೋಮುಖೇ ವಾಮಕರೇ ಕೃತೋತ್ತಾನಂ ತು ದಕ್ಷಿಣಂ ॥ ೧೯ ॥

ಅರುಣೋ ರವಿರಿಂದ್ರಶ್ಚ ಚಂದ್ರಸ್ತ್ವಷ್ಟಾರಮಾಕ್ರಮೇತ್ ।
ಯಮಾಂಶುಮುತ್ತಾವುತ್ತುಂಗೇ ಗುಲ್ಫೌ ಕ್ರೋಡೇನ ಸಂಗತೌ ॥ ೨೦ ॥

ಅನ್ಯೋನ್ಯಂ ರಂಧ್ರನಿರ್ಯಾತಾಃ ಶೇಷಾಃ ಶ್ಲಿಷ್ಟಾಶ್ಚ ಕುಂಚಿತಾಃ ।
ಕೃತ್ವಾ ದಕ್ಷಿಣಹಸ್ತಸ್ಯ ತಥಾಂಗುಷ್ಠಂ ಸಮುನ್ನತಂ ॥ ೨೧ ॥

ಯೋಧಾ ವೈ ಕರತಲೇಚ್ಚೈವ ಚತ್ವಾರೋ ದಂಡ ಉಚ್ಯತೇ ।
ಶಕ್ತ್ಯಾಪ್ಯೇವಂ ಪ್ರಕುರ್ವೀತ ಸಸೂರ್ಯೋ ಸ್ವರ್ಣರೇತಸಂ ॥ ೨೨ ॥

---

೧೯-೨೦. ಅರುಣ, ರವಿ, ಇಂದ್ರ, ಚಂದ್ರ, ತ್ವಷ್ಟೃ, ಈ ದೇವತಾಕವಾದ ಮುದ್ರೆಗಳೆಲ್ಲಾ ಎಡಗೈಯನ್ನು ಅಧೋಭಾಗದಲ್ಲಿಯೂ, ಬಲಗೈಯನ್ನು ಮೇಲ್ಭಾಗದಲ್ಲಿಯೂ ಇಡುವುದರಿಂದ ಉಂಟಾಗುವುವು. ಯಮ ಮತ್ತು ಅಂಶುಮನ್ಮುದ್ರೆಗಳು ಕೈಯಿನ ಹರಡನ್ನು ಅಧೋಭಾಗಕ್ಕೂ ಮತ್ತು ಮುಂಗೈಗಳನ್ನು ಮೇಲ್ಭಾಗಕ್ಕೂ ಇಡುವುದರಿಂದ ಉಂಟಾಗುವುವು.

೨೧-೨೨. ಎರಡುಕೈಗಳ ಬೆರಳುಗಳನ್ನೂ ಅವಿಶಿಷ್ಟವಾಗಿ ಜೋಡಿಸಿ, ಬೆರಳುಗಳನ್ನೂ ಬಗ್ಗಿಸಿಕೊಂಡು, ಬಲಗೈಯಿನ ಅಂಗುಷ್ಠವನ್ನು ಎತ್ತಿಕೊಂಡಿರುವುದು ಯೋಧಾಮುದ್ರೆಯೆನಿಸುವುದು. ಮುಂಗೈಸಹಾಯದಿಂದ ಯೋಧಾಮುದ್ರೆಯನ್ನು ರಚಿಸುವುದು ದಂಡಮುದ್ರೆಯೆನಿಸುವುದು. ಸೂರ್ಯನ ದರ್ಶನಕಾಲದಲ್ಲಿ ಸ್ವರ್ಣರೇತಸ್ಸನಾದ ಭಗವಂತನನ್ನು ಸ್ವಶಕ್ತಿಯಿಂದ ನೋಡಲು ಈ ರೀತಿ ಮಾಡುವುದು ಒಳ್ಳೆಯದು.

ಲಗ್ನ ತುಂಗೇ ಸಮಾಖ್ಯಾತಾ ಖಡ್ಗಮುದ್ರಾವಿಧಾನತಃ ।
ಅರುಣಾಸ್ಯಂ ನ ಸಂಸ್ಪೃಶ್ಯ ಸೂರ್ಯಾಸ್ಯೇನ ತು ಕುಂಚಿತಂ । ॥ ೨೩ ॥

ವಾಮಹಸ್ತಗತಾಭುಗ್ನಂ ಕೃತ್ವಾ ಕರತಲೇ ರವಿಂ ।
ವಾಮಪಾಣಿಪ್ರಕೋಷ್ಠಂ ಚ ಸಂಸ್ಪೃಶೇತ್ಸ್ವರ್ಣರೇತಸಾ ॥ ೨೪ ॥

ತ್ವಷ್ಟ್ರಾಸ್ಯೇ ದಕ್ಷಿಣಾಶೇಷಾ ನೀಲಾಸ್ಯಾ ಶಶಉಚ್ಯತೇ ।
ಶಕ್ತಿಂ ವಾಮನತಾಮೀಯಾತ್ಕುರ್ವನ್ನಂಕುಶ ಉಚ್ಯತೇ ॥ ೨೫ ॥

ಈಷತ್ತು ಕುಂಚಿತಾಗ್ರಸ್ಯ ಸ್ವಸ್ಥೌ ದಕ್ಷಿಣಹಸ್ತಗಾಃ ।
ಪತಿತೌ ಯತಧಾತಾರೌ ದೃಷ್ಟಲಗ್ನೌ ಸಮುತ್ಥಿರೌ ॥ ೨೬ ॥

ಕ್ರೋಡಲಗ್ನೌ ಸಮುತ್ತುಂಗೌ ಶೇಷಾಃ ಷಟ್ತ್ರಿಂಶ ಉಚ್ಯತೇ ।
ತ್ವಷ್ಟ್ರಾರುಣೌ ನ ಚೋತ್ತಾನೌ ರವೀಂದ್ರೌ ಕ್ರಾಂತಮಸ್ತಕೌ ॥ ೨೭

---

೨೩-೨೪. ಮೇಲ್ಮುಖವಾದ ಅಂಗುಳಿಗಳಿಂದ ಉಂಟಾಗುವ ಖಡ್ಗಮುದ್ರೆಯಿಂದ ಅರುಣನನ್ನೂ, ಕುಂಚಿತವಾದ ಖಡ್ಗಮುದ್ರೆಯಿಂದ ಸೂರ್ಯನನ್ನೂ ನೋಡಬೇಕು. ಎಡಗೈಯಲ್ಲಿ ಬಲಭಾಗದ ಕೈಯನ್ನು ಬಗ್ಗಿಸಿಕೊಂಡು ಸ್ವರ್ಣರೇತೋಮುದ್ರೆಯಿಂದ (?) ಸ್ಪರ್ಶಮಾಡಬೇಕು.

೨೫-೨೬. ತ್ವಷ್ಟೃದೇವತಾಕವಾದ ಮುದ್ರೆಯೇ ಬಲಭಾಗಕ್ಕೆ ಕುಂಚಿತವಾದರೆ ಶೇಷಮುದ್ರೆಯೆನಿಸುವುದು. ನೀಲಮುದ್ರೆಯೇ ಶಶಮುದ್ರೆಯೆನಿಸುವುದು ವಾಮನಮುದ್ರೆಯೆನಿಸುವುದೇ ಶಕ್ತಿಮುದ್ರೆ. ಇದೇ ಮುದ್ರೆಯೇ ಸ್ವಲ್ಪ ಕುಂಚಿತವಾದರೆ ಅಂಕುಶಮುದ್ರೆಯೆನಿಸುವುದು. ಆಯತ ಮತ್ತು ಬ್ರಹ್ಮಮುದ್ರೆಗಳು ಕೆಳಭಾಗಕ್ಕೆ ಸ್ವಲ್ಪ ವಿಶಾಲ ಮುಖಗಳಾದರೆ ಆ ಮುದ್ರೆಗಳು ಶೇಷಮುದ್ರೆಗಳೆನಿಸುವುವು.

೨೭-೨೮. ಇಂತಹ ಶೇಷಮುದ್ರೆಗಳು ಮೂವತ್ತಾರಾಗಿರುವುವು. ತ್ವಷ್ಟೃ ಅರುಣ, ಮುಂತಾದ ಮುದ್ರೆಗಳು ಊರ್ಧ್ವಮುಖಗಳಾಗಿಯೂ ಯಮ ಸೂರ್ಯ

ಯಮಸ್ತಥೈವ ಸೂರ್ಯೇಣ ಅಂಶುಮಾನ್ ಸ್ವರ್ಣರೇತಸಾ ।
ಉಭೌ ಗಭಸ್ತಿಧಾತಾರೌ ಪೃಷ್ಠಲಗ್ನೌ ಸಮುಚ್ಛ್ರಿತೌ ॥ ೨೮ ॥

ಮುದ್ರಾವ್ಯೋಮಶಿಖಾನಾಮ ಕಥಿತೇಯಂ ವಿಧಾನತಃ ।
ಏತನ್ಮಯಾ ಸಮುದ್ದಿಷ್ಟಂ ಮುದ್ರಾಣಾಂ ಲಕ್ಷಣಂ ಶುಭಂ ॥ ೨೯ ॥

ಯೇನ ಸಮ್ಯಕ್ಪ್ರಯುಕ್ತೇನ ಪರಾಂ ಸಿದ್ಧಿಮವಾಪ್ನುಯಾತ್ ॥ ೩೦ ॥

ಇತಿ ಶ್ರೀ ಸಾಂಬಪುರಾಣೇ ಮುದ್ರಾಲಕ್ಷಣಂ ನಾಮ
ಅಷ್ಟಚತ್ವಾರಿಂಶೋಽಧ್ಯಾಯಃ.

---

ಅಂಶುಮತ್, ಸ್ವರ್ಣರೇತಸ್ಸು, ಗಭಸ್ತಿ, ಧಾತೃ, ಈ ಮುದ್ರೆಗಳಲ್ಲಿ ಅಂಗುಳಿಗಳು ಮೂಲಲಗ್ನಗಳಾಗಿಯೂ ಇರಬೇಕು.

(ಈ ಮುದ್ರಾಲಕ್ಷಣಸ್ವರೂಪವನ್ನು ಗುರುಮುಖದಲ್ಲಿ ತಿಳಿಯಬೇಕೇ ಹೊರತು ಕೇವಲ ಗ್ರಂಥಾವಲೋಕನದಿಂದ ತಿಳಿಯಲಾಗುವುದಿಲ್ಲ.)

೨೯-೩೦. ಇಲ್ಲಿನವರೆಗೆ ಮುದ್ರೆ ಮತ್ತು ವ್ಯೋಮಶಿಖೆಗಳ ಹೆಸರುಗಳನ್ನೂ ಅವುಗಳ ಲಕ್ಷಣವನ್ನೂ ವಿವರವಾಗಿ ಹೇಳಿರುವೆನು. ಇದನ್ನು ಕ್ರಮವರಿತು ಆಚರಿಸಿದವರಿಗೆ ಸಕಲ ಸಿದ್ಧಿಗಳೂ ಲಭಿಸುವುವು.

ಇಲ್ಲಿಗೆ ಸಾಂಬಪುರಾಣದಲ್ಲಿ ನಲವತ್ತೆಂಟನೆಯ ಅಧ್ಯಾಯ ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕೋನಪಂಚಾಶೋಽಧ್ಯಾಯಃ



॥ ನಾರದ ಉವಾಚ ॥

ಶೌಚಂ ಸ್ನಾನಂ ಕರನ್ಯಾಸಂ ರವೀಕರಣಮಾಹ್ನಿಕಂ ।
ಯೋಗಜ್ಞಾನಂ ವಿಶೇಷೇಣ ತಸ್ಯ ಶೃಣುತ ದೇವತಾಃ ॥ ೧ ॥

ದೀಕ್ಷಿತಾಯಾರ್ಕಭಕ್ತಾಯ ಶ್ರದ್ಧಧಾನಾಯ ಧೀಮತೇ ।
ಕಥನೀಯಮಿದಂ ಶಾಸ್ತ್ರಂ ಸದ್ಯಃ ಸರ್ವಾರ್ಥಸಾಧನಂ ॥ ೨ ॥

---

## ನಲವತ್ತೊಂಬತ್ತನೆಯ ಅಧ್ಯಾಯ.

೧. ಮತ್ತೆ ನಾರದಮಹರ್ಷಿಯು ದೇವತೆಗಳನ್ನು ಕುರಿತು "ದೇವತೆಗಳಿರಾ ಈಗ ಸೂರ್ಯಪ್ರೀತಿಕರಗಳಾಗಿ ಮಾಡಬೇಕಾದ ಶೌಚವಿಧಿ, ಸ್ನಾನಾರ್ಥವಾಗಿ ಮಾಡುವ ಕರನ್ಯಾಸಾದಿಗಳು, ಸೂರ್ಯಾತ್ಮನಾಪರಿಣತವಾದ ನಿತ್ಯಕರ್ಮಗಳು, ಯೋಗಜ್ಞಾನ ಇವೆಲ್ಲವನ್ನೂ ವಿವರಿಸಿ ಹೇಳುವೆನು. ಸಾವಧಾನದಿಂದ ಕೇಳಿ" ಎಂದು ಮೇಲಿನ ವಿಷಯಗಳನ್ನು ನಿರೂಪಿಸಲಾರಂಭಿಸಿದನು.

೨. ಈ ವಿಷಯಗಳನ್ನು ಸೂರ್ಯಭಕ್ತನಾಗಿ ನಂಬಿಕೆಯಿಂದ ಕೂಡಿ ಸ್ಥಿರ ಜಿತೇಂದ್ರಿಯನಿಗೆ ಮಾತ್ರ ಹೇಳಬೇಕು. ಆತನು ಸೂರ್ಯದೀಕ್ಷೆಯನ್ನು ಪಡೆದಿರಬೇಕು. ಅದರಿಂದ ಆತನು ಸರ್ವಾರ್ಥ ಸಿದ್ಧಿಯನ್ನೂ ಪಡೆಯುವನು.

ಶುಚೌ ದೇಶೇ ಸಮಾಸೀನಃ ಕುರ್ಯಾದಾಚಮ್ಯಕಂ ವಿಧಿಂ ।
ಕೃತ್ವಾವಗುಂಠನಂ ಮೌನೀ ಕುರ್ವನ್ನಧಿಮುಖಃ ಸ್ಥಿತಃ ॥ ೩ ॥

ಸಮೃಜ್ಜಲಾಭ್ಯಾಂ ಶೌಚಂ ತು ಕುರ್ವೀತ ಪ್ರಾಗುದಜ್ಮುಖಃ ।
ಭೂತಾಗ್ನಿಂ ದಿಗ್ವಾರಣ್ಯೈಶ್ಚ ಹ್ಯಧಃಪಾದಗುದಾದಿತಃ ॥ ೪ ॥

ಕರಾಂತರಿತತೋಯೇನ ಕಾರ್ಯಂ ಪಾದಾವಸೇಚನಂ ।
ಮೃತ್ಪೂರ್ವಕಂ ತಥಾ ಪಾಣಿಂ ಪ್ರಕ್ಷಾಳ್ಯಾಂತಃಪ್ರಕೋಷ್ಠತಃ ॥ ೫ ॥

ಉಪವೀತೀ ಜಲಂ ಪ್ರಾಶ್ಯ ಬ್ರಹ್ಮತೀರ್ಥೇನ ವಾ ಪಿಬೇತ್ ।
ಹೃದಂ ದ್ವಿರ್ವಚನಂ ಮೃದ್ಯ ಖಾನಿ ಸರ್ವಾಣ್ಯುಪಸ್ಪೃಶೇತ್ ॥ ೬ ॥

ಭೂಯೋಽರ್ಕರ್ಧರ್ಮಹೃದಯೈಸ್ತ್ರಿಃ ಪ್ರಾಶ್ಯಾಥ ಜಲಂ ಪಿಬೇತ್ ।
ಶಿರಶ್ಚ ವದನಂ ಮೃಜ್ಯ ಶಿಖಾಗ್ರಾನ್ ಖಾನ್ಯುಪಸ್ಪೃಶೇತ್ ॥ ೭ ॥

---

೩-೪. ಮಲವಿಸರ್ಜನೆಗೆ ಕುಳಿತುಕೊಳ್ಳುವವನು ಶುಚಿಯಾದ ಸ್ಥಳದಲ್ಲಿ ಮುಸುಕುಹಾಕಿಕೊಂಡು, ಆಚಮ್ಯಕ ವಿಧಿಯನ್ನನುಸರಿಸಿ, ಯಜ್ಞೋಪವೀತಾದಿಗಳನ್ನು ಸರಿಪಡಿಸಿಕೊಂಡು, ಮಾತನಾಡದೆ ಅಧೋಮುಖಿಯಾಗಿ ಕುಳಿತುಕೊಳ್ಳಬೇಕು. ಅನಂತರ ಮಣ್ಣಿನಿಂದಕೂಡಿದ ನೀರಿನಿಂದ ಪೂರ್ವ, ಅಥವಾ ಉತ್ತರಾಭಿಮುಖವಾಗಿ ಕುಳಿತುಕೊಂಡು ಗುದ, ಪಾದಾದಿಗಳನ್ನು ೫-೩-೮ ಈ ಸಂಖ್ಯೆಯಲ್ಲಿ ತೊಳೆಯಬೇಕು.

೫-೭. ಬೊಗಸೆಗಳಲ್ಲಿರುವ ಮೃತ್ತಿಕೆಯಿಂದ ಕೂಡಿದ ನೀರಿನಿಂದ ಕಾಲುಗಳನ್ನು ತೊಳೆದುಕೊಳ್ಳಬೇಕು. ಅನಂತರ ಹರಡಿದ ಬೆಟ್ಟುಗಳುಳ್ಳ ಕೈಗಳನ್ನು ತೊಳೆದುಕೊಂಡು, ಯಜ್ಞೋಪವೀತವನ್ನು ಉಪವೀತಕ್ರಮದಲ್ಲಿ ಹಾಕಿಕೊಂಡು, ಬ್ರಹ್ಮತೀರ್ಥದಿಂದ (ಹೆಬ್ಬೆರಳಿನ ಬುಡದಿಂದ) ಆಚಮನಮಾಡಬೇಕು. ಹೀಗೆ ಎರಡಾವೃತ್ತಿ ಮಂತ್ರಪೂತವಾದ ನೀರಿನಿಂದ ತನ್ನ ಎಲ್ಲಾ ಅಂಗಗಳನ್ನೂ ಸ್ಪರ್ಶಮಾಡಿಕೊಳ್ಳಬೇಕು. '

ಫೇನಬುದ್ಬುದಯುಕ್ತೇನ ನೀರೇಣ ಶುಚಿನಾ ಸದಾ ।
ಅಂಗುಷ್ಠೇನೈವ ವಾಮೇನ ಐಂದ್ರ್ಯಾಂ ಸೌಮ್ಯಾಂ ವ್ಯವಸ್ಥಿತಃ ॥ ೮ ॥

ಇತಿ ಶ್ರೀ ಸಾಂಬಪುರಾಣೇ ಏಕೋನಪಂಚಾಶೋಽಧ್ಯಾಯಃ.

---

೭-೮. ಮತ್ತೆ ಮೂರಾವೃತ್ತಿ ಆಚಮನಮಾಡಿ, ಶಿರಸ್ಸು, ಮುಖ, ಶಿಖೆಯೇ ಮೊದಲಾದ ಅವಯುವಗಳನ್ನು ಪಾದಪರ್ಯಂತವಾಗಿ ಸ್ಪರ್ಶಮಾಡಿಕೊಳ್ಳಬೇಕು. ನೊರೆ ಮತ್ತು ಗುಳ್ಳೆ, ಇವುಗಳಿಂದ ತುಂಬಿದ ನೀರು ನಿತ್ಯಕರ್ಮಗಳಿಗೆ ಅಪವಿತ್ರವಾದವುಗಳು. ಆದರೆ ಶೌಚಕ್ಕೆ ಮಾತ್ರ ಅದನ್ನು ಎಡಗೈಯಿನ ಅಂಗುಷ್ಠದಬೆರಳುಗಳಿಂದ ಮಾತ್ರ ಸ್ವೀಕರಿಸಿ ಈ ಉತ್ತರ ಅಥವಾ ಪೂರ್ವದಿಕ್ಕುಗಳಿಗೆ ಅಭಿಮುಖನಾಗಿದ್ದು ಶೌಚಕರ್ಮಗಳನ್ನು ನೆರವೇರಿಸಬಹುದು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ನಲವತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಪಂಚಾಶತ್ತಮೋಽಧ್ಯಾಯಃ

---

॥ ನಾರದ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಪೂಜಾಂ ಪಿಂಡಪ್ರಣೋದಿತಾಂ ।
ಮಂತ್ರಮುದ್ರಾದಿಯೋಗೇನ ವಾಂಛಿತಾರ್ಥಫಲಪ್ರದಾಂ ॥ ೧ ॥

ಮೂಲಮಂತ್ರೋದ್ಭವಾನ್ ಬೀಜಾನ್ವಿನ್ಯಸ್ಯಾಂಗುಷ್ಠತಃ ಕ್ರಮಾತ್ ।
ಅಂಗೇಷು ಚಾಂಗಮಂತ್ರೈಸ್ತು ಸಂಯೋಗಶ್ಚಾತ್ಮಮುದ್ರಯಾ ॥ ೨ ॥

---

## ಐವತ್ತನೆಯ ಅಧ್ಯಾಯ.

೧. ಇನ್ನುಮುಂದೆ ಬಲಿಸಹಿತವಾಗಿ ಹೇಳಲ್ಪಟ್ಟಿರುವ ಸಮಂತ್ರಕವಾದ ಮುದ್ರಾನ್ಯಾಸಸಹಿತವಾದ ಪೂಜಾಕ್ರಮವನ್ನೂ ಹೇಳುವೆನು. ಈ ರೀತಿಯಾದ ಪೂಜಾಕ್ರಮವು ಭಕ್ತರ ಇಷ್ಟಾರ್ಥವನ್ನೆಲ್ಲಾ ಸಲ್ಲಿಸುವುದು.

೨. ಮೂಲಮಂತ್ರಗಳಲ್ಲಿ ಹೇಳಲ್ಪಟ್ಟ ಬೀಜಾಕ್ಷರಗಳನ್ನೇ ಅಂಗುಷ್ಠಾದಿಯಾಗಿ ಅಂಗನ್ಯಾಸಮಾಡಿಕೊಂಡು, ಇತರ ಅಂಗಮಂತ್ರಗಳಿಂದಲೂ ಮುದ್ರಾವಿನ್ಯಾಸದಿಂದಲೂ, ಪೂಜಾಕ್ರಮವನ್ನು ಮುಂದುವರಿಸಬೇಕು.

ಓಂ ವಿಶ್ವಾತ್ಮನೇನಮಃ ರಥಸ್ಯ

ಓಂ ಹರಿಭ್ಯೋನಮಃ ಅಶ್ವಾನಾಂ

ಓಂ ಸರ್ಪಾಯನಮಃ ವಾಸುಕೇಃ

ಓಂ ತ್ರಿನಾಭಯೇನಮಃ ಚಕ್ರಸ್ಯ

ಓಂ ಅರುಣಾಯನಮಃ ಅರುಣಸ್ಯ

ಓಂ ಋತ್ವಿಗ್ವಿಧಾತ್ರೇನಮಃ ಪದ್ಮಸ್ಯ

ಓಂ ಆದಿತ್ಯಾಯಹೇಮಮಿಹಿರಾಗಚ್ಛಸ್ವವರ್ಗೇ

ಹ್ರಸ್ವಃ ಠಃ ಠಃ (ಸವಾಹನಮಂತ್ರಃ)

ಉಷಸೋಲ್ಕಾಯಠಃ ಠಃ (ಮೂಲಮಂತ್ರಃ)

ಓಂ ವ್ಯೋಮವ್ಯಾಪಿನೇ ಸರ್ವಲೋಕಾಧಿಪತಯೇ

ತಿಷ್ಠ ಠಃ ಠಃ (ಸ್ಥಾಪನಮಂತ್ರಃ)

ಓಂ ಅರ್ಕಾಯ ಠಃ ಠಃ (ಹೃದಯಂ)

ಓಂ ಪ್ರದೀಪ್ತಾಯ ,, (ಶಿರಃ)

ಓಂ ವಿಪಿಟಯೇ ,, (ಶಿಖಾಂ)

ಓಂ ಜಗಚ್ಚಕ್ಷುಷೇ ,, (ನೇತ್ರಂ)

ಓಂ ಪ್ರಭಾಕರಾಯ ,, (ಕವಚಂ)

ಓಂ ಮಹಾತೇಜಸೇ ಹುಂ ಫಟ್ (ಅಸ್ತ್ರಂ)

ಓಂ ಗಣಾಧಿಪತಯೇ ಸಹಸ್ರಕಿರಣಾಯ

ಸಂರೋಧಾತ್ಮನೇ ಠಃ ಠಃ (ಸಂರೋಧನಮಂತ್ರಃ)

---

ಮೇಲೆ ಹೇಳಿದಂತಹ ನಾಮಮಂತ್ರಗಳಿಂದಲೂ ಬೀಜಾಕ್ಷರಮಂತ್ರಗಳಿಂದಲೂ ಅಂಗನ್ಯಾಸ ಕರನ್ಯಾಸಾದಿಗಳನ್ನೂ ಮಾಡಿಕೊಂಡು ಜಪಪರ್ಯಂತವಾದ

ಓಂ ಆಕಾಶವಿಕಾಸಿನೇ ಜಗಚ್ಚಕ್ಷುಷೇ

ಸಾನ್ನಿಧ್ಯಂ ಕುರು ಕುರು ಠಃ ಠಃ (ಸನ್ನಿಧಾನಮಂತ್ರಃ)

ಓಂ ಹೂಂ ರಿಟಿಟಿರಿಂಟಿಯೇ ದೀಪ್ತಾಂಶವೇನಮಃ (ಪಾದ್ಯಮಂತ್ರಃ)

ಓಂ ಗಭಸ್ತಿನೇ ಕೇಲಿಕಿಲಿಕಾಲಿಕಾಲಿಸರ್ವಾರ್ಥ ಸಾಧನಂ

ಕಕಿಕೆಕಿಹಂ ನಮಃ (ಅರ್ಘ್ಯಮಂತ್ರಃ)

ಓಂ ಸವಿತ್ರೇ ವರುಣಾಯನಮಃ (ಸ್ನಾನಮಂತ್ರಃ)

ಓಂ ಷಷನೇತ್ರಾಯ ಸಹಸ್ರಹಸ್ತತನವೇನಮಃ (ವಸ್ತ್ರಮಂತ್ರಃ)

ಓಂ ಪಿಂಗಲಾಯ ಅಚ್ಛಚ್ಛಲೇನಮಃ (ಗಂಧಂ)

ಓಂ ಅಹಿ ಅಹಿಲಿಹಿಲಿ ಹಿಹಿಮಮಾಲಾಧರ ತೇಜೋಧಿಪತಯೇ

ನಮಃ (ಪುಷ್ಪಮಂತ್ರಃ)

ಓಂ ಜ್ವಲಿತಾರ್ಕಾಯನಮಃ (ಧೂಪಂ)

ಓಂ ಮಿಹಿರಾಯ ಚಿತ್ರಧಾರಿಣೇನಮಃ

ಓಂ ಅಂಗೇಭ್ಯೋನಮಃ

ಓಂ ಮಹಾಶ್ವೇತಾಯೈನಮಃ

ಓಂ ದಂಡಪಾಣಯೇನಮಃ

ಓಂ ಅರುಣಾದೇವ್ಯೈನಮಃ

ಓಂ ಪಿಂಗಲಾಯೈನಮಃ

ಓಂ ಅರುಣಾದಿಭ್ಯೋಹುಂನಮಃ

ಓಂ ಹರಿಕೇಶಾದಿ ರಶ್ಮಿಪತಿಭ್ಯೋನಮಃ

---

ಅನುಷ್ಠಾನಗಳನ್ನು ನೆರವೇರಿಸಬೇಕು. ಅನಂತರ ಈ ರೀತಿ ಭಗವಂತನನ್ನು ಧ್ಯಾನಮಾಡಬೇಕು.

ಓಂ ಪುಂಜಿಕಸ್ಥಲ್ಯಾದ್ಯಪ್ಸರೋಭ್ಯೋನಮಃ

ಓಂ ದೀಪ್ತಾನನಾದಿಕಿರಣೇಭ್ಯೋನಮಃ

ಓಂ ಕ್ಷುಪಾದಿಭೂತವಾತ್ಯಭ್ಯೋನಮಃ

ಓಂ ಗ್ರಹೇಭ್ಯೋಹುಂನಮಃ

ಓಂ ದಿಗ್ದೇವೇಭ್ಯೋನಮಃ

ಓಂ ತೇಜೋಧಿಪತಯೇನಮಃ (ದೀಪಮಂತ್ರಃ)

ಓಂ ಅರ್ಕಾಯ ಗೃಹಾಣಾವ್ಯತೇನಮಃ (ನೈವೇದ್ಯಮಂತ್ರಃ)

ಓಂ ಜಲಕುಂದಲಾಯ ದಿವ್ಯಾಶೋದ್ಯಭಿಪ್ರಿಯಾಯನಮಃ

(ಅರ್ಘ್ಯಮಂತ್ರಃ)

ಓಂ ಸುಷೋಲ್ಕಾಯ ಠಃ ಠಃ

ಓಂ ಅಂಶುಮತೇ ದೇವಾಯ ಗೋಪತಯೇ ಠಃ ಠಃ

(ಜಪನ್ಯಾಸಮಂತ್ರಃ)

ಓಂ ನಮಸ್ತೇ ದಿವ್ಯರೂಪಾಯ
ಸರ್ವಭೂತಾತ್ಮನೇ ನಮಃ
ಸರ್ವತೇಜೋಧಿಪತಯೇ
ಭಾನವೇ ಲೋಕಚಕ್ಷುಷೇ ನಮಃ

ಸ್ತೋತ್ರಂ ಪೂರ್ವೋಕ್ತೇನ ವಿಧಾನೇನ ತೇಜಃ ಪಿಂಡಂ ಪದೇ (ಠೇ) ದಿವೋ।
ಅಗ್ನಿಕ್ರಿಯಾಂ ಪ್ರಕುರ್ವೀತ ಸದ್ಯಃ ಸರ್ವಾರ್ಥಸಾಧನೀಂ ॥

---

ಶ್ರೇಷ್ಠವಾದ ಆಕಾರವುಳ್ಳವನೂ, ಸಕಲ ಪ್ರಾಣಿಗಳಲ್ಲಿ ಅಡಗಿರುವವನೂ, ಸಮಸ್ತ ತೇಜಸ್ಸುಗಳಿಗೂ ಅಧಿಪತಿಯೆನಿಸಿರುವವನೂ, ಕಿರಣಾತ್ಮಕನೂ, ಲೋಕಕ್ಕೆ ಕಣ್ಣಿನಂತಿರುವವನೂ, ಆದ ಸೂರ್ಯಭಗವಾನನಿಗೆ ನಮಸ್ಕಾರ ಎಂಬ ಸೂರ್ಯಸ್ತುತಿಯನ್ನು ಪೂಜಾಂತ್ಯದಲ್ಲಿ ಮಾಡಿ ಅನಂತರ ಸರ್ವಾರ್ಥಸಿದ್ಧಿಪ್ರದವಾದ ಅಗ್ನಿಕ್ರಿಯೆಯನ್ನು ನೆರವೇರಿಸಬೇಕು.

ಓಂ ಸಂಹರಸಂಹರವಿರೋಚನ ಠಃ ಠಃ (ಸಂಹಾರಮಂತ್ರಃ)
ಓಂ ಶಾಂತಾತ್ಮನೇ ಸರ್ವಲೋಕಪ್ರಿಯಾಯ ಠಃ ಠಃ
(ಶುದ್ಧಿಮಂತ್ರಃ)
ಓಂ ಖಖೋಲ್ಕಾಯ ವಿದ್ಮಹೇ
ಸಹಸ್ರಕಿರಣಾಯ ಧೀಮಹಿ
ತನ್ನೋ ರವಿಃ ಪ್ರಚೋದಯಾತ್ ಠಃ ಠಃ (ನಮಸ್ಕಾರಮಂತ್ರಃ)

॥ ಅರ್ಕಹೃದಯೇನ ದಾನಂ ॥

ಗಚ್ಛಾಗಚ್ಛಸ್ವವರ್ಗೇಣ ದ್ವಾದಶಾದಿತ್ಯವಿಗ್ರಹಃ ।
ಓಂ ಹಿಲಿಹಿಲಿಗಚ್ಛದೇವ ಯಥಾಗತಂ ಸ್ವಾಹಾ (ವಿಸರ್ಜನಮಂತ್ರಃ)
ಓಂ ಚಂಡಪಿಂಗಲಾಯ ಠಃ ಠಃ (ವಿಹಾರಮಂತ್ರಃ)
ಪದಪಿಂಡವಿಧಾನೇನ ಪೂಜಾ ನಿಗದಿತಾ ಪರಾ ।
ಭುಕ್ತಿಮುಕ್ತಿಪ್ರದಾ ಪುಣ್ಯಾ ಬಲಾರೋಗ್ಯಪ್ರದಾ ಸದಾ ॥

॥ ದ್ವಿತೀಯ ಪಿಂಡ ಪೂಜಾವಿಧಾನಂ ॥

ಪದೇನ ಪದಪಿಂಡೇನ ಉಕ್ತಾಃ ಪೂಜಾವಿಧಿರ್ಮಯಾ ।
ಸಂಕ್ಷೇಪೇಣ ಪರಂ ದೇವಂ ಕಥ್ಯಮಾನಂ ನಿಬೋಧ ಮೇ ॥

---

ವಿಸರ್ಜನ ಮಂತ್ರದಿಂದ ವಿಸರ್ಜನೆ ಮಾಡಬೇಕು.

ಪ್ರಾರ್ಥನಾ ಮಂತ್ರದಿಂದ ನಮಸ್ಕಾರಮಾಡಬೇಕು. ಅನಂತರ ಅರ್ಕಹೃದಯ ದಿಂದ ಧ್ಯಾನಮಾಡಬೇಕು.

ಇಲ್ಲಿನವರೆಗೆ ಪದಪಿಂಡ ವಿಧಾನಾತ್ಮಕವಾದ ಪ್ರಥಮಪೂಜೆಯು ತಿಳಿಸಲ್ಪಟ್ಟಿತು. ಇದು ಭಕ್ತರಿಗೆ ಭುಕ್ತಿಯನ್ನೂ ಮುಕ್ತಿಯನ್ನೂ ಐಹಿಕದಲ್ಲಿ ಬಲ ಆರೋಗ್ಯ, ಸುಕೃತ ಇವುಗಳನ್ನೂ ಕೊಡತಕ್ಕದ್ದಾಗಿರುವುದು.

ಇನ್ನು ಮುಂದೆ ಸಂಕ್ಷೇಪವಾಗಿ ದ್ವಿತೀಯಪಿಂಡಪೂಜಾವಿಧಾನವನ್ನು ವರ್ಣಿಸುವೆನು. ಕೇಳುವವನಾಗು.

ಓಂ ವಿಶ್ವಾತ್ಮನೇ ನಮಃ

ಓಂ ರಥಾಂಗೇಭ್ಯೋನಮಃ

ಓಂ ಖಷೋಲ್ಕಾಯ ಠಃ ಠಃ (ಮೂಲಮಂತ್ರಮಿದಂ)

ಓಂ ಅರ್ಕಾಯ ,, (ಹೃದಯಂ)

ಓಂ ದೀಪ್ತಾಯ ,, (ಶಿರಃ)

ಓಂ ಚಿಪಿಟಿಯೇ ,, (ಶೀರ್ಷಂ)

ಓಂ ಜಗಚ್ಚಕ್ಷುಷೇ ,, (ನೇತ್ರಂ)

ಓಂ ಪ್ರಭಾಕರಾಯ ಹುಂ (ಕವಚಂ)

ಓಂ ಮಹಾತೇಜಸೇ ಹುಂಫುಟ್ (ಅಸ್ತ್ರಂ)

ಓಂ ದೇವಾಂಗೇಭ್ಯೋನಮಃ

ಓಂ ಮಹಾಶ್ವೇತಾದಿಭ್ಯೋನಮಃ

ಓಂ ಅರುಣಾದಿಭ್ಯೋನಮಃ

ಓಂ ಹರಿಕೇಶಾದಿಭ್ಯೋನಮಃ

ಓಂ ಪುಂಜಿಕಸ್ಥಲ್ಯಾದಿಭ್ಯೋನಮಃ

ಓಂ ಗಣಾಧಿಪತಿಭ್ಯೋನಮಃ

ಓಂ ಛಾಯಾದಿತ್ಯೇಭ್ಯೋನಮಃ

ಓಂ ಗ್ರಹೇಭ್ಯೋಹುಂ ನಮಃ

ಓಂ ದಿಗ್ದೇವತೇಭ್ಯೋನಮಃ

---

ಈ ರೀತಿ ಹೇಳಿದ ನಾಮಮಂತ್ರಗಳಿಂದಲೇ ಆವಾಹನಾದಿ ಸಕಲ ಉಪಚಾರಗಳನ್ನೂ ಮನಸ್ಸಿನಲ್ಲಿಯೇ ಧ್ಯಾನಿಸಬೇಕು. ಅಂಗನ್ಯಾಸಾದಿಗಳಿಂದಲೇ ಪೂಜೆಯನ್ನು ಆರಂಭಮಾಡಿಕೊಂಡು, ಈ ಮಾನಸಿಕಪೂಜೆಯನ್ನು ಮುಗಿಸಬೇಕು.

ಹೃದಯೇನ್ನೈವ ಕರ್ತವ್ಯಂ ಸರ್ವಮಾವಾಹನಾದಿಕಂ ।
ಯೇವಾಸ್ಯಾಂನ್ಯೇತು (?) ಯೋ ತೇಷಾಂ ಮಂತ್ರೇಣೈವ ವಿಧೀಯತೇ ॥

ಇತಿ ಶ್ರೀ ಸಾಂಬಪುರಾಣೇ ಪೂಜಾವಿಧಾನಂ ನಾಮ
ಪಂಚಾಶತ್ತಮೋಧ್ಯಾಯಃ.

---

ಇಲ್ಲಿಗೆ ಸೂರ್ಯ ಪದಪಿಂಡಪೂಜಾವಿಧಾನಗಳನ್ನೂ ತದಂಗವಾದ
ಅಂಗನ್ಯಾಸಾದಿಗಳನ್ನೂ ವಿವರಿಸುವ ಶ್ರೀ ಸಾಂಬಪುರಾಣದ
ಐವತ್ತನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕಪಂಚಾಶೋಽಧ್ಯಾಯಃ

---

ಓಂ ಚಂದ್ರಾಯಹುಂ ನಮಃ

ಓಂ ಮಂಗಳಾಯಹುಂ ನಮಃ

ಓಂ ಬುಧಾಯಹುಂ ನಮಃ

ಓಂ ಬೃಹಸ್ಪತಯೇಹುಂ ನಮಃ

ಓಂ ಶುಕ್ರಾಯಹುಂ ನಮಃ

ಓಂ ಶನೈಶ್ಚರಾಯಹುಂ ನಮಃ

ಏತೇ ಗ್ರಹಾಣಾಂ ಮಂತ್ರಾಃ

ಓಂ ಇಂದ್ರಾಯ ಸುರಾಧಿಪತಯೇನಮಃ

ಓಂ ಅಗ್ನಯೇ ತೇಜೋಽಧಿಪತಯೇನಮಃ

ಓಂ ಯಮಾಯ ಪ್ರೇತಾಧಿಪತಯೇನಮಃ

ಓಂ ನಿರ್ಋತಯೇ ರಕ್ಷೋಽಧಿಪತಯೇನಮಃ

ಓಂ ವರುಣಾಯ ಜಲಾಧಿಪತಯೇನಮಃ

---

## ಐವತ್ತೊಂದನೆಯ ಅಧ್ಯಾಯ

ಇವು ನವಗ್ರಹಗಳನ್ನು ಧ್ಯಾನಿಸುವ ಮಂತ್ರಗಳು.

ಓಂ ವಾಯವೇ ಪ್ರಾಣಾಧಿಪತಯೇನಮಃ
ಓಂ ಕುಬೇರಾಯ ಯಕ್ಷಾಧಿಪತಯೇನಮಃ
ಓಂ ಶಂಕರಾಯ ಸರ್ವಾತ್ಮನೇನಮಃ
ಓಂ ವಿದ್ಯಾಧಿಪತಯೇ ನಮಃ
ಓಂ ಬ್ರಹ್ಮಣೇ ಸರ್ವಲೋಕಾಧಿಪತಯೇನಮಃ
ಓಂ ಶೇಷಾಯ ಸರ್ವನಾಗಾಧಿಪತಯೇನಮಃ

ಏತೇ ದಿಗ್ದೇವತಾನಾಂ ಮಂತ್ರಾಃ.

ಅತಃ ಪರಂ ಪ್ರವಕ್ಷ್ಯಾಮಿ ಸ್ನಾನಸ್ಯ ವಿಧಿಮುತ್ತಮಂ ।
ನಿರ್ಮಲೇ ಸಲಿಲೇ ಸ್ನಾಯಾತ್ಸ್ವತೀರ್ಥೇ ಹೃದಯಾದಿಭಿಃ ॥ ೧ ॥

ಮನಸಾ ಮೃದಮಂಗೇಷು ದತ್ವೈವ ಶಿರಸಾ ತಥಾ ।
ಧ್ಯಾತ್ವಾ ಪುಣ್ಯಾನಿ ತೀರ್ಥಾನಿವಗಾಹೇಚ್ಛಿರಸಾ ಜಲಂ ॥ ೨ ॥

ಧರ್ಮಾಸ್ತ್ರನೇತ್ರೈಃ ಕುರ್ವೀತ ಬ್ರಾಹ್ಮಣಾನ್ಮಂತ್ರಯೇತ್ತತಃ ।
ಪೂರಕಾಭ್ಯಾಂ ಖಖೋಲ್ಕೇನ ಅರ್ಕಮೀಕ್ಷೇತ ಸಪ್ತಧಾ ॥ ೩ ॥

---

ಇವು ಇಂದ್ರಾದಿ ಸಕಲದಿಕ್ಪಾಲಕರ ಮಂತ್ರಗಳು.

೧-೨. ಇನ್ನು ಮುಂದೆ ಸ್ನಾನಮಾಡುವ ವಿಧಾನವನ್ನು ವಿವರಿಸುವೆನು. ನಿರ್ಮಲವಾದ ಜಲದಲ್ಲಾಗಲೀ, ಪವಿತ್ರವಾದ ತೀರ್ಥಕ್ಷೇತ್ರಗಳಲ್ಲಾಗಲಿ, ಚಿತ್ತ ಶುದ್ಧಿಯಿಂದ ಸ್ನಾನಮಾಡಲು ಹೋಗಬೇಕು. ಶುದ್ಧವಾದ ಮೃತ್ತಿಕೆಯನ್ನು ಸರ್ವಾಂಗಗಳಿಗೂ ಸ್ಪರ್ಶಮಾಡಿಕೊಂಡು ಪುಣ್ಯತೀರ್ಥಗಳನ್ನೆಲ್ಲಾ ಮನಸ್ಸಿನಲ್ಲಿ ಸ್ಮರಣೆಮಾಡಿಕೊಳ್ಳುತ್ತಾ ಶಿರಃಪೂರ್ವಕವಾಗಿ ನೀರಿನಲ್ಲಿ ಮುಳುಗಬೇಕು.

೩-೪. ಮೂರು, ಐದು, ಒಂಬತ್ತು ಈ ಸಂಖ್ಯೆಯಲ್ಲಿ ಮುಳುಗಹಾಕ ಬೇಕು. ಅನಂತರ ಬ್ರಾಹ್ಮಣಮಂತ್ರಗಳನ್ನು ಪಠಿಸುತ್ತಾ ಮೂಲಮಂತ್ರವಾದ

ವಿನ್ಯಸೇನ್ಮಂತ್ರಸಂಯೋಗಂ ತ್ವಚಾಂಗುಷ್ಠಾದಿತಃ ಕ್ರಮಾತ್ ।
ತತಃ ಸ್ವಹಸ್ತತಲಯೋರರುಣಾದೀಂಶ್ಚ ಸಂಖ್ಯಾಯಾ । ॥ ೪ ॥

ಅಮೃತಾಖ್ಯಾಂ ತತೋಽಧ್ವಾಮುದ್ರಾಧ್ಯಾನಂ ಸಮಾಚರೇತ್ ।
ಜಾಠರಂ ಜ್ವಾಲಯೇದಗ್ನಿಂ ಪೂರಕಾಕುಲವಾಯುನಾ । ॥ ೫ ॥

ಕುಂಭಕೇನಾಪಿ ಸಂರುಧ್ಯಾತ್ರಿವಿಧಂ ಕಲ್ಮಷಂ ಹರೇತ್ ।
ರೇಚಕೇನ ಚ ನಿಷ್ಕ್ರಮ್ಯ ಹೃದಿ ಶುದ್ಧಿಂ ಸಮಾಚರೇತ್ । ॥ ೬ ॥

ಆಕೃಷ್ಯ ಪೂರಕೇಣಾರ್ಕಂ ತೇಜಃ ಪಿಂಡಂ ಪುನಃ ಪಿಬೇತ್ ।
ಖಖೋಲ್ಕೇನ ಚ ತತ್ತೇಜಃ ಸ್ವಮೂರ್ತ್ಯಾಂ ವಿನಿವೇಶಯೇತ್ । ॥ ೭ ॥

ಹೃದಯೇ ಮೂರ್ಧ್ನಿ ಮೂಲೇ ತು ನೇತ್ರವರ್ತ್ಮ ಕರೇಷು ಚ ।
ಹೃದಯಾದೀನಿ ಚಾಂಗಾನಿ ವಿನ್ಯಸೇತ್ತತ್ತ್ವಯೋಗತಃ । ॥ ೮ ॥

---

ಖಖೋಲ್ಕಾದಿಗಳನ್ನು ವಾಯುನಿರೋಧದಿಂದ ಜಪಿಸುತ್ತಾ, ಏಳುಸಾರಿ ಸೂರ್ಯ ದರ್ಶನಮಾಡಬೇಕು. ಅನಂತರ ಅಂಗುಷ್ಠಾದಿಯಾಗಿ ಹಿಂದೆ ಹೇಳಿದಂತೆ ಅಂಗ ನ್ಯಾಸಾದಿಗಳನ್ನೂ ಅರುಣಾದಿದೇವತೆಗಳ ಮಂತ್ರವನ್ನೂ ಪಠಿಸಬೇಕು.

೫-೬. ಅಮೃತಸ್ಥಾನದಿಂದ ಹೃದಯಕುಹರದಲ್ಲಿ ವಾಯುವನ್ನು ನಿಲ್ಲಿಸಿ ಹಿಂದೆಹೇಳಿದಂತೆ ಮುದ್ರಾಧ್ಯಾನಮಾಡುತ್ತಾ, ಜಠರಾಗ್ನಿಯಲ್ಲಿ ಪೂರಕಮಾಡಿದ ವಾಯುವಿನಿಂದ ಉದ್ವೇಗಗೊಳಿಸಿ ಕುಂಭಕಪ್ರಯತ್ನದಿಂದ ಅದನ್ನು ತಡೆಯಬೇಕು ಹೀಗೆ ಮಾಡುವುದರಿಂದ ತ್ರಿವಿಧವಾದ ಕಶ್ಮಲಗಳೂ ನಿವೃತ್ತಿಯಾಗುವುವು. ಅನಂತರ ರೇಚಕಪ್ರಯತ್ನದಿಂದ ಹೃದಿಸ್ಥವಾದ ವಾಯುವನ್ನು ತ್ಯಜಿಸಬೇಕು. ಇದರಿಂದ ಅಂತಃಶುದ್ಧಿಯು ಮನುಷ್ಯನಿಗೆ ಒದಗುವುದು.

೭-೮. ಅನಂತರ ಮತ್ತೆ ಪೂರಕದಿಂದ ವಾಯುವನ್ನು ಸಂಗ್ರಹಿಸಿ ತೇಜಃ ಪಿಂಡವಾದ ಸೂರ್ಯನನ್ನು, ಮತ್ತೆ ಖಖೋಲ್ಕಾದಿ ಮೂಲಮಂತ್ರಗಳಿಂದ ಧ್ಯಾನಿಸಬೇಕು. ತತ್ತ್ವಮಾರ್ಗದಲ್ಲಿ ತನ್ನ ಹೃದಯ, ಶಿರಸ್ಸು, ಮೂಲಭಾಗ ನೇತ್ರಗಳು, ಕೈ ಮುಂತಾದ ಅವಯವಗಳಲ್ಲಿ ಆ ತೇಜೋಮೂರ್ತಿಯ ಅವಯವಗಳನ್ನು ವಿನ್ಯಾಸಮಾಡಿಕೊಳ್ಳಬೇಕು.

ಸುಶುಭೇ ದ್ವಾದಶದಲೇ ಕಮಲೇ ಚ ಸ್ಥಿತಂ ತದಾ ।
ಆತ್ಮಾನಂ ಚಿಂತಯೇದ್ಯುಕ್ತಃ ಶುದ್ಧಚಾಮೀಕರಪ್ರಭಂ । ॥ ೯ ॥

ಏವಂ ಕೃತ್ವೈವ ಚಾತ್ಮಾನಂ ಮಂತ್ರಮುದ್ರಾದಿಯೋಗತಃ ।
ತತಃ ಪರಮಯಾ ಭಕ್ತ್ಯಾ ತದಾ ಪೂಜಾಂ ಸಮಾಚರೇತ್ ॥ ೧೦ ॥

ಕಾಷ್ಠೈಃ ಕಾಷ್ಠಂ ವಿನಿರ್ಮಥ್ಯ ಮಣೇರ್ವಾ ತಾಪದರ್ಶನಾತ್ ।
ಆಕೃಷ್ಯತೇ ಯಥಾ ವಹ್ನಿಃ ಕ್ರಿಯಾಶೇಷಕರಃ ಕ್ಷಮಃ ॥ ೧೧ ॥

ತದ್ವನ್ಮಂತ್ರಾದಿಯೋಗೇನ ನಿಷ್ಕಲಾತ್ಸಕಲೋ ರವಿಃ ।
ಆಹೂಯ ಪೂಜಯೇತ್ಸಮ್ಯಕ್ ಯೋಗಾಂಗೋ ಹೃಷ್ಟಮಾನಸಃ॥ ೧೨ ॥

ಮಿತ್ರಾಲಯೇ ನದೀತೀರೇ ಗೋಷ್ಠೇಷೂಪವನೇಷು ಚ ।
ಪ್ರಫುಲ್ಲಪದ್ಮಖಂಡೇಷು ನದೇಷು ಸರಸೀಷು ಚ ॥ ೧೩ ॥

---

೯-೧೦. ಅನಂತರ ತನ್ನ ದ್ವಾದಶದಲಾತ್ಮಕವಾದ ದ್ವಾದಶಾರಚಕ್ರದಲ್ಲಿ ಶುದ್ಧಚಿನ್ನದಂತೆ ಸ್ವಚ್ಛವಾದ ಕಾಂತಿಯುಳ್ಳ ಆತ್ಮರೂಪಿಯಾದ ಸೂರ್ಯದೇವನು ನೆಲಸಿರುವನೆಂದು ಧ್ಯಾನಿಸಬೇಕು. ಆಮೇಲೆ ಮಂತ್ರಮುದ್ರಾದಿಗಳನ್ನು ಅನುಷ್ಠಿಸಿ, ಅತಿಶಯವಾದ ಭಕ್ತಿಯಿಂದ ಪೂಜಾರಂಭಮಾಡಬೇಕು.

೧೧-೧೨. ಸಕಲ ಕರ್ಮಗಳಿಗೂ ಮುಖ್ಯಭೂತವಾದ ಅಗ್ನಿಯು ಹೇಗೆ ಅರಣಿಗಳ (ಬನ್ನೀಮರಗಳ) ಮಂಥನದಿಂದ ವಾಯುಸಂಯೋಗವಾಗಿ ಆವಿರ್ಭವಿಸು ವುದೋ, ಹಾಗೆಯೇ ನಿಷ್ಕಲವಾದ ಮಂತ್ರಗಳ ಪುರಶ್ಚರಣೆಯಿಂದ ಕಲಾವಿಶಿಷ್ಟವಾದ ಸೂರ್ಯನು ಆವಿರ್ಭವಿಸುವನು. ಹೀಗೆ ಧ್ಯಾನಮಾರ್ಗದಿಂದ ಸೂರ್ಯನನ್ನು ಆಹ್ವಾನಿಸಿ, ಪೂಜಿಸಬೇಕು.

೧೩-೧೫. ಮಿತ್ರಕ್ಷೇತ್ರ, ನದೀತೀರ, ಗೋವುಗಳ ನಿವಾಸಸ್ಥಾನ, ಉದ್ಯಾನ ವನ, ಪದ್ಮಸರೋವರಪ್ರಾಂತ, ನದಿಗಳು, ಸರೋವರಗಳು, ಸಂಗಮಸ್ಥಾನಗಳು, ಇತರತೀರ್ಥಕ್ಷೇತ್ರಗಳು ಪರ್ವತ, ಅರಣ್ಯ, ಧರ್ಮಛತ್ರ, ದರ್ಭೆ, ಹೂವು, ಹಣ್ಣು

ನದೀನಾಂ ಸಂಗಮೇ ತೀರ್ಥೇ ಪರ್ವತೇಷು ವನೇಷು ಚ ।
ಧರ್ಮಪೃಷ್ಠೇ ಸಮೇ ದೇಶೇ ಕುಶಪುಷ್ಪಫಲಾನ್ವಿತೇ ॥ ೧೪ ॥

ಅನೂಖರೇ ಪ್ರಕೃಷ್ಟೇ ತು ಪ್ರಾಗುದಕ್ಪ್ರವಣೇ ಶುಭೇ ।
ಯತ್ರ ವಾ ರಮತೇ ಯೇ ಚ ತತ್ರ ಪೂಜಾ ವಿಧೀಯತೇ ॥ ೧೫ ॥

ಭೂಮ್ಯರ್ಕಾನಲತೋಯೇಷು ಪ್ರತಿಮಾಯಾಂ ಮಹಾಧ್ವರೇ ।
ಕಾಂಚನಂ ತಾಮ್ರಪಾತ್ರೇ ವಾ ಕುರ್ಯಾತ್ಪೂಜಾಂ ವಟೇಥ ವಾ ॥ ೧೬ ॥

ವಿನಾ ಮಂತ್ರಸಿಧಾನೇನ ಪೂಜಾ ವ್ಯರ್ಥಾ ನೃಣಾಂ ಭವೇತ್ ।
ಸಾ ಚೈವ ಸನಮಸ್ಕಾರಾ ಕರ್ತುಃ ಶತಗುಣಾ ಭವೇತ್ ॥ ೧೭ ॥

ಕನೀಯಾಂಸ್ತು ವಿಧಿರ್ಮಂತ್ರೋ ಮಧ್ಯಮೋ ವಾ ತಥೋತ್ತಮಃ ।
ಸಹಸ್ರಲಕ್ಷಕೋಟಿಸ್ತು ಕ್ರಮಶಃ ಫಲಮಾಹರೇತ್ ॥ ೧೮ ॥

---

ಇವುಗಳಿಂದ ಕೂಡಿರುವ ಪ್ರದೇಶಗಳು, ಸಸ್ಯಸಮೃದ್ಧವಾದ ಪ್ರದೇಶಗಳು, ಪೂರ್ವ ಮತ್ತು ಉತ್ತರದಿಕ್ಕುಗಳಲ್ಲಿ ಎತ್ತರವಾದ ಭಾಗಗಳಿರುವಸ್ಥಳ, ಅಥವಾ ಎಲ್ಲಿ ಮನಸ್ಸಿಗೆ ಆನಂದವು ತೋರಿಬರುವುದೋ ಆ ಪ್ರದೇಶಗಳಲ್ಲೆಲ್ಲಾ ಸೂರ್ಯದೇವನ ಅರ್ಚನೆಮಾಡಬಹುದು.

೧೬-೧೭. ಸೂರ್ಯಾರಾಧನೆಯನ್ನು ಮಾಡುವಾಗ ತೇಜೋಮೂರ್ತಿಯಾದ ಸೂರ್ಯದೇವನನ್ನು, ಭೂಮಿ, ಪ್ರತ್ಯಕ್ಷಸೂರ್ಯಬಿಂಬ, ಅಗ್ನಿ. ನೀರು. ಪ್ರತಿಮೆ, ಮಹಾಯಾಗ, ಸುವರ್ಣಪಾತ್ರೆ, ಅಥವಾ ತಾಮ್ರಪಾತ್ರೆ, ಆಲದಮರ, ಇವುಗಳಲ್ಲಿ ಆವಾಹನೆಮಾಡಿ ಪೂಜಿಸಬಹುದು. ಮಂತ್ರಪುರಶ್ಚರಣೆಯಿಲ್ಲದೆ ಅಮಂತ್ರಕವಾದ ಪೂಜೆಯು ಸಫಲವೆನಿಸಲಾರದು. ಅದರಲ್ಲಿಯೂ ನಮಸ್ಕಾರಸಹಿತವಾದ ಸೂರ್ಯ ಪೂಜೆಯು ಶತಗುಣಾಧಿಕವಾಗಿ ಫಲಪ್ರದವಾಗುವುದರಲ್ಲಿ ಸಂಶಯವಿಲ್ಲ.

೧೮-೧೯. ನಮಸ್ಕಾರಪೂರ್ವಕವಾದ ಆರಾಧನೆಯಲ್ಲಿ ಮಂತ್ರವಿಧಿಯು, ಕನಿಷ್ಠವಾಗಿರಲಿ, ಮಧ್ಯಮವಾಗಿರಲಿ, ಉತ್ತಮವೇ ಆಗಿರಲಿ, ಅಂತಹ ಪೂಜಾ

ಪ್ರತ್ಯೇಕಂ ಮಂತ್ರಜಾಪೇನ ಪೂಜಾವಿಧಿರಿಹೋತ್ತಮಃ ।
ಮಧ್ಯಮಃ ಪಾದಪಿಂಡೇನ ಕನೀಯಾನ್ ಪಿಂಡಏವ ಚ ॥ ೧೯ ॥

ವ್ಯೋಮಾಕೃತೋ ವ್ಯೋಮಶಿಖೋ ಮುದ್ರಾನಾಹನಕರ್ಮಣಿ ।
ಗಮನೇ ಚ ಖಖೋಲ್ಕಸ್ಯ ಶೋಷಣೇ ತೃಪ್ತಿರಕ್ಷಯಾ ॥ ೨೦ ॥

ರಥಸ್ಯ ಚ ರಥಾದೀನಾಂ ದಿಗೀಶಾನಾಂ ಸಮುದ್ರಯಾ ।
ಉತ್ತಮೋ ಹಿ ವಿಧಿರ್ಮಧ್ಯಃ ಕನೀಯಾನ್ ಶಾಲಪದ್ಮಯಾ ॥ ೨೧ ॥

ಆಗಮಃ ಸ್ಥಾಪನಂ ರೋಧಃ ಸಾನ್ನಿಧ್ಯಂ ಪಾದ್ಯಮೇವ ಚ ।
ಅರ್ಘಃ ಸ್ನಾನಂ ತಥಾ ವಾಸೋ ಲೇಪನಂ ಕುಸುಮಾನಿ ಚ ॥ ೨೨ ॥

---

ಫಲವು ಕ್ರಮವಾಗಿ ಸಹಸ್ರಪಾಲು, ಲಕ್ಷಪಾಲು, ಕೋಟಿಪಾಲು ಫಲವನ್ನು ಹೆಚ್ಚಾಗಿ ಕೊಡುವುದು. ಮಂತ್ರಜಪ ವಿಶಿಷ್ಟವಾದ ಪೂಜೆ ಉತ್ತಮವೆನಿಸುವುದು. ಅದರಲ್ಲಿ ಪಾದಪಿಂಡ ಅಂದರೆ ಹಿಂದೆ ಹೇಳಿದ ಮಂತ್ರಪುರಶ್ಚರಣೆಯ ಪೂಜೆಯು ಮಧ್ಯಮವೆಂದೂ, ಕೇವಲ ತೇಜಃಪಿಂಡಸ್ಮರಣೆಯು ಕನಿಷ್ಠವಾದದ್ದೆಂದೂ ತಿಳಿಯ ಬಹುದಾಗಿದೆ.

೨೦-೨೧. ಸೂರ್ಯಮುದ್ರೆಗಳನ್ನು ನಡೆಸುವಾಗ ಸೂರ್ಯಾವಾಹನಮಾಡುವಾಗ ಪರಮಾತ್ಮನು ವ್ಯೋಮಾಕಾರನೆಂದೂ, ವ್ಯೋಮಶಿಖನೆಂದೂ, ಭಾವಿಸಬೇಕು. ಖಖೋಲ್ಕ ಮೂಲಮಂತ್ರದ ಮುದ್ರೆಯಿಂದ ದೇಹವು ಶುದ್ಧಿಯಾಗುವುದಲ್ಲದೆ ಅಕ್ಷಯವಾದ ತೃಪ್ತಿಯೂ ಉಂಟಾಗುವುದು. ಹಾಗೆಯೇ ರಥಾದಿಯಾಗಿ ಹಿಂದೆ ಹೇಳಿದ ಮುದ್ರೆಗಳನ್ನೂ, ದಿಗೀಶ್ವರರ ಮುದ್ರೆಗಳನ್ನೂ ಆಯಾ ಕಾಲದಲ್ಲಿ ಆಚರಿಸಿ, ಉತ್ತಮ ಅಥವಾ ಮಧ್ಯಮ ರೀತಿಯಿಂದಲಾದರೂ ಮುಂದೆಹೇಳುವಂತೆ ಪೂಜಾದಿ ಗಳನ್ನು ನಡೆಸಬೇಕು.

೨೨-೨೩. ಆಗಮ, ಸ್ಥಾಪನ, ರೋಧ, (ಪ್ರಾಣವಾಯು,) ದೇವಸಾನ್ನಿಧ್ಯ ವನ್ನು ಇಷ್ಟವಸ್ತುವಿನಲ್ಲಿ ಕಲ್ಪಿಸುವುದು, ಪಾದ್ಯ, ಅರ್ಘ್ಯ, ಸ್ನಾನ, ವಸ್ತ್ರಧಾರಣೆ

ಧೂಪಂ ವಿಭೂಷಣಂ ಚೈವ ತಥಾಙ್ಗೇಷಾಂ ಚ ಪೂಜನಂ ।
ಅಂಗಾದೀನಾಂ ಚ ದೇವಾನಾಂ ಶೇಷಾಂಶ್ಚಾನ್ಯಾನ್ಯಥಾಕ್ರಮಂ ॥ ೨೩ ॥

ದೀಪಂ ಬಲಿಮಥಾತೋಽರ್ಘ್ಯಂ ಜಪಂ ನ್ಯಾಸಂ ಸ್ತವಂ ತಥಾ ।
ಅಗ್ನಿಕ್ರಿಯಾಂ ಚ ಸಂಹಾರಂ ಶುದ್ಧಿಪಾತಂ ವಿಹಾರಣಂ ॥ ೨೪ ॥

ವಿಸರ್ಜನಂ ಚ ನಿರ್ಹಾರಂ ಕುರ್ಯಾತ್ಸರ್ವಂ ಪೃಥಕ್ಪೃಥಕ್ ।
ಮಂತ್ರೈರ್ಯಥೋದಿತೈಃ ಸ್ವೈಸ್ವೈರ್ಭಕ್ತ್ಯಾ ಪರಮಯಾನ್ವಿತಃ ॥ ೨೫ ॥

ನಿಷ್ಕಲಂ ಸಕಲೀಕೃತ್ಯ ಮಂತ್ರೇಣಾಹ್ವಾನಯೇತ್ತತಃ ।
ಆಹೂಯಂತೇ ಹಿ ಯದ್ದೇವಮಾಗಮಸ್ಸಉದಾಹೃತಃ ॥ ೨೬ ॥

ಉಪವೇಶನಂ ಚ ಕಮಲೇ ತಸ್ಯೈವ ಸ್ಥಾಪನಂ ವಿದುಃ ।
ವಿಘಾತೋಽನ್ಯತ್ರ ಗಮನೇ ರೋಧೋಽಸೌ ಪರಿಕೀರ್ತಿತಃ ॥ ೨೭ ॥

---

ಗಂಧಲೇಪನ, ಕುಸುಮಾಲಂಕಾರ, ಧೂಪ, ಆಭರಣ, ಅಂಗಪೂಜಾ, ಇವೇ ಮೊದಲಾದ ಉಪಚಾರಗಳಿಂದ ಯಥಾವಿಧಿಯಾಗಿ ಅರ್ಚಿಸಬೇಕು.

೨೪-೨೫. ಅನಂತರ ದೀಪ, ನಿವೇದನ, ಅರ್ಘ್ಯ, ಜಪ, ನ್ಯಾಸ, ಸ್ತುತಿ, ಹಿಂದೆ ಹೇಳಿದಂತೆ ಅಗ್ನಿಕ್ರಿಯೇ, ಸಂಹಾರ, ಶುದ್ಧಿಪಾತ, ವಿಹಾರ, ವಿಸರ್ಜನೆ, ನಿರ್ಹಾರ ಇವೇ ಮೊದಲಾದ ಪೂಜಾಕರ್ಮಗಳನ್ನು ಆಯಾಯಾ ಕರ್ಮಗಳಿಗೆ ಹೇಳಿದ ಮಂತ್ರಗಳನ್ನುಚ್ಚರಿಸುತ್ತಾ ಅತಿಶಯವಾದ ಭಕ್ತಿಯಿಂದ ನೆರವೇರಿಸಬೇಕು.

೨೬-೨೭. ಆಗಮವೆಂದರೇ ಕಲಾರಹಿತನಾದ ಪರಮಾತ್ಮನನ್ನು ಕಲಾವಂತನನ್ನಾಗಿ ತಿಳಿದು, ಮಂತ್ರಗಳಿಂದ ಆಹ್ವಾನಿಸುವುದು. ಅದೇ ಸೂರ್ಯಮೂರ್ತಿಯನ್ನು ತನ್ನ ಹೃದಯ ಕಮಲದಲ್ಲಿ ನಿಲ್ಲಿಸುವುದೇ ಸ್ಥಾಪನ. ತನ್ನ ಮನಸ್ಸು ಅನ್ಯತ್ರ ಹೋಗದಂತೆ ತಡೆಯುವುದೇ ರೋಧ ಎಂದು ಹೇಳಲ್ಪಟ್ಟಿದೆ

ಏಕಾಗ್ರಮನಸಃ ಸ್ಥಾನಂ ಯತ್ರ ಸಾನ್ನಿಧ್ಯಮುಚ್ಯತೇ ।
ಪಾದಯೋಸ್ಸಲಿಲೈಸ್ಸದ್ಭಿಃ ಪಾದ್ಯಂ ದೇವಸ್ಯ ಕಥ್ಯತೇ ॥ ೨೮ ॥

ಹೇಮಪಾತ್ರೇ ಕಥಾ ತಾಮ್ರೇ ಚಂದನೋದಕಸಂಮಿತೇ ।
ಆದಾಯ ಸಲಿಲಂ ಪುಷ್ಪಂ ಹಸ್ತಾಭ್ಯಾಂ ಪರಿಗೃಹ್ಯ ಚ ॥ ೨೯ ॥

ಜಾನುಭ್ಯಾಂ ಧರಣೀಂ ಗತ್ವಾ ದದ್ಯಾದರ್ಘ್ಯಂ ಗಭಸ್ತಿನೇ ।
ದೇಯಂ ಚಂದನಪಂಕೇನ ಕುಂಕುಮೇನ ಚ ಲೇಪನಂ ॥ ೩೦ ॥

ರಕ್ತರಾಜೀವಪುಷ್ಪಾದ್ಯೈರಮ್ಲಾನೈಃ ಸುಸುಗಂಧಿಭಿಃ ।
ಪೂಜಾಂ ಚ ಕುಟ್ಮಲೈಃ ಕುರ್ಯಾದ್ಗಂಧಧೂಪಾದಿವಾಸಿತೈಃ ॥ ೩೧ ॥

ಕರ್ಪೂರಗುಗ್ಗುಲುಶ್ಚೈವ ಹ್ಯುಶೀರಾಗುರುಚಂದನೈಃ ।
ತುರುಷ್ಕಸಾರೈಃ ಸರ್ಜೈರ್ವಾ ಧೂಪೋ ದೇಯಃ ಸುಗಂಧಿಭಿಃ ॥ ೩೨ ॥

---

೨೮-೩೦. ಏಕಾಗ್ರತೆಯಿಂದಿರುವ ಮನಸ್ಸಿನಲ್ಲಿ ಭಗವಂತನನ್ನು ನಿಲ್ಲಿಸುವುದೇ ಸಾನ್ನಿಧ್ಯ. ಪರಮಾತ್ಮನ ಕಾಲುಗಳನ್ನು ಶುದ್ಧೋದಕದಿಂದ ತೊಳೆಯುವುದೇ ಪಾದ್ಯ. ಅರ್ಘ್ಯವೆಂದರೆ ಚಿನ್ನದ ಅಥವಾ ತಾಮ್ರದ ಪಾತ್ರೆಯಲ್ಲಿ ಗಂಧೋದಕವನ್ನೂ, ಪುಷ್ಪವನ್ನೂ ಹಾಕಿ, ಮೊಳಕಾಲೂರಿ ಎರಡುಕೈಗಳಿಂದಲೂ ಆ ನೀರನ್ನು ಅರ್ಪಿಸುವುದು. ಚಂದನ ಗಂಧದಿಂದಲೂ, ಕುಂಕುಮಕೇಸರಿಯಿಂದಲೂ ಲೇಪನವೊಡುವುದನ್ನೇ ಲೇಪನವೆನ್ನುವರು.

೩೧. ಪುಷ್ಪಾರ್ಚನೆಯೆಂದರೆ ಬಾಡದ ಸುಗಂಧಪೂರಿತವಾಗಿರುವ ಕೆಂಪು ಕಮಲಗಳನ್ನೂ, ಗಂಧಧೂಪಾದಿಗಳಿಂದ ಗಮಗಮಿಸುವ ಅರಳು ಮೊಗ್ಗುಗಳನ್ನೂ ಭಗವಂತನಿಗೆ ಅರ್ಪಿಸುವುದು.

೩೨-೩೩. ಅನಂತರ ಕರ್ಪೂರ, ಗುಗ್ಗುಲು, ಲಾಮಂಚ, ಅಗುರು, ಚಂದನ ತುರುಷ್ಕಸಾರ, ಸರ್ಜ ಇವೇ ಮೊದಲಾದ ಸುಗಂಧದ್ರವ್ಯಗಳಿಂದ ಸೇರಿಸಿದ ದಶಾಂಗ

ರತ್ನೈರನೇಕೈರ್ನಿರ್ವಿಧೈಃ ಶಾತಕುಂಭಾದಿಭೂಷಣೈಃ ।
ಖಖೋಲ್ಕಂ ಭೂಷಯೇದೇವ ಹೃದಯೈರ್ಮನಸಾ ರವಿಂ ॥ ३३ ॥

ಅಂಗಾದೀನಾಂ ಚ ಸರ್ವೇಷಾಂ ದೇವತಾನಾಂ ಯಥಾವಿಧಿ ।
ಪೂಜನಂ ಚ ವಿಧಾತವ್ಯಂ ಸುಪುಷ್ಪೈಶ್ಚಂದನಾಂಬುಭಿಃ ॥ ३४ ॥

ಷಷ್ಟಿಪ್ರದೀಪಾನ್ ಸುಬಹೂನ್ ದದ್ಯಾದರ್ಕಾಯ ಶಕ್ತಿತಃ ।
ಶಂಖಾದಿನಿರ್ಮಿತೈರ್ಘೋಷೈರ್ದಿವ್ಯಗೋಧಾರನಿಸ್ವನೈಃ ॥ ३५ ॥

ವೇಣುವೀಣಾಸ್ವನೈರ್ಘೋಷೈಃ ಪೂಜಯೇನ್ಮಿಹಿರಂ ಶುಭಂ ।
ವಕ್ಷ್ಯಮಾಣವಿಧಾನೇನ ಶ್ರದ್ಧಯಾಃ ಸುಮನೋಗತಂ ॥ ३६ ॥

ಖಖೋಲ್ಕಮೂಲಮಂತ್ರಂ ಚ ಜಪೇಚ್ಚೈವ ಸುಯತ್ನತಃ ।
ಸರ್ವಂ ಪಾದ್ಯಾದಿಕಾಂ ಪೂಜಾಂ ಜಪಂ ತ್ರಿವಿಧಮೇವ ಚ ॥ ३७ ॥

---

ದಿಂದ ಧೂಪವನ್ನರ್ಪಿಸಬೇಕು. ಅನಂತರ ಅನೇಕ ರತ್ನಗಳಿಂದ ನಿರ್ಮಿತವಾಗಿರುವ ಸುವರ್ಣಾಭರಣಗಳನ್ನು ಖಖೋಲ್ಕಾದಿ ಮೂಲಮಂತ್ರ ಪ್ರತಿಪಾದ್ಯನಾದ ಸೂರ್ಯ ದೇವನಿಗೆ ಮನಸ್ಸಿನಿಂದಲೇ ಅರ್ಪಿಸಬೇಕು.

३४-३५. ವಿಧಿವತ್ತಾಗಿ ಹಿಂದೆಹೇಳಿದಂತೆ ಸೂರ್ಯದೇವನ ಅಂಗದೇವತೆ ಗಳಿಗೆಲ್ಲಾ ಗಂಧಪುಷ್ಪಾಕ್ಷತೋದಕಗಳಿಂದ ಪೂಜಿಸಬೇಕು. ಸೂರ್ಯನಿಗೆ ಅರುವತ್ತು ದೀಪಗಳನ್ನು ಹೊತ್ತಿಸಿ, ನೀರಾಜನಮಾಡಬೇಕು. ಶಂಖವೇ ಮೊದಲಾದ ಸಕಲ ವಾದ್ಯಧ್ವನಿಯನ್ನು ನೀರಾಜನಕಾಲದಲ್ಲಿ ಮೊಳಗಿಸಬೇಕು.

३६-३७. ಕೊಳಲು, ವೀಣೆ ಮೊದಲಾದ ವಾದ್ಯಗಳ ಧ್ವನಿಯಿಂದ ಸೂರ್ಯ ದೇವನನ್ನು ಆರಾಧಿಸಬೇಕು. ಮತ್ತು ಮುಂದೆಹೇಳುವಂತೆ ಖಖೋಲ್ಕಾದಿ ಮಂತ್ರ ಜಪಪುರಸ್ಸರವಾಗಿ ವಾದ್ಯಾದಿಪೂಜೆಯನ್ನು ಸೂರ್ಯದೇವನಿಗೆ ಸಲ್ಲಿಸಬೇಕು.

ನ್ಯಾಸಃ ಖಖೋಲ್ಕಹೃದಯಂ ರಥಾಂಗಾನಾಂ ಪ್ರಕೀರ್ತಿತಂ ।
ಗುಣವಿಗ್ರಹಯೋಃ ಸಮ್ಯಗ್ವರ್ಣನಂ ಸ್ತವಮುಚ್ಯತೇ ॥ ೩೮ ॥

ಮಂತ್ರಮುದ್ರಾವಿಯೋಗೇನ ದ್ರವ್ಯೈರಾಜ್ಯಾದಿಭಿಶ್ಶುಭೈಃ ।
ಉದ್ದಿಷ್ಟಂ ದೇವಯಜನಂ ವಷಟ್ ಸ್ವಾಹಾಂತಸಂಯುತಂ ॥ ೩೯ ॥

ಅಗ್ನಾವಿಯಂ ಸಮುದ್ದಿಷ್ಟಾಂ ನಿಖಿಲಾಗ್ನಿಕ್ರಿಯಾಂ ಸುರಾಃ ।
ಕೃತೇ ಪೂಜಾವಿಧಾನೇನ ವಿಪ್ರಕೀರ್ಣೇ ಚ ಚೇತಸಿ ॥ ೪೦ ॥

ಸಂಹೃತಿಃ ಕ್ರಿಯತೇ ಯತ್ರ ಸಂಹಾರಂ ತಂ ವಿನಿರ್ದಿಶೇತ್ ।
ಪೂಜಾವಿಧಾನೇ ಸರ್ವಸ್ಮಿನ್ ದ್ರವ್ಯಮುದ್ರಾದಿಹಾನಿತಃ ॥ ೪೧ ॥

---

೩೮. ಖಖೋಲ್ಕ ಎಂಬ ಮೂಲಮಂತ್ರಗಳನ್ನು, ರಥಾಂಗಾದಿ ಮುದ್ರಾವಿನ್ಯಾಸಗಳನ್ನೂ ಆಚರಿಸಿ, ಪುರಶ್ಚರಣೆ ಮಾಡುವುದಕ್ಕೆ ನ್ಯಾಸವೆಂದು ಹೆಸರು. ಸ್ವಾಮಿಯ ಗುಣವನ್ನಾಗಲೀ, ಆಕೃತಿಯನ್ನಾಗಲೀ, ವರ್ಣಿಸುವುದಕ್ಕೆ ಸ್ತವವೆಂದು ಹೆಸರು.

೩೯-೪೦. ಅಗ್ನಿಕ್ರಿಯೆಯೆಂದರೆ ಮಂತ್ರಮುದ್ರಾದಿಗಳನ್ನು ಬಿಟ್ಟು, ವಷಟ್ ಸ್ವಾಹಾಂತವಾದ ದೇವಮಂತ್ರಗಳಿಂದ, ತುಪ್ಪವೇಮೊದಲಾದ ಹೋಮದ್ರವ್ಯಗಳನ್ನು ಅಗ್ನಿಯಲ್ಲಿ ದೇವತೋದ್ದೇಶಕವಾಗಿ ಅರ್ಪಿಸುವುದು.

೪೧-೪೨. ಪೂಜಾವಿಧಾನಗಳಲ್ಲಿಟ್ಟ ಮನಸ್ಸು ಚದುರಿಹೋಗಿರುವುದನ್ನು ಮತ್ತೆ ಸ್ಥಿರವಾಗಿ ನಿಲ್ಲಿಸಿಕೊಂಡು, ದೇವನನ್ನು ಧ್ಯಾನಿಸುವುದಕ್ಕೆ ಸಂಹಾರವೆಂದು ಹೆಸರು. ಈ ಸಂಹಾರದಿಂದ ದೇಹಜನ್ಯವಾದ ದೋಷಗಳು ನಿವೃತ್ತಿಯಾಗಿ ದೇಹವು ಶುದ್ಧಿಯಾಗುವುದು. ಇದಾದ ನಂತರ ನಮಸ್ಕಾರಮಾಡಬೇಕು. ನಮಸ್ಕಾರವು ಶಿರಸ್ಸಿನಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ, ದೃಷ್ಟಿಯಿಂದಲೂ, ಶುದ್ಧಮನಸ್ಸಿನಿಂದಲೂ, ಮೊಣಕಾಲುಗಳಿಂದಲೂ, ಕೈಗಳಿಂದಲೂ ಕೂಡಿ ಆಗುವುದು.

**ಯಃ ಕಶ್ಚಿತ್ತನುಜೋ ದೋಷೋ ವಿಶುದ್ಧ್ಯಾ ತಂ ಸಮುನ್ನಯೇತ್ ।**
**ಶಿರಸಾ ಮನಸಾ ವಾಚಾ ದೃಷ್ಟ್ಯಾ ಬುದ್ಧ್ಯಾ ಚ ಶುದ್ಧಯಾ ॥ ೪೨ ॥**

**ಜಾನುಭ್ಯಾಮಥ ಪಾಣಿಭ್ಯಾಂ ಪ್ರಣಿಪಾತೋ ಹಿ ಸಪ್ತಧಾ ।**
**ಸಪ್ತಸಪ್ತಿಸಮುದ್ದೇಶಾದ್ದದ್ಯಾದ್ವಿಪ್ರಾಯ ಶಕ್ತಿತಃ ॥ ೪೩ ॥**

**ದಾನಂ ಗುಣವತೇ ದೇಯಮಿದಂ ವಿತರಣಂ ಸ್ಮೃತಂ ।**
**ಸಕಲೀಕೃತವಿವಾಥ ನಿಷ್ಕಲೀಕರಣಾತ್ಮನಃ ॥ ೪೪ ॥**

**ವಿಸರ್ಜನೇನ ಮಂತ್ರೇಣ ಪ್ರಾಪ್ನೋತಿ ಪುರುಷೋತ್ತಮಂ ।**
**ಯಜತಃ ಕುಸುಮಸ್ತೋಕಂ ಗೃಹೀತ್ವಾ ಹೋಮಭಸ್ಮ ಚ ॥ ೪೫ ॥**

**ನಿಕ್ಷಿಪೇದ್ದಿಶಿ ಕೌಬೇರ್ಯಾಂ ನಿರ್ಹಾರೋಯಮುದಾಹೃತಃ ।**
**ಆಗಮಾದ್ಯಾ ತು ಯಾ ಪೂಜಾ ಸಾನಂದಾ ಪರಿಕೀರ್ತಿತಾ ॥ ೪೬ ॥**

---

ಮತ್ತು ಈ ಏಳು ಸಾಧನಗಳಿಂದ ನಡೆಸಲ್ಪಡುವ ನಮಸ್ಕಾರವನ್ನೇ ಏಳು ವಿಧವಾದುದೆಂದು ತಿಳಿಯಬೇಕು.

೪೩-೪೪. ಸೂರ್ಯಪ್ರೀತ್ಯರ್ಥವಾಗಿ, ಗುಣವಂತನಾದ ಬ್ರಾಹ್ಮಣನಿಗೆ ಕೊಡುವ ದಾನಕ್ಕೇ ವಿತರಣವೆಂದು ಹೆಸರು. ಅನಂತರ ಪೂಜೋದ್ದೇಶಕವಾಗಿ ಕಲಾಸಹಿತನನ್ನಾಗಿ ಭಾವಿಸಿದ ಸೂರ್ಯದೇವನನ್ನು ನಿಷ್ಕಲೀಕರಣನನ್ನಾಗಿ ಮಾಡುವುದಕ್ಕೆ ವಿಸರ್ಜನೆ ಎಂದು ಹೆಸರು.

೪೫-೪೬. ಆ ವಿಸರ್ಜನೆಯನ್ನು ಮಂತ್ರಪೂರ್ವಕವಾಗಿ ಮಾಡಬೇಕು ಪೂಜಾನಂತರದಲ್ಲಿ ಪ್ರಸಾದರೂಪವಾಗಿ ಸ್ವಲ್ಪಹೂವನ್ನೂ, ಹೋಮಭಸ್ಮವನ್ನೂ ತೆಗೆದುಕೊಂಡು, ಉತ್ತರದಿಕ್ಕಿಗೆ ಹಾಕುವುದಕ್ಕೆ ನಿರ್ಹಾರವೆಂದು ಹೆಸರು. ಹೀಗೆ ಇಲ್ಲಿನವರೆಗೆ ಹೇಳಿದ ಆಗಮವೇ ಮೊದಲಾದ ಭಾಗಗಳನ್ನೊಳಗೊಂಡ ಪೂಜೆಯೇ ಪರಮಾತ್ಮನಿಗೆ ತೃಪ್ತಿಕರವಾದದ್ದು.

ಸರ್ವಾಸ್ತ್ರಾಸ್ಸಂವಿಧಾತವ್ಯಾಃ ಸಪುಷ್ಪಚಂದನಾದಿಭಿಃ ।
ಮಂತ್ರಮುದ್ರಾ ತಥಾ ಧ್ಯಾನಯೋಗಾದ್ಯಂ ಸುಸಮಾಹಿತಂ ॥ ೪೭ ॥

ಸಮಂ ಸಂಪಾದಯೇತ್ಸರ್ವಮಕ್ಲಿಷ್ಟಂ ಮತ್ಪರಾಯಣಂ ।
ಯಾಮದ್ವಯಪರಿಚ್ಛಿನ್ನಂ ಪ್ರಾತರ್ವೇಲಾದಿತಃ ಕ್ರಮಾತ್ ॥ ೪೮ ॥

ಶಾಂತಿಂ ಪುಷ್ಟಿಂ ಚ ಶಾಂತ್ಯರ್ಥಂ ಶಾಂತವತ್ಕೀರ್ತಿತಂ ಮಯಾ ।
ಜ್ಯೋತಿರಗ್ನಿಸ್ತಥಾಗ್ನಿಶ್ಚ ಜ್ಯೋತಿಷ್ಮಾನಪರಃ ಸ್ಮೃತಃ ॥ ೪೯ ॥

ಶುಕ್ರಶ್ಚ ಹರಿತೋಽತ್ಯಗ್ನಿರಿತ್ಯಶ್ವಾಃ ಪರಿಕೀರ್ತಿತಾಃ ।
ಸರ್ಪಿಸ್ತ್ರಿನಾಭಿರರುಣಿರ್ಋಗ್ವಿಧಾತೇತ್ಯಮೀ ತಥಾ ॥ ೫೦ ॥

ಪ್ರಣವಾದಿಸಮಾಯುಕ್ತಾ ನಮಸ್ಕಾರಾಂತಕಲ್ಪಿತಾಃ ।
ಹೃದಯಾದಿರಥಾದೀನಾಂ ಯಜ್ವಂಶಾನಾಂ ಪದಕ್ರಮಾತ್ ॥ ೫೧ ॥

---

೪೭-೪೮. ಈ ಪೂಜಾವಿಧಿಯಿಂದ ಯಾರು ಬೇಕಾದರೂ ಅರ್ಚನೆ ಮಾಡಬಹುದು ಇದಕ್ಕೆ ಹೂವು, ಗಂಧ ಮುಂತಾದ ಪೂಜಾಸಾಮಗ್ರಿಗಳು, ಮಂತ್ರ, ಮುದ್ರಾ, ಧ್ಯಾನ ಯೋಗಾದಿಗಳು ಅವಶ್ಯವಾಗಿ ಬೇಕು. ಈ ವಿಧದ ಪೂಜೆಗೆ ಪ್ರಾತಃಕಾಲದ ಮೊದಲನೆಯ ಎರಡು ಯಾಮಗಳೇ ಮುಖ್ಯಕಾಲ.

೪೯-೫೦. ಭಕ್ತರಿಗೆ ಶಾಂತಿ, ಪುಷ್ಟಿ ಇತ್ಯಾದಿಗಳ ಪ್ರಾಪ್ತಿಗಾಗಿ ನಾನು ಶಾಂತ ರೀತಿಯಿಂದ, ಜ್ಯೋತಿರಗ್ನಿ, ಅಗ್ನಿ ಮುಂತಾದ ಮಂತ್ರಸ್ವಸ್ತಿವಾಚನಗಳನ್ನು ವಿವರಿಸುವೆನು. ಇನ್ನು ಸೂರ್ಯಸಂಬಂಧಿಯಾದ ಸಪ್ತಾಶ್ವಗಳಿಗೆ ಶುಕ್ರ, ಹರಿತ, ಅತ್ಯಗ್ನಿ, ಸರ್ಪಿ, ತ್ರಿನಾಭಿ, ಅರುಣಿ, ಋಗ್ವಿಧಾತ, ಎಂಬುದಾಗಿ ಏಳು ಹೆಸರು ಗಳಿವೆ.

೫೧-೫೨. ಹೃದಯಾದಿ ನ್ಯಾಸಮಂತ್ರಗಳೂ, ರಥಾದಿ ಮುದ್ರೆಗಳೂ, ಓಂಕಾರಾದಿಯಾಗಿ ನಮಶ್ಶಬ್ದಾಂತವುಳ್ಳವುಗಳಾಗಿರಬೇಕು. ಪೂಜಾಸಮಯದಲ್ಲಿ ಆವಾಹನೆಗೆ ಹಿಂದೆ ಹೇಳಿದ ಆದಿತ್ಯಾಯ ವಿಹಿರಾಗಚ್ಛ ಎಂಬ ಎರಡು ಮಂತ್ರ

ಆದಿತ್ಯಾಯ ಸಹೇಹೇತಿ ಮಿಹಿರಾಗಚ್ಛತಿ ದ್ವಯಂ ।
ಸ್ವವರ್ಗೇಣೇತಿ ಹುಂ ಪಶ್ಚಾನ್ನಮಸ್ಸ್ವಾಹಾಂತಕಲ್ಪಿತಃ ॥ ೫೨ ॥

ಅಯಮಾಕಾಶಮಂತ್ರೋ ಹಿ ತಥೋಂಕಾರಾದಿಸಂಯುತಂ ।
ಖಖೋಲ್ಕಾಯೇತಿ ಸ್ವಾಹಾಂತೋ ಮೂಲಮಂತ್ರ ಉದಾಹೃತಃ ॥ ೫೩ ॥

ಪ್ರಣವಾದಿವ್ಯೋಮವ್ಯಾಪೀ ಸರ್ವಲೋಕಾಧಿಪಸ್ತಥಾ ।
ತಿಷ್ಠತಿಷ್ಠೇತಿ ನಿರ್ದಿಷ್ಟಃ ಸಾಹಾಂತಸ್ಸ್ಥಾಪನೇಮತಃ ॥ ೫೪ ॥

ಅರ್ಕಪ್ರದೀಪ್ತಿಚಿಪಿಟಜಗಚ್ಚಕ್ಷುಃ ಪ್ರಭಾಕರಃ ।
ಸ ಮಹಾತೇಜಸೋ ಮಂತ್ರಃ ಖಖೋಲ್ಕಹೃದಯಾದಿಭಿಃ ॥ ೫೫ ॥

---

ಗಳನ್ನೇ ಉಪಯೋಗಿಸಬೇಕು. ಹುಂ ನಮಃ ಸ್ವಾಹಾ ಎಂಬ ಪದಗಳೇ ಕೊನೆಯಾಗಿ ಉಳ್ಳಮಂತ್ರಗಳು ಪೂಜಾಕಾಲದಲ್ಲಿ ಶ್ರೇಷ್ಠವಾದವುಗಳು. ಹುಂಕಾರಾದಿಗಳನ್ನು ವ್ಯೋಮಮಂತ್ರವೆಂದು ಕರೆಯುವರು.

೫೩. ಹಿಂದೆ ಖಖೋಲ್ಕಾಯ ಎಂಬ ಮಂತ್ರವು ಪ್ರಣವಾದಿಯಾಗಿ ಸ್ವಾಹಾಂತವಾಗಿ ಉಪಯೋಗಿಸಲ್ಪಟ್ಟಿದೆ. ಅದನ್ನು ಮೂಲಮಂತ್ರವೆನ್ನುವರು.

೫೪-೫೫. ಹಿಂದೆ ಪ್ರಣವಾದಿಯಾಗಿ ಹೇಳಿದ " ವ್ಯೋಮವ್ಯಾಪಿನೇ ಸರ್ವಲೋಕಾಧಿಪತಯೇ ತಿಷ್ಠ " ಎಂಬ ಮಂತ್ರವೇ ಸ್ಥಾಪನೆಗೆ ಯೋಗ್ಯವಾದುದು. ಇದು ಸ್ವಾಹಾಶಬ್ದಾಂತವಾಗಿರಬೇಕು. (ತಿಷ್ಠ ತಿಷ್ಠ,) (ಠಃ ಠಃ ) ಎಂಬುದಾಗಿ ನಿರ್ದಿಷ್ಟವಾಗಿರುವ ಶಕ್ತಿಮಂತ್ರವೆಲ್ಲಾ ಶಕ್ತಿಶಬ್ದಾಂತವಾಗಿರುವುದೆಂದು ತಿಳಿಯಬೇಕು.)

ಅರ್ಕ, ಪ್ರದೀಪ್ತ, ಚಿಪಿಟ, ಜಗಚ್ಚಕ್ಷು, ಪ್ರಭಾಕರ, ಮಹಾತೇಜಾಃ ಈ ಐದು ಸ್ವಾಹಾಂತವಾದ ಮಂತ್ರಗಳು ಹೃದಯಾದಿನ್ಯಾಸಗಳಿಗೆ ಆವಶ್ಯಕವಾದವುಗಳು.

ಏತೇ ಪ್ರತಿಪದಂ ಸೌಖ್ಯಾಃ (ಮ್ಯಾಃ) ಸ್ವಾಹಾಂತಾಃ ಪ್ರಣವಾದಿಕಾಃ ।
ಕವಚಸ್ತು ಸ ಹುಂಕಾರೋ ಹುಂ ಫಡಸ್ತ್ರಂ ತು ಯೋಜಯೇತ್ ॥ ೫೬ ॥

ಗಾಯನಾಧಿಪತಿಶ್ಚೈವ ಸಹಸ್ರಕಿರಣಸ್ತಥಾ ।
ಸಂರೋಧಾತ್ಮೇತಿ ಸಂರೋಧೋ ಓಂಸ್ವಾಹಾದ್ಯಂತಕಲ್ಪಿತಃ ॥ ೫೭ ॥

ಓಮಾಕಾಶವಿಕಾಸಿನೇ ಜಗಚ್ಚಕ್ಷುಷೇ ತಥಾ ।
ಸಾನ್ನಿಧ್ಯಂಕುರ್ವಿತಿ ದ್ವಿಶ್ವಸ್ವಾಹಾಂತಸ್ಸನ್ನಿಧಾಯ ಚ ॥ ೫೮ ॥

ಹ್ರಾಂ ಚಿರಿಂಟಿಚಿರಿಂಟಿರಿತಿ ದೀಪ್ತಾಂಘ್ರಿರಿತಿ ಸ್ಮೃತಃ ।
ಪ್ರಣವಾದಿಕಃ ಪಾದ್ಯಮಂತ್ರೋ ನಮಶ್ಚಬ್ದಾಂತಸಂಯುತಃ ॥ ೫೯ ॥

ಗಭಸ್ತಿನೇದ್ವಿಃ ಕೀಲಿಕಾಲಿಕಾಲೀತಿ ಚಾಪರಃ ।
ಸರ್ವಾರ್ಥಸಾಧಿನೀತ್ಯೇವ ಕಕಿದ್ವಿಸ್ತ್ರಿಃ ಸಹುಂಕೃತಿಃ ॥ ೬೦ ॥

---

೫೬-೫೭. ಸ್ವಾಹಾಂತವಾಗಿ ಪ್ರಣವಾದಿಯಾಗಿರುವ ಮೇಲಿನ ಪದಗಳು ಸೌಮ್ಯಸ್ವರೂಪಗಳಾಗಿರುವುವು. ಕವಚ ಮಂತ್ರದಲ್ಲಿ ಹುಂಕಾರವನ್ನೂ, ಅಸ್ತ್ರ ಮಂತ್ರದಲ್ಲಿ ಹುಂ ಫಟ್ ಎಂಬ ಶಬ್ದವನ್ನೂ ಸೇರಿಸಿ ಉಚ್ಚರಿಸಬೇಕು. ಸೂರ್ಯ ದೇವನು ಗಾಯನಕಲಾಧಿಪತಿಯು. (ಗಣಾಧಿಪತಿಯು) ಸಹಸ್ರ ಕಿರಣಾತ್ಮಕನು. ಓಂಕಾರಾದಿಯಾಗಿ ಸ್ವಾಹಾಂತವಾದ "ಗಣಾಧಿಪತಯೇ, ಸಹಸ್ರಕಿರಣಾಯ ಸಂರೋಧಾತ್ಮನೇ" ಎಂಬ ಮಂತ್ರವೇ ಸಂರೋಧಾತ್ಮಕ ಮಂತ್ರವೆನಿಸಿಕೊಂಡಿರುವುದು.

೫೮-೫೯. ಸೂರ್ಯದೇವನು ಆಕಾಶವ್ಯಾಪಿಯಾದವನೆಂದೂ, ಲೋಕಕ್ಕೆ ನೇತ್ರ ಸ್ವರೂಪನೆಂದೂ, ತಿಳಿಸುವುದು. ಸ್ವಾಹಾಂತವಾದ "ಆಕಾಶವಿಕಾಸಿನೇ ಜಗಚ್ಚಕ್ಷುಷೇ ಸಾನ್ನಿಧ್ಯಂಕುರು" ಎಂಬ ಮಂತ್ರವು ಸೂರ್ಯದೇವನು ಸನ್ನಿಧಿಯನ್ನು ದಯಪಾಲಿಸಲಿ, ಎಂಬರ್ಥವನ್ನು ಕೊಡುವುದು. ಪ್ರಣವಾದಿಯಾದ "ಹ್ರಾಂ ಚಿರಿಂಟಿ ಚಿರಿಂಟಯೇ ದೀಪ್ತಾಂಶವೇನಮಃ" ಎಂಬ ಮಂತ್ರವು ಸ್ವಾಹಾಂತವಾಗಿದ್ದು ಪಾದ್ಯಮಂತ್ರವೆನಿಸುವುದು.

೬೦-೬೧. ಎರಡಾವೃತ್ತಿ ಕೀಲಿಕಾಲಿ, ಎಂಬ ಅಕ್ಷರಗಳುಳ್ಳ ಗಭಸ್ತಿನೇ ನಮಃ ಎಂಬ ಅರ್ಘಮಂತ್ರವೂ, ಕ, ಕಿ, ಎಂಬ ಅಕ್ಷರಗಳಿಂದ ಎರಡುಸಾರಿ ಕೂಡಿದ್ದಾಗಿ

ಅರ್ಘಮಂತ್ರೋ ವಿನಿರ್ದಿಷ್ಟೋ ಷ್ಯಂತೇ ಕೃತನಮಸ್ಕೃತಿಃ ।
ಓಂ ಸವಿತ್ರೇ ಚ ವರುಣಾಯ ನಮಃ ಸ್ವಾತ್ಸ್ನಪನೇ ಮಂತ್ರಃ ॥ ೬೧ ॥

ಖಖನೇತ್ರಸಹಸ್ರಂ ತು ನಮೋಂತಃ ಪರಿಕಲ್ಪಿತಃ ।
ವಸ್ತ್ರಗಂಧಸ್ತು ವಿಜ್ಞೇಯಃ ಪಿಂಗಲಾಶ್ವಂದಲೇತಿ ಚ ॥ ೬೨ ॥

ಪ್ರಣವಾದಿಹಿಲೀತಿರ್ಥಿರ್ಮಹಾಮಾಲಾಧರಸ್ತಥಾ ।
ತೇಜೋಧಿಪತಿರ್ನವೋಂತಶ್ಚ ಪುಷ್ಪಮಂತ್ರ ಉದಾಹೃತಃ ॥ ೬೩ ॥

ಜ್ವಲಿತಾರ್ಕಸ್ತು ತಾರಾದಿರ್ಧೂಪದ್ವಿರ್ಮಿಹಿರಜ್ವಲಃ ।
ವಿಚಿತ್ರರತ್ನಧಾರೀತಿ ನವೋಂತೋ ಭೂಷಣಃ ಸ್ಮೃತಃ ॥ ೬೪ ॥

ಮಹಾಶ್ವೇತಾಪಂಡಪಾಣಿರರುಣಿಃ ಪಿಂಗಲಸ್ತಥಾ ।
ಪ್ರಣವಾದಿನನೋಂತಾಶ್ಚ ಸಂಯೋಜ್ಯಾಃ ಪದಸಂತ್ವಿಮೇ ॥ ೬೫ ॥

---

ಸರ್ವಾರ್ಥಸಾಧಕಗಳೆಂಬ ಅರ್ಘವನ್ನು ಕೊಡುವುದು ಅರ್ಘಮಂತ್ರ. ಸ್ನಾನ ಕಾಲದಲ್ಲಿ, ಸವಿತ್ರೇ ವರುಣಾಯನಮಃ ಎಂಬ ಮಂತ್ರವನ್ನು ಉಚ್ಚರಿಸಬೇಕು.

೬೨-೬೩. ಷಷನೇತ್ರಾಯ ಸಹಸ್ರಹಸ್ತತನವೇ ಎಂಬ ಮಂತ್ರವೇ ನಮೋಂತವಾಗಿ ವಸ್ತ್ರಗಳನ್ನು ಅರ್ಪಿಸುವ ಮಂತ್ರವಾಗುವುದು. ಪಿಂಗಲಾಯ, ಭಂವಸೇ ಎಂಬ ಪ್ರಣವಸಹಿತವಾದ ಮಂತ್ರವು, ಗಂಧ ಪುಷ್ಪಮಾಲಾಧಾರಣೆಗೂ, ನಮೋಂತವಾದ ಆಹಿಹಿಲಿ ತೇಜೋಧಿಪತಯೇ ಎಂಬ ಮಂತ್ರವು ಪುಷ್ಪಾರ್ಚನೆಯ ಮಂತ್ರವಾಗಿಯೂ ಗಣಿಸಲ್ಪಟ್ಟಿರುವುದು.

೬೪-೬೫. ಜ್ವಲಿತನಾದ ಸೂರ್ಯನಿಗೆ ಜ್ವಲಿತಾರ್ಕಾಯ ಎಂಬ ಮಂತ್ರ ಧೂಪ ಮಂತ್ರ. ನಮಶ್ಶಬ್ದಾಂತವಾದ ವಿಚಿತ್ರರತ್ನಧಾರಿಣೇ ಎಂಬ ಮಂತ್ರವೇ ಭೂಷಣ ಮಂತ್ರವೆನಿಸುವುದು. ಮಹಾಶ್ವೇತ, ದಂಡಪಾಣಿ, ಅರುಣ, ಪಿಂಗಲ, ಎಂಬ ಪದಗಳಿಗೆ ಪ್ರಣವವನ್ನು ಆದಿಯಲ್ಲಿಯೂ, ನಮಶ್ಶಬ್ದವನ್ನು ಅಂತ್ಯದಲ್ಲಿಯೂ ಸೇರಿಸಿ ಪುಷ್ಪಾರ್ಚನೆಗೆ ಬಳಸಬೇಕು.

ಅರುಣಸ್ಸೂರ್ಯೋಂಶುಮಾಲೀ ಧಾತೇಂದ್ರಶ್ಚ ರವಿಸ್ತಥಾ ।
ಗಭಸ್ತಿಶ್ಚ ಯಮಶ್ಚೈವ ಸ್ವರ್ಣರೇತಾಸ್ತಥೈವ ಚ ॥ ೬೬ ॥

ತ್ವಷ್ಟಾ ಮಿತ್ರೋಥ ವಿಷ್ಣುಶ್ಚ ದ್ವಾದಶೈವ ಪ್ರಕೀರ್ತಿತಾಃ ।
ಆದಿತ್ಯಾಃ ಪ್ರತಪಂತ್ಯೇತೇ ಮಾಘಮಾಸಾದಿಷು ಕ್ರಮಾತ್ ॥ ೬೭ ॥

ಪ್ರಣವಾದಿಸಮಾಯುಕ್ತಾನೇತಾನೇವಂ ಚ ಸಂಜ್ಞಯಾ ।
ಸಹುಂಕಾರನಮಸ್ಕಾರಾನ್ ಸಂಯುಕ್ತಾನ್ ಸಂಪ್ರಯೋಜಯೇತ್ ॥ ೬೮ ॥

ಹರಿಕೇಶೋ ರಥಃಕೃಚ್ಛ್ರೋ ರಥೌಜಾಃ ಪುಂಜಿಕಸ್ಥಲಃ ।
ಕ್ರತುಸ್ಥಲೋ ವಿಶ್ವಕರ್ಮಾ ತಥಾ ಚೈವ ರಥಸ್ವನಃ ॥ ೬೯ ॥

ರಥಚಿತ್ರೋಥ ಮೇನಾಖ್ಯಃ ಸಹಜಾನ್ಯಸ್ತಥಾಪ್ಸರಾಃ ।
ವಿಶ್ವವ್ಯಚಾರಥಪ್ರೋತಃ ಸಹಾಸೋ ಮಾಠರೇಣ ತು ॥ ೭೦ ॥

ಪ್ರಮ್ಲೋಚಂತ್ಯನುಮ್ಲೋಚಂತೀ ಸಂಯದ್ಧಸುರಥಾ ಪರಃ ।
ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ವಿಶ್ವಾಚೀ ಚ ಘೃತಾಚಿಕಾ ॥ ೭೧

---

೬೬-೬೭. ಮಾಘಮಾಸಾದಿಯಾಗಿ ಸೂರ್ಯದೇವನಿಗೆ ಅರುಣ, ಸೂರ್ಯ, ಅಂಶುಮಾಲೀ, ಧಾತಾ, ಇಂದ್ರ, ರವಿ, ಗಭಸ್ತಿ, ಯಮ, ಸ್ವರ್ಣರೇತಸ್ಸು, ತ್ವಷ್ಟಾ, ಮಿತ್ರ ವಿಷ್ಣು, ಎಂಬ ಹೆಸರುಗಳು ಕ್ರಮವಾಗಿ ಸಲ್ಲುತ್ತವೆ. ಈ ಮಂತ್ರಗಳಿಂದ ಸ್ವಾಮಿಯನ್ನು ಆಯಾ ಮಾಸಗಳಲ್ಲಿ ಅರ್ಚಿಸಬೇಕು.

೬೮-೭೩. ಈ ಹನ್ನೆರಡು ಸೂರ್ಯನಾಮಗಳನ್ನೂ ಓಂಕಾರಾದಿಯಾಗಿ ಹುಂಕಾರ ನಮಶ್ಶಬ್ದಾಂತಗಳಾಗಿ ಪ್ರಯೋಗಿಸುತ್ತಾ ಅರ್ಚನೆಮಾಡಬೇಕು. ಇದಲ್ಲದೆ ಅಂಗ ದೇವತೆಗಳೆಂಬ ಭಾವನೆಯಿಂದ, ಹರಿಕೇಶ, ರಥಕೃಚ್ಛ್ರ, ರಥೌಜಸ್ಸು, ಪುಂಜಿಕಸ್ಥಲ, ಕ್ರತುಸ್ಥಲ, ವಿಶ್ವಕರ್ಮ, ರಥಸ್ವನ, ರಥಚಿತ್ರ, ಮೇನ, ಸಹಜಾನ್ಯ, ಅಪ್ಸರಸ್ಸು, ವಿಶ್ವವ್ಯಚ, ರಥಪ್ರೋತ, ಸಹಾಸ, ಮಾಠರ, ಪ್ರಮ್ಲೋಚಂತೀ, ಅನುಮ್ಲೋಚಂತೀ,

ಅರ್ವಾಗ್ವಸುಸ್ಸೇನಜಿಚ್ಚ ಸುಷೇಣಶ್ಚೋರ್ವಶೀ ತಥಾ ।
ಪೂರ್ವಚಿತ್ತಿಶ್ಚ ಸಂಯೋಜ್ಯಾಃ ಪೂಜ್ಯಾ ಮಂತ್ರವಿಧಾನತಃ ॥ ೭೨ ॥

ದೀಪ್ತಾನನಃ ಕುಮಾರಶ್ಚ ಘೃಣಿರ್ಯೋಗವಹೋ ವಿರಾಟ್ ।
ಕೇಶೀ ಸುಣಪರಿಷ್ಟೌ ಚ ಮಾಠರಾನಂತನಿಕ್ಷುಭಾಃ ॥ ೭೩ ॥

ತೇಜೋವಾಹ ಇತಿ ಖ್ಯಾತಾ ದ್ವಾದಶಾರ್ಕಗಣಾಧಿಪಾಃ ।
ಏತೇ ಸ್ವನಾಮತೋಭ್ಯರ್ಚ್ಯಾ ನಮೋಂತಾಃ ಪ್ರಣವಾದಿಕಾಃ ॥ ೭೪ ॥

ಕ್ಷುಭಾ ಮೈತ್ರೀ ಪ್ರಭಾ ಶ್ಯಾಮಾ ರೋಚಿರ್ದೀಪ್ತಿಃ ಸುವರ್ಚಲಾ ।
ಯೋಜ್ಯಾಸ್ತಾರಾದಿಸಂಯುಕ್ತಾ ನಮೋಂತಾಃ ಸಪ್ತ ಮಾತರಃ ॥ ೭೫ ॥

ವಕ್ರಂ ಶುಕ್ರಂ ಗುರುಂ ಭೌಮಂ ಸೌರಿಂ ಕೇತುಂ ಬುಧಾನನೌ ।
ಸಹುಂಕಾರಾನ್ ಸಪ್ರಣವಾನ್ನಮೋಂತಾನ್ಯೋಜಯೇದ್ಗ್ರಹಾನ್ ॥ ೭೬ ॥

---

ಸಂಯದ್ಧ. ಸುರಥಾಸರ, ತಾರ್ಕ್ಷ್ಯ, ಅರಿಷ್ಟನೇಮಿ, ವಿಶ್ವಾಚೀ, ಘೃತಾಚೀ, ಅರ್ವಾಗ್ವಸು ಸೇನಜಿತ್, ಸುಷೇಣ, ಊರ್ವಶೀ, ಪೂರ್ವಚಿತ್ತಿ, ಈ ದೇವತೆಗಳನ್ನು ಮಂತ್ರ ವತ್ತಾಗಿ ಪೂಜಿಸಬೇಕು.

೭೪. ದೀಪ್ತಾನನ, ಕುಮಾರ, ಘೃಣಿ, ಯೋಗವಹ, ವಿರಾಟ್, ಕೇಶೀ, ಸುಣವ, ಅರಿಷ್ಟ, ಮಾಠರ, ಅನಂತ, ನಿಕ್ಷುಭ, ತೇಜೋವಾಹ, ಎಂಬ ಹನ್ನೆರಡು ದೇವತೆಗಳು ದ್ವಾದಶಾರ್ಕ ಗಣಾಧಿಪತಿಗಳೆನಿಸಿರುವರು. ಇವರನ್ನೂ ಅಯಾನಾಮ ಗಳಿಂದ ಓಂಕಾರಾದಿಯಾಗಿ ನಮಶ್ಯಬ್ದಾಂತದಿಂದ ಪೂಜಿಸಬೇಕು.

೭೫. ಕ್ಷುಭಾ, ಮೈತ್ರಿ, ಪ್ರಭಾ, ಶ್ಯಾಮಾ, ರೋಚಿ, ದೀಪ್ತಿ, ಸುವರ್ಚಲ, ಎಂಬ ಸಪ್ತಮಾತೃಕೆಯರನ್ನೂ ಪ್ರಣವಾದಿಯಾದ ನಮಶ್ಯಬ್ದಾಂತಗಳಾದ ನಾಮ ಗಳಿಂದ ಪೂಜಿಸಬೇಕು.

೭೬–೭೮. ಅಂಕಾರಕ, ಶುಕ್ರ, ಗುರು, ಶನಿ, ರಾಹು, ಕೇತು, ಬುಧ, ಚಂದ್ರ ಮುಂತಾದ ಗ್ರಹಗಳನ್ನೂ, ಇಂದ್ರ, ಅಗ್ನಿ, ಯಮ, ನಿರೃತಿ, ವರುಣ, ವಾಯು,

ಇಂದ್ರೋಽಗ್ನಿರ್ಯಮೋನಿರ್ಋತಿರ್ವರುಣೋ ವಾಯುರೇವ ಚ ।
ಕುಬೇರಶ್ಶಂಕರೋ ಬ್ರಹ್ಮಾ ಶೇಷಶ್ಚೇತಿ ದಿಗೀಶ್ವರಾಃ ॥ ೭೭ ॥

ಏತೇಷ್ವನವಸಂಯುಕ್ತಾಸ್ತಥಾಧಿಪತಿಯೋಜಿತಾಃ ।
ನಮಸ್ಕಾರಾಂತಸಂಯುಕ್ತಾಃ ಸಂಯೋಜ್ಯಾ ನಾಮತೋ ದಶ ॥ ೭೮ ॥

ತಾರಾದಿತೇಜೋಧಿಪತಿರ್ಯಸ್ತ್ವಯ್ಯೇವ ನಮಸ್ಕೃತಃ ।
ಅರ್ಕಾಯಾಥ ಗೃಹಾಣೇತಿ ಹ್ಯಮೃತೇತಿ ನಿವೇದನೇ । ॥ ೭೯ ॥

ಜಲಕುಂದಲಯೇತ್ಯಾದೌ ದಿವ್ಯಾತೋದ್ಯಪ್ರಿಯಾಯ ಚ
ಪ್ರಣವಾದಿನಮೋಂತಾಯ ಮತ್ರೋಽರ್ಘ್ಯಮಂತ್ರ ಉಚ್ಯತೇ ॥ ೮೦ ॥

ಅಂಶುಮಾನಥ ದೇವಶ್ಚ ದ್ವೌ ಶಬ್ದೌ ಗೀಯತೇತಿ ಚ ।
ಓಂ ಸ್ವಾಹಾದ್ಯಂತಸಂಯುಕ್ತೋ ನ್ಯಾಸಮಂತ್ರ ಉದಾಹೃತಃ ॥ ೮೧ ॥

---

ಕುಬೇರ, ಈಶಾನ, ಬ್ರಹ್ಮ, ಆದಿಶೇಷ, ಮುಂತಾದ ದಶದಿಕ್ಪತಿಗಳನ್ನೂ, ಆಯಾ ನಾಮಗಳಿಂದಲೇ ಓಂಕಾರಾದಿಯಾಗಿ, ನಮಶ್ಶಬ್ದಾಂತದಿಂದ ಪೂಜಿಸಬೇಕು.

೭೯-೮೦. ಎಲೈ ಜಗತ್ಪತಿಯೇ, ಸಕಲ ನಕ್ಷತ್ರಗಳಿಗೂ (ಮಂತ್ರಗಳಿಗೂ) ನೀನೇ ಪೂಜ್ಯನೆನಿಸಿರುವೆ. ಇಂತಹ ಅರ್ಕಸ್ವರೂಪಿಯಾದ ನಿನಗೆ ಅಮೃತವನ್ನು ಸಮರ್ಪಿಸಬೇಕು. ಜಲಕುಂದಲಾಯ, ದಿವ್ಯಾತೋದ್ಯಪ್ರಿಯಾಯ ಎಂಬ ಮಂತ್ರಗಳನ್ನು ಪ್ರಣವಾದಿನಮೋಂತವಾಗಿ ಮಾಡಿಕೊಂಡು ಇದರಿಂದ ಅರ್ಘ್ಯಪ್ರದಾನ ಮಾಡಬೇಕು.

೮೧-೮೩. ಸ್ವಾಹಾಕಾರವನ್ನು ಆದ್ಯಂತವಾಗಿ ಉಳ್ಳ, ಅಂಶುಮಾನ್, ದೇವ, ಎಂಬ ಎರಡು ಶಬ್ದಗಳು ನ್ಯಾಸಮಂತ್ರಗಳಾಗಿ ತಿಳಿಯಲ್ಪಟ್ಟಿವೆ. ಸ್ತೋತ್ರಮಂತ್ರವನ್ನು ಮೊದಲು ನಮಸ್ತೇ ದಿವ್ಯರೂಪಾಯ ಎಂದು ಆರಂಭಿಸಿ, ಸರ್ವಭೂತಾತ್ಮಕನೂ, ಸಕಲತೇಜೋರೂಪಿಯೂ ಆದ ಸೂರ್ಯಭಗವಂತನಿಗೆ ನಮಸ್ಕಾರ ಎಂದು ಅರ್ಥಾನು

ಆದೌ ನಮಸ್ತೇ ಇತ್ಯೇವ ದಿವ್ಯರೂಪಾಯ ಚೇತ್ಯಥ ।
ಸರ್ವಭೂತಾತ್ಮನೇ ಚೈವ ನಮಸ್ಸರ್ವಸ್ಯ ತೇಜಸೇ ॥ ೮೨ ॥

ತಥಾಧಿಪತಯೇತ್ಯೇವಂ ಭಾನವೇ ಲೋಕಚಕ್ಷುಷೇ ।
ನಮ ಓಂಕಾರಸಂಯುಕ್ತಃ ಸ್ತೋತ್ರಮಂತ್ರ ಉದಾಹೃತಃ ॥ ೮೩ ॥

ನಮಸ್ಕಾರಾಂತಿಕಾ ಪೂಜಾ ಇಹ ಏಷಾಮುದಾಹೃತಾ ।
ಸ್ವಾಹಾವಷಟ್ಕಾರಯುತಾ ಹೋಮೇ ಚಾನೇನ ತರ್ಪಯೇತ್ ॥ ೮೪ ॥

ಆದೌ ತಾರಸಮಾಯುಕ್ತಂ ಸಂಹರೇತಿ ಪದದ್ವಯಂ ।
ವಿರೋಚನೇತಿ ಸ್ವಾಹಾಂತೋ ಮಂತ್ರಸ್ಸಂಹಾರಸಂಜ್ಞಕಃ ॥ ೮೫ ॥

ಆದೌ ಶಾಂತಾತ್ಮನೇ ಕೃತ್ವಾ ಸರ್ವಲೋಕಜಯಾಯ ಚ ।
ತಾರಾದಿಕಶ್ಶುದ್ಧಮಂತ್ರಃ ಸ್ವಾಹಾಂತಃ ಪರಿಕೀರ್ತಿತಃ ॥ ೮೬ ॥

---

ಸಂಧಾನಮಾಡಿ ಓಂಕಾರದಿಂದಲೂ, ನಮಶ್ಶಬ್ದದಿಂದಲೂ ಕೂಡಿದ ಈ ಮಂತ್ರವನ್ನು ಉಚ್ಚರಿಸಬೇಕು.

೮೩-೮೫. ನಮಶ್ಶಬ್ದವೇ ಅಂತವಾಗಿ ಉಳ್ಳ ಮಂತ್ರಗಳು ಪೂಜಾರ್ಥವಾಗಿ ವಿನಿಯೋಗಿಸಲ್ಪಡುವುವು. ಸ್ವಾಹಾ, ವಷಟ್ಕಾರದಿಂದ ಕೂಡಿದಮಂತ್ರಗಳು ಹೋಮಕಾಲದಲ್ಲಿ ಬಳಸಲ್ಪಡುವುವು. ವಿರೋಚನಾಯಸ್ವಾಹಾ, ಸಂಹರ, ಸಂಹರ, ಎಂದು ಸಂಹರಪದದ್ವಯಘಟಿತವಾದ ಮಂತ್ರವೇ ಸಂಹಾರಮಂತ್ರವೆನಿಸುವುದು.

೮೬-೮೮. ಶಾಂತಾತ್ಮನೂ, ಸರ್ವಲೋಕಾಧಿಪತಿಯೂ ಆದ ಭಾಸ್ಕರನಿಗೆ ವಂದನೆ ಎಂಬರ್ಥದ ಮಂತ್ರವೇ ಶುದ್ಧಮಂತ್ರ. ಅದಕ್ಕೆ ಪ್ರಣವವನ್ನು ಆದಿಯಲ್ಲಿಯೂ, ಅಂತ್ಯದಲ್ಲಿ ಸ್ವಾಹಾಶಬ್ದವನ್ನೂ ಒಳಗೊಂಡು ಮಂತ್ರದಂತೆ ಪಠನಮಾಡಬೇಕು. " ಖಖೋಲ್ಕಾಯವಿದ್ಮಹೇ, ಸಹಸ್ರಕಿರಣಾಯ ಧೀಮಹಿ " ತನ್ನೋರವಿಃ

ಖಖೋಲ್ಕಾಯೇತಿ ಕೃತ್ವಾ ಯಸ್ತತ್ಪಶ್ಚಾದ್ವಿದ್ಮಹೇತಿ ಚ ।
ಸಹಸ್ರಕಿರಣಾಯೇತಿ ಧೀಮಹೀತಿ ತು ಚಾಪರಂ ॥ ೮೭ ॥

ತನ್ನೋ ರವಿಃ ಪ್ರಚೋದಯಾದಿತ್ಯೋಂಕಾರಾದಿಸಂಯುತಃ ।
ಸ್ವಾಹಾಂತೋ ಹಿ ನಮಸ್ಕಾರೋ ವಿಧೇಯಸ್ಸಂಪ್ರಕೀರ್ತಿತಃ ॥ ೮೮ ॥

ಸ್ವರ್ಗೇಣೇತಿ ಚ ವಾಸ್ಯಾದೌ ದ್ವಿರ್ಗಚ್ಛೇತಿ ಸವಿಗ್ರಹಃ ।
ದ್ವಾದಶಾದಿತ್ಯ ಇತಿ ದ್ವಿರ್ಹಲೀತ್ಯೋಂಕಾರಸಂಯುತಂ ॥ ೮೯ ॥

ಗಚ್ಛ ದೇವೇತಿ ಚ ತತಃ ಕೃತ್ವಾ ಚಾಪಿ ಯಥಾಗತಂ ।
ಪ್ರಣವಾದಿರೇಷ ಮಂತ್ರಃ ಸ್ಯಾತ್ಸ್ವಾಹಾಂತೋ ಹಿ ವಿಸರ್ಜನೇ ॥ ೯೦ ॥

ಆದಾವೋಂಕಾರಸಂಯುಕ್ತಶ್ಚಂಡಪಿಂಗಲ ಇತ್ಯಯಂ ।
ನಿರ್ಮಾಲ್ಯ ಹರಣೇ ಮಂತ್ರಸ್ಸ್ವಾಹಾಂತಃ ಪರಿಕೀರ್ತಿತಃ ॥ ೯೧ ॥

---

ಪ್ರಚೋದಯಾತ್" ಎಂಬ ಸೂರ್ಯಗಾಯತ್ರೀಮಂತ್ರವನ್ನು ಓಂಕಾರಾದಿಯಾಗಿಯೂ ಸ್ವಾಹಾಂತವಾಗಿಯೂ ಉಚ್ಚರಿಸುತ್ತಾ ನಮಸ್ಕಾರಮಾಡಬೇಕು.

೮೯-೯೦. ವಿಸರ್ಜನ ಮಂತ್ರ ಪಠನಕಾಲದಲ್ಲಿ ಆದಿಯಲ್ಲಿ "ಸ್ವರ್ಗೇಣ ದ್ವಾದಶಾದಿತ್ಯ ಗಚ್ಛ ಗಚ್ಛ" ಎಂದು ಹೇಳುತ್ತಾ ಹಿಲಿ, ಓಂಕಾರಗಳನ್ನು ಉಚ್ಚರಿಸುತ್ತಾ ಎಲೈ ಸ್ವಾಮಿಯೇ, ನೀನು ಸ್ವಸ್ಥಳಕ್ಕೆ ಬಂದಂತೆ ದಯಮಾಡಿಸಬೇಕು ಎಂದು ವಿನಯವಾಗಿ ಪ್ರಣವಾದಿಯಾಗಿಯೂ ಸ್ವಾಹಾಂತವಾಗಿಯೂ ಉಚ್ಚರಿಸುತ್ತ ವಿಸರ್ಜನಮಾಡಬೇಕು. ಇದೇ ವಿಸರ್ಜನಮಂತ್ರ.

೯೧-೯೩. ಓಂ, ಚಂಡಪಿಂಗಲಾಯ ಸ್ವಾಹಾ, ಎಂಬ ಮಂತ್ರದಿಂದ ನಿರ್ಮಾಲ್ಯಹರಣಮಾಡಬೇಕು. ಹಿಂದೆ ಹೇಳಿದಂತೆ ಶುದ್ಧವಾಗಿರುವ ಭೂಭಾಗದಲ್ಲಿ ಶುದ್ಧಮೃತ್ತಿಕೆಯಿಂದ ನಿರ್ಮಿತವಾದ ರವಿಶಕ್ತ್ಯಾತ್ಮಕಳಾದ ದೇವಿಯ ಸ್ಥಾನವಾಗಿ

ಪ್ರಾಗುದ್ದಿಷ್ಟೇ ಭುವೋ ಭಾಗೇ ದೇವೀಂ ಶುದ್ಧಮ್ಮೃದೋದ್ಭವಾಂ ।
ಚತುರಸ್ರಾಂ ವಿದಿಕ್ಕೋಣಾಂ ಕುರ್ಯಾತ್ಪ್ರಾಕ್ಪ್ರವಣೋತ್ತರಾಂ ॥ ೯೨ ॥

ಗೋಮಯೇನೋಪಲಿಪ್ಯಾದೌ ಸಮ್ಮೃದಾ ಚ ಭುವಂ ತಥಾ ।
ಚಂದನಾಗುರುಪಂಕೇನ ಕುರ್ಯಾದರ್ಚನಮಂಡಲಂ ॥ ೯೩ ॥

ವಕ್ಷ್ಯಮಾಣವಿಧಾನೇನ ಸ್ಯಂದನಂ ಶಸ್ತ್ರದಾಲಿಖೇತ್ ।
ಪೂಜಾವಿಧಾನೇ ಧ್ಯೇಯಸ್ಸ್ಯಾತ್ತತ್ರದೇವೋ ರವಿಸ್ಸ್ಥಿತಃ ॥ ೯೪ ॥

ಸಪ್ತಭಿಸ್ಸಪ್ತಭಿರ್ಯುಕ್ತಂ ಹರಿದ್ಭಿರಹಿಯೋಕ್ತೃಭಿಃ ।
ಏಕಚಕ್ರಂ ರಥಂ ತಸ್ಯ ಚಿಂತಯೇದರುಣಾನ್ವಿತಂ ॥ ೯೫ ॥

ರವೇರಬ್ಜಂ ಮಾಸದಳಂ ಶುಭ್ರಂ ಮಧ್ಯೇ ರಥಸ್ಯ ತು ।
ಧ್ಯಾತ್ವಾ ತತ್ಕರ್ಣಿಕಾಮಧ್ಯೇ ವಹ್ನಿಶಂಖಶಿಖೋಜ್ಜ್ವಲಂ ॥ ೯೬ ॥

---

ನಾಲ್ಕುಪ್ರಾಕಾರವೂ, ವಿದಿಕ್ಕುಗಳಿಗೆ ಕೋಣವು ಬರುವಂತೆಯೂ, ಪೂರ್ವ ಅಥವಾ ಉತ್ತರಾಗ್ರವಾಗುವಂತೆಯೂ ಒಂದು ಮಂಡಲವನ್ನು ನಿರ್ಮಿಸಬೇಕು.

೯೩-೯೪. ಆ ಮಂಡಲವನ್ನು ಗೋಮಯದಿಂದಲೂ, ಮೃತ್ತಿಕೆಯಿಂದಲೂ ಕೂಡಿದ ಚಂದನ, ಅಗುರು, ಮುಂತಾದುವುಗಳಿಂದಲೂ ಸಾರಿಸಬೇಕು. ಅದರ ಮೇಲೆ ಮುಂದೆಹೇಳುವ ರೀತಿಯಲ್ಲಿ ಒಂದು ರಥದ ಆಕಾರವನ್ನು ಬರೆಯಬೇಕು. ಅದರಲ್ಲಿ ಸೂರ್ಯನಿರುವನೆಂಬ ಭಾವನೆಯಿಂದ ಸೂರ್ಯದೇವನನ್ನು ಧ್ಯಾನಿಸಬೇಕು.

೯೫-೯೬. ಆ ರಥಕ್ಕೆ ಹರಿದ್ವರ್ಣದ ಏಳು ಕುದುರೆಗಳನ್ನು ರಚಿಸಬೇಕು. ಆ ರಥಕ್ಕೆ ಒಂದೇಒಂದು ಚಕ್ರವನ್ನೂ, ಸೂರ್ಯಸಾರಥಿಯಾದ ಅರುಣನನ್ನೂ ಸಾರಥಿಯ ಸ್ಥಾನದಲ್ಲಿ, ಬರೆಯಬೇಕು. ಮಧ್ಯೆದ್ವಾದಶದಳಾತ್ಮಕವಾದ ಕಮಲವನ್ನು ರಚಿಸಿ ಅದರ ಕರ್ಣಿಕಾಭಾಗದಲ್ಲಿ ಬೆಂಕಿಯಶಿಖೆಯಂತೆ ಉಜ್ಜ್ವಲವಾದ ರವಿಬಿಂಬವನ್ನು ಬರೆಯಬೇಕು. ಮತ್ತು ಈ ಆಕಾರವನ್ನು ಮನಸ್ಸಿನಲ್ಲಿ ಧ್ಯಾನರೂಪದಿಂದ ನಿಲ್ಲಿಸಿ ಕೊಳ್ಳಬೇಕು.

ಆವಾಹನೇನ ಮಂತ್ರೇಣ ಮುದ್ರಯಾ ವ್ಯೋಮಸಂಜ್ಞಯಾ ।
ಕುರ್ವೀತ ರಶ್ಮಿನಿಚಯಂ ತಮೇಕತ್ರ ಪೃಥಕ್ಸ್ಥಿತಃ ॥ ೯೭ ॥

ಪಿಂಡೀಕೃತ್ಯ ಚ ತತ್ತೇಜೋ ಮೂಲಮಂತ್ರೇಣ ಚಾರ್ಕವತ್ ।
ತತ್ರ ತತ್ಸ್ಥಾಪಯೇತ್ ವ್ಯೋಮ್ನಿ ಮಂತ್ರೇಣ ಸ್ಥಾಪನೇನ ತು ॥ ೯೮ ॥

ತತ್ರಸ್ಥಂ ಚಿಂತಯೇದ್ದೇವಂ ಷಡ್ಬೀಜಂ ಪ್ರಣವಾನ್ವಿತಂ ।
ಹೃದಾದಿಭಿರ್ಯಥಾ ಯೋಗಂ ಷಡ್ಭಿರಂಗೈಸ್ಸಮನ್ವಿತಂ ॥ ೯೯ ॥

ಕಂಠಾದಾಪಾದಸಂವೀತಂ ಪದ್ಮಹಸ್ತಂ ಮಹಾಪ್ರಭಂ ।
ಖಖೋಲ್ಕಂ ಚಿಂತಯೇದ್ದೇವಂ ದ್ವಾದಶಾದಿತ್ಯದೈವತಂ ॥ ೧೦೦ ॥

ಶಿರೋಥ ಹೃದಯಂ ಚೈವ ಶಿಖಾಂ ಕವಚಮೇವ ಚ ।
ಏತಾನಿ ಕ್ರಮಶೋಂಗಾನಿ ಪೂಜಯೇದ್ವ್ಯೋಮಮೂರ್ಧನಿ ॥ ೧೦೧ ॥

---

೯೭-೯೮. ಅನಂತರ ಹಿಂದೆ ಹೇಳಿದ ಆವಾಹನಮಂತ್ರದಿಂದ ವ್ಯೋಮ ಮುದ್ರಾಸಮೇತವಾಗಿ ಸೂರ್ಯನ ಸಕಲ ರಶ್ಮಿಗಳನ್ನೂ ಏಕತ್ರ ಆವಾಹನ ಮಾಡ ಬೇಕು. ಪಿಂಡೀಕೃತವಾದ ಆ ರಶ್ಮಿನಿಚಯವನ್ನು ಸೂರ್ಯನ ಮೂಲಮಂತ್ರದಿಂದ ಮತ್ತೆ ಆವಾಹನೆಮಾಡಬೇಕು. ಸ್ಥಾಪನಮಂತ್ರದಿಂದ ಆ ಮಂಡಲದಲ್ಲಿ ಸಕಲ ರಶ್ಮಿನಿಚಯವನ್ನೂ ಸ್ಥಿರಗೊಳಿಸಬೇಕು.

೯೯-೧೦೦. ಹೃದಾದಿ ಷಡ್ಬೀಜಗಳನ್ನೂ, ಹೃದಯಾದಿ ಷಡಂಗಗಳನ್ನೂ, ಪ್ರಣವಸಹಿತವಾಗಿ ವಿನ್ಯಾಸ ಮಾಡಬೇಕು. ಕಂಠದಿಂದ ಹಿಡಿದು ಪಾದಪರ್ಯಂತ ವಾಗಿ ಖಖೋಲ್ಕರೂಪಿಯಾದ ದ್ವಾದಶಾದಿತ್ಯ ದೇವತಾಸ್ವರೂಪನೆನಿಸಿದ ಪದ್ಮ ಹಸ್ತನೂ ಮಹಾ ತೇಜಸ್ವಿಯೂ ಆದ ಸೂರ್ಯದೇವನನ್ನು ಧ್ಯಾನಮಾಡಬೇಕು.

೧೦೧-೧೦೩. ಕ್ರಮವಾಗಿ ಶಿರಸ್ಸು, ಹೃದಯ, ಶಿಖಾ, ಕವಚ ಮುಂತಾದ ಅಂಗಸ್ಥಾನಗಳನ್ನು ವ್ಯೋಮಮೂರ್ಧಸ್ಥಾನಗಳಲ್ಲಿ ಪೂಜಿಸಬೇಕು. ಪದ್ಮಪತ್ರದ

ಪದ್ಮಪತ್ರಾಗ್ರವೃಂದಾಂತೇ ಜ್ವಲದಸ್ತಂ ತಥೈವ ಚ ।
ಮಹಾಶ್ವೇತೋ ದಂಡಪಾಣಿರರುಣಃ ಪಿಂಗಲಸ್ತಥಾ ॥ ೧೦೨ ॥

ದಿಕ್ಷುಕೇಸರಮೂಲೇ ತು ನ್ಯಸ್ಯ ಐಂದ್ರೀಕ್ರಮಾದಿಮೋ ।
ಕೇಸರಾಗ್ರೇ ತು ಪದ್ಮಸ್ಯ ಪತ್ರೇಷ್ವಭ್ಯರ್ಚ್ಯ ಪೂರ್ವವತ್ ॥ ೧೦೩ ॥

ತತ್ರ ತತ್ಕರ್ಣಿಕಾಮಧ್ಯೇ ತೇಜೋರೂಪಂ ವಿಚಿಂತಯೇತ್ ।
ವಿನ್ಯಸೇದ್ದ್ವಾದಶಾದಿತ್ಯಾನ್ ರುದ್ರಾದೀನ್ ಹಿ ಯಥಾಕ್ರಮಂ ॥ ೧೦೪ ॥

ಹರಿಕೇಶಸ್ತಥಾ ಚೈಂದ್ರೀ ರಥಕೃಚ್ಛ್ರರಥೌಜಸೌ ।
ಪುಂಜಕ್ರತುಸ್ಥಲಯುತೌ ಯೋಜ್ಯೌ ಸವ್ಯಾಪಸವ್ಯಯೋಃ ॥ ೧೦೫ ॥

ನಸೇದ್ದ್ವಾಭ್ಯಾಂ ವಿಶ್ವಕರ್ಮಾ ಪಾರ್ಶ್ವಯೋಶ್ಚ ರಥಸ್ವನಃ ।
ರಥಚಿತ್ರಶ್ಚ ಮೇನಾಖ್ಯಾ ಸಹಜನ್ಯಾನ್ವಿತೌ ತಥಾ ॥ ೧೦೬ ॥

---

ಅಗ್ರಭಾಗದಲ್ಲಿ ಉದಯಾಸ್ತಗಳಿಂದ ಪ್ರಕಾಶಿಸುತ್ತಾ ಶುಭ್ರವರ್ಣದಿಂದಿರುವವನೂ, ದಂಡಪಾಣಿಯೂ, ಅರುಣನೂ, ಪಿಂಗಳನೂ, ಆದ ಸೂರ್ಯದೇವನನ್ನು ಧ್ಯಾನಿಸಬೇಕು. ಪದ್ಮದ ಸಕಲ ದಿಕ್ಕುಗಳಲ್ಲಿಯೂ ಹರಡಿರುವ ಕೇಸರಭಾಗದಲ್ಲಿ ಪೂರ್ವಾದಿಯಾಗಿ ದ್ವಾದಶಕಮಲಪತ್ರಗಳನ್ನೂ ಹಿಂದೆ ಹೇಳಿದಂತೆ ವಿಧಿವತ್ತಾಗಿ ಪೂಜಿಸಬೇಕು.

೧೦೪-೧೦೫. ಕಮಲಗಳ ಕರ್ಣಿಕಾ ಮಧ್ಯದಲ್ಲಿ ತೇಜೋರೂಪನಾದ ಸೂರ್ಯದೇವನನ್ನು ಆವಾಹಿಸಬೇಕು. ಹರಿಕೇಶನನ್ನು ಪೂರ್ವದಿಕ್ಕಿನಲ್ಲಿಯೂ, ರಥಕೃಚ್ಛ್ರ ರಥೌಜಸ, ಪುಂಜಕ್ರತು, ಪುಂಜಿಸ್ಥಲ, ಇವುಗಳನ್ನು ಹರಿಕೇಶನ ಎಡ ಬಲಭಾಗಗಳಲ್ಲಿಯೂ ಪೂಜಿಸಬೇಕು.

೧೦೬-೧೧೦. ದಕ್ಷಿಣಭಾಗದಲ್ಲಿ ವಿಶ್ವಕರ್ಮನನ್ನೂ ಎರಡು ಪಾರ್ಶ್ವಗಳಲ್ಲಿ ರಥಸ್ವನ, ರಥಚಿತ್ರ, ಮೇನಾ, ಸಹಜನ್ಯ, ಈ ದೇವತೆಗಳನ್ನೂ ಆವಾಹಿಸಬೇಕು

ವಿಶ್ವವ್ಯಚಾಃ ಪ್ರತೀಚ್ಯಾಂ ತು ನ್ಯಸ್ಯ ಚಾಶ್ವಸಮೀಪತಃ ।
ಪಾರ್ಶ್ವಯೋರಥ ಪ್ರೋತಶ್ಚ ಮಾಠರೋಥ ಪ್ರಕೀರ್ತಿತಃ ॥ ೧೦೭ ॥

ಪ್ರಮ್ಲೋಚಾಮ್ಲೋಚಸಂಯುಕ್ತೋ ದೇವದೇವಸ್ಯ ಕೀರ್ತಿತಃ ।
ಸಯುದ್ವಸೂತ್ತರಸ್ಯಾಂ ತಾರ್ಕ್ಷ್ಯಶ್ಚಾರಿಷ್ಟನೇಮಿನಾ ॥ ೧೦೮ ॥

ವಿಶ್ವಾಚೀ ಸಪ್ಪತಾಚೀಭ್ಯಾಂ ಸಂಯುಕ್ತೌ ಸವ್ಯನಾಮತಃ ।
ಊರ್ಧ್ವಮರ್ವಾವಸುಸ್ತಸ್ಯ ಸನಜಿಚ್ಚ ಸುಷೇಣಕಃ ॥ ೧೦೯ ॥

ಊರ್ವಶೀ ಪೂರ್ವಚಿತ್ತಿಶ್ಚ ಸಹ ತಾಭ್ಯಾಂ ಯಥಾಕ್ರಮಂ ।
ದೀಪ್ತಾನನಾದ್ಯಾ ಯೇ ಪ್ರೋಕ್ತಾ ದ್ವಾದಶಾರ್ಕಗಣಾಧಿಪಾಃ ॥ ೧೧೦ ॥

ತೇ ಹಿ ಪೂರ್ವಾತ್ಸಮಾರಭ್ಯ ತಸ್ಯಾಃ ಪರ್ಣಸ್ಯ ಸಂಧಿಷು ।
ಕ್ಷುಪಾದ್ಯಾಪರ್ಣತೋ ನ್ಯಸ್ಯಾಃ ಕೇಂದರಾಯಾ ರಥಸ್ಯ ತು ॥ ೧೧೧ ॥

---

ಪಶ್ಚಿಮದಲ್ಲಿ ವಿಶ್ವವ್ಯಚನನ್ನೂ, ಅದರ ಪಾರ್ಶ್ವಗಳಲ್ಲಿ ರಥಪ್ರೋತ, ಮಾಠರ, ಈ ದೇವತೆಗಳನ್ನೂ ಆವಾಹಿಸಬೇಕು, ಉತ್ತರದಿಕ್ಕಿನಲ್ಲಿ ಸಯುದ್ವಸುವನ್ನೂ, ಪಾರ್ಶ್ವ ಗಳಲ್ಲಿ ಪ್ರಮ್ಲೋಚ, ಅಮ್ಲೋಚ, ತಾರ್ಕ್ಷ್ಯ, ಅರಿಷ್ಟನೇಮಿ, ಈ ದೇವತೆಗಳನ್ನು ಪೂಜಿಸಬೇಕು.

ಊರ್ಧ್ವಭಾಗದಲ್ಲಿ ಅರ್ವಾವಸುವನ್ನೂ, ಪಾರ್ಶ್ವಗಳಲ್ಲಿ ಸನಜಿತ್, ಸುಷೇಣಕ ಇವರನ್ನೂ, ಅಧೋಭಾಗದಲ್ಲಿ ಪೂರ್ವಚಿತ್ತಿಯನ್ನೂ ಪಾರ್ಶ್ವಗಳಲ್ಲಿ ಊರ್ವಶೀ, ದೀಪ್ತಾನನ ಇವರನ್ನೂ, ಆವಾಹಿಸಬೇಕು. ಇದಲ್ಲದೆ ಹಿಂದೆ ಹೇಳಿದ ದ್ವಾದಶ ಅರ್ಕ ಗಣಾಧಿಪತಿಗಳನ್ನೂ ಕ್ರಮವಾಗಿ,

೧೧೧-೧೧೩. ಪೂರ್ವಾದಿಯಾಗಿ ದ್ವಾದಶ ಕಮಲಪತ್ರಗಳಲ್ಲಿಯೂ, ಪೂಜಿಸ ಬೇಕು. ಅವುಗಳ ಸಂಧಿಪ್ರದೇಶದಲ್ಲಿ ಕ್ಷುಪಾದಿ ಅಪರ್ಣಾಂತವಾದ ದೇವತೆಗಳನ್ನೂ, ರಥದ ಅಗ್ರಭಾಗದಲ್ಲಿ ಎಂಟು ದಿಕ್ಕುಗಳಲ್ಲಿ, ಚಂದ್ರಾದಿ ಎಂಟು ಗ್ರಹಗಳನ್ನೂ,

ದಿಗ್ವಿದಿಗ್ಗ್ರಹಪರ್ಯಂತೇ ಚಂದ್ರಾದ್ಯಾ ಇಂದ್ರದಿಕ್ಕ್ರಮಾತ್ ।
ವಾಸವಾದೀಂಶ್ಚ ದಿಗ್ದೇವಾನ್ ನ್ಯಸೇದ್ದಿಕ್ಷು ದಶಸ್ವಪಿ ॥ ೧೧೩ ॥

ಏವಂ ವಿನ್ಯಸ್ಯ ಸರ್ವಾಂಸ್ತು ತತಃ ಕುರ್ವೀತ ಪೂಜನಂ ।
ಅಥ ಮಂತ್ರಾನ್ ಪ್ರವಕ್ಷ್ಯಾಮಿ ಯಥಾವದನುಪೂರ್ವಶಃ ॥ ೧೧೪ ॥

ಓಂ ವಿಶ್ವಾತ್ಮನೇನಮಃ

ಓಂ ಹೃದಯಶುಕ್ರಜ್ಯೋತಿಷೇನಮಃ

ಓಂ ಚಿತ್ರಜ್ಯೋತಿಷೇನಮಃ

ಓಂ ಸತ್ಯಜ್ಯೋತಿಷೇನಮಃ

ಓಂ ಜ್ಯೋತಿಷ್ಮದಗ್ನಯೇನಮಃ

ಓಂ ಶುಕ್ರಾಯನಮಃ

ಓಂ ಹರಿತಾಯನಮಃ

ಓಂ ಅತ್ಯಗ್ನಯೇನಮಃ

ಏತೇ ಯಥಾಕ್ರಮಮಶ್ವಾನಾಂ ಸಂಗ್ರಹಾಃ

ಓಂ ಸರ್ಪಾಯನಮಃ ವಾಸುಕಿ ಹೃದಯಂ

ಓಂ ಚಿತ್ರನಾಭಯೇನಮಃ ಚಕ್ರಹೃದಯಂ

ಓಂ ಅರುಣಾಯನಮಃ ಅರುಣಹೃದಯಂ

ಓಂ ಖುತ್ವಿಗ್ವಿಧಾತ್ರೇನಮಃ ಪದ್ಮಹೃದಯಂ

---

ಪೂರ್ವಾದಿಯಾಗಿ ಇಂದ್ರಾದಿ ದಶದಿಕ್ಪಾಲಕರನ್ನೂ, ಆವಾಹಿಸಿ ಪೂಜಿಸಬೇಕು. ಇನ್ನು ಮುಂದೆ ಕ್ರಮವಾಗಿ ಆಯಾಯಾ ದೇವತೆಗಳ ಪೂಜಾಮಂತ್ರಗಳನ್ನು ವಿವರಿಸುವೆನು.

ಮೇಲೆಹೇಳಿದ ಮಂತ್ರಗಳು ಸೂರ್ಯನ ಏಳು ಕುದುರೆಗಳನ್ನೂ ಪೂಜಿಸುವ ಮಂತ್ರಗಳು.

ಓಂ ಆದಿತ್ಯಾಯ ಹೇಹೇ ಮಿಹಿರಾಗಚ್ಛ ಗಚ್ಛಹುಂ ಖ ಠಠಃ
(ಸರ್ವಾಹ್ಲಾದನಮಂತ್ರಾಃ)
ಖಖೋಲ್ಕಾಯ ಠಠಃ (ಮೂಲಮಂತ್ರವು)
ಓಂ ವ್ಯೋಮವ್ಯಾಪಿನೇ ಸರ್ವಲೋಕಾಧಿಪತಯೇ ತಿಷ್ಠ ತಿಷ್ಠ
ಠಠಃ (ಸ್ಥಾಪನಮಂತ್ರಃ)

ಓಂ ಅರ್ಕಾಯ ಠಠಃ ಹೃದಯಂ

ಓಂ ಪ್ರದೀಪ್ತಾಯ ,, ಶಿರಃ

ಓಂ ವಿಪಿಟಯೇ ,, ಶಿಖಾಂ

ಓಂ ಜಗಚ್ಚಕ್ಷುಷೇ ,, ನೇತ್ರಂ

ಓಂ ಪದ್ಮಾಕರಾಯ ಹುಂ ಠಃ ಠಃ ಕವಚಂ

ಓಂ ಮಹಾತೇಜಸೇ ಹುಂ ಫಡಸ್ತ್ರಂ

ಓಂ ಗಂ ಗಣಾಧಿಪತಯೇ ಸಹಸ್ರಕಿರಣಾಯ
ಸಂರೋಧಾತ್ಮನೇನಮಃ (ಸಂರೋಧಮಂತ್ರಃ)
ಓಂ ಆಕಾಶವಿಕಾಸಿನೇ ಜಗಚ್ಚಕ್ಷುಷೇ ಸಾನ್ನಿಧ್ಯಂ ಕುರು ಕುರು
ಠಠಃ (ಸನ್ನಿಧಾಪನಮಂತ್ರಃ)
ಓಂ ಇರಿಟಿಚಿರಿಟಯೇ ದೀಪ್ತಾಂಘ್ರಯೇ ನಮಃ (ಪಾದ್ಯಮಂತ್ರಃ)
ಓಂ ಗಭಸ್ತಿನೇ ಕಿಲಿಕಿಲಿ ಕಾಲಿ, ಕಾಲ ಸರ್ವಾರ್ಥಸಾಧಿನೀ ಕೆಕಿ,
ಕೆಕಿ ಹುಂ ನಮಃ
ಓಂ ಸವಿತ್ರೇ ವರುಣಾಯನಮಃ (ಸ್ನಾನಮಂತ್ರಃ)
ಓಂ ಖಖನೇತ್ರಾಯ ಸಹಸ್ರತನವೇ ನಮಃ (ವಸ್ತ್ರಮಂತ್ರಃ)
ಓಂ ಪಿಂಗಲಾಯಾಛಲೇನಮಃ (ಗಂಧಮಂತ್ರಃ)

---

(ಈ ಮಂತ್ರದಿಂದ ಸ್ಥಾಪನಮಾಡಬೇಕು.)

ಓಂ ಹಿಲಿಹಿಲಿ ಮಹಾಮಾಲಾಧರತೇಜೋಧಿಪತಯೇನಮಃ

(ಪುಷ್ಪಮಂತ್ರಃ)

ಓಂ ಜ್ವಲಿತಾರ್ಕಾಯ ನಮಃ (ಧೂಪಮಂತ್ರಃ)

ಓಂ ಮಿಹಿರಾಯ ಜ್ವಲವಿಚಿತ್ರರತ್ನಧಾರಿಣೇ ನಮಃ

(ಭೂಷಣಮಂತ್ರಃ)

ಓಂ ಭ್ರಂ ಆನಿಂಬಮಂತ್ರೇಣೈನಂ ಪೂಜಯೇತ್

ಓಂ ಮಹಾಶ್ವೇತಾಯೈನಮಃ

ಓಂ ದಂಡಪಾಣಯೇನಮಃ

ಓಂ ಅರುಣಾದೇವ್ಯೈನಮಃ

ಓಂ ಪಿಂಗಳಾಯೈನಮಃ

ಓಂ ಅರುಣಾಯ ಹುಂ ನಮಃ

ಓಂ ಸೂರ್ಯಾಯ ಹುಂ ನಮಃ

ಓಂ ಅಂಶುಮಾಲಿನೇ ಹುಂ ನಮಃ

ಓಂ ಧಾತ್ರೇ ಹುಂ ನಮಃ

ಓಂ ಇಂದ್ರಾಯ ಹುಂ ನಮಃ

ಓಂ ರವಯೇ ಹುಂ ನಮಃ

ಓಂ ಗಭಸ್ತಿನೇ ಹುಂ ನಮಃ

ಓಂ ಯಮಾಯ ಹುಂ ನಮಃ

ಓಂ ಸ್ವರ್ಣರೇತಸೇ ಹುಂ ನಮಃ

ಓಂ ತ್ವಷ್ಟ್ರೇ ಹುಂ ನಮಃ

ಓಂ ಮಿತ್ರಾಯ ಹುಂ ನಮಃ

ಓಂ ವಿಷ್ಣವೇ ಹುಂ ನಮಃ

ಏತೇ ಆದಿತ್ಯಾನಾಂ ಮಂತ್ರಾಃ

---

ನ್ಯಾಸ ಮಂತ್ರದಿಂದ ಷಡಂಗನ್ಯಾಸ ಮಾಡಬೇಕು.

ನಾಮ ಮಂತ್ರಗಳಿಂದ ದೇವತೆಗಳನ್ನು ಪೂಜಿಸಬೇಕು.

ಓಂ ಹರಿಕೇಶಾಯನಮಃ

ಓಂ ರಥಕೃಚ್ಛ್ರಾಯನಮಃ

ಓಂ ರಥೌಜಸೇನಮಃ

ಓಂ ಪುಂಜಿಕಸ್ಥಲಾಯೈನಮಃ

ಓಂ ಕ್ರತುಸ್ಥಲಾಯೈನಮಃ

ಓಂ ವಿಶ್ವಕರ್ಮಣೇನಮಃ

ಓಂ ರಥಸ್ವನಾಯನಮಃ

ಓಂ ರಥಚಿತ್ರಾಯನಮಃ

ಓಂ ಮೇನಕಾಯೈನಮಃ

ಓಂ ಸಹಜನ್ಯಾಯೈನಮಃ

ಓಂ ವಿಶ್ವವ್ಯಚಸೇನಮಃ

ಓಂ ರಥಪ್ರೋತಾಯನಮಃ

ಓಂ ಅಂಶುಮಾತರಾಯನಮಃ

ಓಂ ಪ್ರಮ್ಲೋಚಂತ್ಯೈನಮಃ

ಓಂ ಅನುಮ್ಲೋಚಂತ್ಯೈನಮಃ

ಓಂ ತಾರ್ಕ್ಷ್ಯಾಯನಮಃ

ಓಂ ಅರಿಷ್ಟನೇಮಿನೇನಮಃ

ಓಂ ವಿಶ್ವಾಚ್ಯೈನಮಃ

ಓಂ ಘೃತಾಚ್ಯೈನಮಃ

ಓಂ ಅರ್ವಾಗ್ವಸವೇನಮಃ

---

ಹಿಂದೆ ಹೇಳಿದವುಗಳು ಆದಿತ್ಯದೇವತಾಕವಾದ ಮಂತ್ರಗಳು.

ಓಂ ಸೇನಜಿತೇನಮಃ

ಓಂ ಸುಷೇಣಾಯನಮಃ

ಓಂ ಊರ್ವಶ್ಯೈನಮಃ

ಓಂ ಪೂರ್ವಚಿತ್ಯೈನಮಃ

ಏತೇ ರಶ್ಮಿಪತೀನಾಂ ಅಪ್ಸರಸಾಂ ಚ ಮಂತ್ರಾಃ

ಓಂ ಪ್ರದೀಪ್ತಾನನಾಯನಮಃ

ಓಂ ಕುಮಾರಾಯನಮಃ

ಓಂ ಘೃಣಿಪಾಯನಮಃ

ಓಂ ಅಂಗವಾಹಾಯನಮಃ

ಓಂ ವಿರಾಜೇನಮಃ

ಓಂ ಕೇಶಿನೇನಮಃ

ಓಂ ಸುರರಾಜಾಯನಮಃ

ಓಂ ಅರಿಷ್ಟಾಯನಮಃ

ಓಂ ಮಾಷಾಯನಮಃ

ಓಂ ಅನಂತಾಯನಮಃ

ಓಂ ನಿಕ್ಷುಭಾಯನಮಃ

ಓಂ ತೇಜೋವಹಾಯನಮಃ

ಏತೇ ಗಣಾಧಿಪಾನಾಂ ಮಂತ್ರಾಃ

---

ಇವು ರಶ್ಮಿಪತಿಗಳನ್ನೂ ಅಪ್ಸರಸ್ಸುಗಳನ್ನೂ ಪೂಜಿಸುವ ಮಂತ್ರಗಳು. ಮೇಲೆ ಹೇಳಿದ ನಾಮಮಂತ್ರಗಳಿಂದ ಗಣಾಧಿಪರನ್ನು ಪೂಜಿಸಬೇಕು.

ಓಂ ಕ್ಷುಪಾಯೈನಮಃ

ಓಂ ನೈತ್ರ್ಯೈನಮಃ

ಓಂ ಪ್ರೇಮಾಯೈನಮಃ

ಓಂ ಶ್ಯಾಮಾಯೈನಮಃ

ಓಂ ರೋಚಿಷೇನಮಃ

ಓಂ ದೀಪ್ತಯೇನಮಃ

ಓಂ ಸುವರ್ಚಲಾಯೈನಮಃ

ಏತೇ ಮಾತೃಮಂತ್ರಾಃ

ಓಂ ಚಂದ್ರಾಯ ಹುಂ ನಮಃ

ಓಂ ಶುಕ್ರಾಯ ಹುಂ ನಮಃ

ಓಂ ಬೃಹಸ್ಪತಯೇ ಹುಂ ನಮಃ

ಓಂ ಅಂಗಾರಕಾಯ ಹುಂ ನಮಃ

ಓಂ ಶನೈಶ್ಚರಾಯ ಹುಂ ನಮಃ

ಓಂ ರಾಹವೇ ಹುಂ ನಮಃ

ಓಂ ಕೇತವೇ ಹುಂ ನಮಃ

ಓಂ ಬುಧಾಯ ಹುಂ ನಮಃ

ಏತೇ ಗ್ರಹಾಣಾಂ ಮಂತ್ರಾಃ

ಓಂ ಇಂದ್ರಾಯ ಸುರಾಧಿಪತಯೇ ನಮಃ

ಓಂ ಅಗ್ನಯೇ ತೇಜೋಧಿಪತಯೇ ನಮಃ

ಓಂ ಯಮಾಯ ಪ್ರೇತಾಧಿಪತಯೇ ನಮಃ

ಓಂ ನಿರೃತಯೇ ರಕ್ಷೋಧಿಪತಯೇ ನಮಃ

---

ಇವು ಮಾತೃದೇವತಾ ಮಂತ್ರಗಳು.

ಓಂ ವರುಣಾಯ ಜಲಾಧಿಪತಯೇ ನಮಃ
ಓಂ ವಾಯವೇ ಪ್ರಾಣಾಧಿಪತಯೇ ನಮಃ
ಓಂ ಕುಬೇರಾಯ ಯಕ್ಷಾಧಿಪತಯೇ ನಮಃ
ಓಂ ಶಂಕರಾಯ ಸರ್ವವಿದ್ಯಾಧಿಪತಯೇ ನಮಃ
ಓಂ ಬ್ರಹ್ಮಣೇ ಸರ್ವಲೋಕಾಧಿಪತಯೇ ನಮಃ
ಓಂ ಶೇಷಾಯ ಸರ್ವನಾಗಾಧಿಪತಯೇ ನಮಃ

ಏತೇ ದಿಗ್ದೇವತಾನಾಂ ಮಂತ್ರಾಃ

ಓಂ ತೇಜೋಧಿಪತಯೇ ನಮಃ (ದೀಪಮಂತ್ರಃ)
ಓಂ ಅರ್ಕಾಯ ಗೃಹಾಣಾಮೃತಂ (ನೈವೇದ್ಯಮಂತ್ರಃ)
ಓಂ ಜಲಕುಂದಲಾಯ ದಿವ್ಯಾಯ ತೋದ್ಯಪ್ರಿಯಾಯ ನಮಃ
(ಆತೋದ್ಯಮಂತ್ರಾಃ)
ಓಂ ಅಂಶುಮತೇ ದೇವಾಯ ಠ ಠಃ (ಪೂಜಾಜಪನ್ಯಾಸ ಮಂತ್ರಃ)
ಓಂ ನಮಸ್ತೇ ದಿವ್ಯರೂಪಾಯ ಸರ್ವಭೂತಾತ್ಮನೇ ನಮಃ
ಸರ್ವತೇಜೋಧಿಪತಯೇ ಭಾವನೇ ಲೋಕಚಕ್ಷುಷೇ॥ ೧೧೪ ॥
(ಸ್ತೋತ್ರ ಮಂತ್ರಃ)

---

(ಇವು ದಿಗ್ದೇವತಾ ನಾಮ ಮಂತ್ರಗಳು.)

ಇದು ನೈವೇದ್ಯ ಸಮರ್ಪಣಾನಂತರ ಮಾಡುವ ಉಪಚಾರಮಂತ್ರ.

೧೧೪. ಎಲೈ ಸೂರ್ಯಭಗವಂತನೇ, ನೀನು ದಿವ್ಯವಾದ ರೂಪವುಳ್ಳವನು. ಸರ್ವಭೂತಾತ್ಮಕನು. ಸಕಲ ತೇಜೋಸ್ವರೂಪನು. ಸಕಲ ಕಿರಣಗಳಿಂದ ಕೂಡಿ ಲೋಕಕ್ಕೆ ನೇತ್ರರೂಪದಿಂದ ಪ್ರಕಾಶಿಸುವವನೇ, ನಿನಗೆ ನಮಸ್ಕಾರ, ಎಂದು ಸ್ತೋತ್ರಮಾಡಬೇಕು.

ಅಗ್ನಿಕ್ರಿಯಾಂ ತತೋ ವಕ್ಷ್ಯೇ ಮಂತ್ರಮುದ್ರಾದಿತಃ ಕ್ರಮಾತ್ ।
ಉಲ್ಲೇಖನಂ ಧಾರಣಾಂ ತು ಕುರ್ಯಾದರ್ಕಹೃದಸ್ತಥಾ ॥ ೧೧೫ ॥

ಆಜ್ಯೇನ ವ್ರೀಹಿಭಿಃ ಪಕ್ವೈರರ್ಕಸ್ಯ ಕುಸುಮೈಶ್ಚ ವಾ ।
ಪ್ರತ್ಯೇಕಮಾಹುತೀರ್ದದ್ಯಾದ್ಯೇ ಪೂಜ್ಯಾಃ ಪರಿಕೀರ್ತಿತಾಃ ॥ ೧೧೬ ॥

ಓಂ ಸಂಹರಸಂಹರ ವಿರೋಚನ ಠಃ ಠಃ (ಉಪಸಂಹಾರ ಮಂತ್ರಃ)
ಓಂ ಶಾಂತಾತ್ಮನೇ ಸರ್ವಲೋಕಾಯ ಪ್ರಿಯಾಯ ಠಃ ಠಃ
(ಶುದ್ಧಿಮಂತ್ರಃ)

ಓಂ ಖಖೋಲ್ಕಾಯ ವಿದ್ಮಹೇ ಸಹಸ್ರಕಿರಣಾಯ ಧೀಮಹಿ ।
ತನ್ನೋರವಿಃ ಪ್ರಚೋದಯಾತ್ ।

ನಮಸ್ಕಾರ ವಿಧಾವರ್ಕಹೃದಯೇನ ದಾನಃ

ಗಚ್ಛಾಗಚ್ಛಾಸ್ಸ್ವವರ್ಗೇಣ ದ್ವಾದಶಾದಿತ್ಯವಿಗ್ರಹಂ ।
ಓಂ ಹಿಲಿಹಿಲಿ ಗಚ್ಛದೇವಯಥಾಗತಃ ಸ್ವಾಹಾ ।

ಇತಿ ವಿಸರ್ಜನ ಮಂತ್ರಃ

---

೧೧೫-೧೧೬. ಇನ್ನು ಮುಂದೆ ಅಗ್ನಿಕ್ರಿಯೆಯನ್ನು ಮಾಡುವ ವಿಧಾನವನ್ನೂ, ಅದಕ್ಕೆ ಸಂಬಂಧಿಸಿದ ಮಂತ್ರಮುದ್ರಾದಿಗಳನ್ನೂ ಉಲ್ಲೇಖಿಸಿ ಸಂಸ್ಕಾರಗಳನ್ನೂ ಅರ್ಕಹೃದಯವನ್ನೂ ಹೇಳುವೆನು. ಸೂರ್ಯಪ್ರೀತ್ಯರ್ಥವಾದ ಹೋಮಗಳಲ್ಲಿ ಆಜ್ಯ ಅನ್ನ, ಎಕ್ಕದಹೂವು, ಇವುಗಳನ್ನು ಮಂತ್ರವತ್ತಾಗಿ ಹೋಮಮಾಡಬೇಕು.

ಈ ಮಂತ್ರಗಳಿಂದ ಉಪಸಂಹಾರವನ್ನೂ, ಶುದ್ಧಿಯನ್ನೂ ಹೊಂದಬೇಕು.

ಅರ್ಕ ಹೃದಯದಿಂದ ದಾನಮಾಡಬೇಕು.

" ಎಲೈ ಸೂರ್ಯದೇವನೇ, ದ್ವಾದಶಾದಿತ್ಯ ವಿಗ್ರಹವನ್ನು, ಈಗಲೇ ಪ್ರವೇಶಿಸು ಮತ್ತು ತನ್ನ ಪರಿವಾರದೊಡನೆ ನಿನ್ನ ಸ್ಥಾನಕ್ಕೆ ತೆರಳುವವನಾಗು " ಎಂಬರ್ಥ ಬೋಧಕವಾದ ಮಂತ್ರದಿಂದ ವಿಸರ್ಜನೆಮಾಡಬೇಕು.

ಓಂ ಚಂಡಪಿಂಗಳಾಯ ಠಠಃ ನಿರ್ಮಾಲ್ಯಮಂತ್ರಃ

ಏತಸ್ಯ ಪ್ರತ್ಯಹಂ ಕುರ್ಯಾದ್ರವಿವಾಸರ ಏವ ಚ ।
ಸಕೃದ್ವಾ ಯೋ ವಿಧಾನಂ ಚ ತಸ್ಯ ಪುಣ್ಯಫಲಂ ಶೃಣು ॥ ೧೧೭ ॥

ಆಯುರಾರೋಗ್ಯಮೈಶ್ವರ್ಯಂ ಬಲಂ ತೇಜೋ ಯಶಸ್ತಥಾ ।
ಪುತ್ರಾನ್ ಪ್ರಾಪ್ನೋತ್ಯಪುತ್ರಶ್ಚ ಸೂರ್ಯಲೋಕಂ ಸಗಚ್ಛತಿ ॥ ೧೧೮ ॥

(ಅಷ್ಟ ಪುಷ್ಪಿಕಾವಿಧಿಃ)

॥ ದೇವಾ ಊಚುಃ ॥

ಅರ್ಕೇ ಕಾರ್ಯಾ ಸದಾ ಭಕ್ತಿಃ ಸರ್ವಕಾಲಮತಂದ್ರಿತೈಃ ।
ಆಚಾರ್ಯಸ್ಯ ಗುರೂಣಾಂ ಚ ರವಿಶಾಸ್ತ್ರವಿದಾಂ ತಥಾ ॥ ೧೧೯ ॥

ಪಂಚಮ್ಯಾಂ ತು ಹವಿರ್ಭುಕ್ತ್ವಾ ಸಾಯಂ ದಶನಧಾವನಂ ।
ಭಕ್ಷಯಿತ್ವಾ ತು ಗೃಹ್ಣೀಯಾತ್ ವ್ರತಂ ನಿಯಮಪೂರ್ವಕಂ ॥ ೧೨೦ ॥

ವ್ಯಾಯಾಮಮೈಥುನಕ್ರೋಧಾನ್ಮತ್ಸ್ಯಂ ಮಾಂಸಂ ಚ ಗೃಂಜನಂ ।
ಹಿಂಸಾಮಧುಶಿಲಾಪೃಷ್ಠನಿವೃತ್ತಂ ಕಾಂಸ್ಯಭೋಜನಂ ॥ ೧೨೧ ॥

---

೧೧೭-೧೧೮. ಈ ರೀತಿ ಪೂಜೆಯನ್ನು ಯಾರು ಪ್ರತಿನಿತ್ಯವೂ ಅಥವಾ ಭಾನುವಾರದಲ್ಲಾದರೂ ಭಕ್ತಿಯಿಂದ ಮಾಡುವರೋ, ಅವರಿಗೆ ಆಯುಸ್ಸು, ಆರೋಗ್ಯ ಐಶ್ವರ್ಯ, ಬಲ, ತೇಜಸ್ಸು, ಕೀರ್ತಿ, ಪುತ್ರಸಂಪತ್ತು ಮುಂತಾದುವುಗಳು ಲಭಿಸುವುವು ಕೊನೆಯಲ್ಲಿ ಸೂರ್ಯಲೋಕವೂ ಸಹ ಪ್ರಾಪ್ತಿಯಾಗುವುದು.

೧೧೯-೧೨೦. ಆಚಾರ್ಯರಲ್ಲಿ, ಗುರುಗಳಲ್ಲಿ ಸೂರ್ಯವಿಷಯಗಳನ್ನೆಲ್ಲಾ ಅರಿತಿರುವಂತಹ ಪೂಜ್ಯರಲ್ಲಿಯೂ, ಸೂರ್ಯದೇವನಲ್ಲಿಯೂ ಸರ್ವದಾ ಸ್ಥಿರವಾದ ಭಕ್ತಿಯನ್ನಿಡಬೇಕು. ಸೂರ್ಯವ್ರತಮಾಡುವವರು, ಪಂಚಮಿಯದಿನ ಹವಿಸ್ಸನ್ನು ಭಕ್ಷಿಸಿ, ಸಾಯಂಕಾಲ ದಂತಧಾವನಮಾಡಿಕೊಳ್ಳಬೇಕು. ಅಂದಿನಿಂದಲೇ ವ್ರತವನ್ನು ವಿಧಿವತ್ತಾಗಿ ಆರಂಭಿಸಬೇಕು.

೧೨೧-೧೨೨. ಷಷ್ಠಿಯದಿನ, ವ್ಯಾಯಾಮ, ಸ್ತ್ರೀಸಂಭೋಗ, ಕ್ರೋಧ, ಮತ್ಸ್ಯ, ಮಾಂಸ, ಮದ್ಯ, ಹಿಂಸಾಕಾರ್ಯಗಳು, ಜೇನುತುಪ್ಪದಸೇವನೆ, ಪ್ರಾಣಿಗಳಮೇಲೆ

ಉದಕ್ಯಾಃ ಸ್ಪರ್ಶನಂ ತೈಲಂ ಸರ್ವನಿರ್ಮಾಲ್ಯಲಂಘನಂ ।
ಷಷ್ಠ್ಯಾಂ ತು ವರ್ಜನೀಯಾನಿ ಸಪ್ತಮ್ಯಾಂ ಚೈವ ದೀಕ್ಷಿತಃ ॥ ೧೨೨ ॥

ಸಕಲೋ ನಿಷ್ಕಲಃ ಸೂರ್ಯ ಇತ್ಯುಕ್ತಂ ಹಿ ತ್ವಯಾ ವಿಭೋ ।
ಸಕಲಂ ನಿಷ್ಕಲಂ ಚೈವ ಸಮಾಖ್ಯಾತುಮಿಹಾರ್ಹಸಿ ॥ ೧೨೩ ॥

॥ ದೇವ ಉವಾಚ ॥

ಸಕಲೋ ನಿಷ್ಕಲಶ್ಚೈವ ಯಥಾ ಸೂರ್ಯಃ ಪ್ರಕೀರ್ತಿತಃ ।
ಕಥ್ಯಮಾನಂ ಮಯಾ ಸರ್ವಂ ನಿಬೋಧತ ತಥಾ ಸುರಾಃ ॥ ೧೨೪ ॥

ನಿರ್ವ್ಯಾಪಾರಂ ತಥಾಭೂತಮಾಸೀತ್ಸರ್ವಮಿದಂ ಜಗತ್ ।
ನಿರ್ದ್ರೋಹಮಮಲಂ ಜ್ಞಾನಂ ನಿರಾನಂದಂ ನಿರಾತ್ಮಕಂ ॥ ೧೨೫ ॥

---

ಕುಳಿತು ಪ್ರಯಾಣಮಾಡುವುದು. ಕಂಚಿನ ಪಾತ್ರೆಯಲ್ಲಿ ಊಟಮಾಡುವುದು, ಬಹಿಷ್ಠೆಯಾದ ಸ್ತ್ರೀಯ ಸ್ಪರ್ಶನ, ಅಭ್ಯಂಜನಸ್ನಾನ, ನಿರ್ಮಾಲ್ಯತಿರಸ್ಕಾರ, ಇಂತಹ ಕೆಲಸಗಳನ್ನು ತ್ಯಜಿಸಬೇಕು. ಸಪ್ತಮಿಯದಿನವೇ ಸೂರ್ಯವ್ರತ ದೀಕ್ಷೆಯನ್ನು ವಹಿಸಿಕೊಳ್ಳಬೇಕು.

೧೨೩. ಒಂದುಸಾರಿ ದೇವತೆಗಳು ಸೂರ್ಯನನ್ನು ಸಂಬೋಧಿಸಿ, ಸ್ವಾಮಿಯೇ, ನಿನ್ನನ್ನು ಕಲಾತ್ಮಕನೆಂದೂ, ಕಲಾರಹಿತನೆಂದೂ ಹೇಳುತ್ತಿರುವರು. ದೇವ ದೇವನೇ, ನಿನ್ನಲ್ಲಿರುವ ಕಲಾಸಾಹಿತ್ಯ ಮತ್ತು ಕಲಾರಾಹಿತ್ಯ ಇದನ್ನು ದಯೆಯಿಂದ ವಿವರಿಸಬೇಕು ಎಂದು ಪ್ರಾರ್ಥಿಸಿಕೊಳ್ಳಲು ಆಗ ಸೂರ್ಯದೇವನು ಹೀಗೆಂದು ಉಪ ದೇಶಿಸಿದನು.

೧೨೪-೧೨೫. ಎಲೈ ದೇವತೆಗಳಿರಾ, ಸೂರ್ಯದೇವನು ಸಕಲನೂ, ನಿಷ್ಕಲನೂ ಹೇಗೆಂಬುದನ್ನು ನಾನು ಈಗ ವಿವರಿಸುವೆನು. ಸಾವಧಾನದಿಂದ ಕೇಳಿರಿ. ಈ ಜಗ ತ್ತೆಂಬುದು ವ್ಯಾಪಾರ ರಹಿತವಾದದ್ದು, ದ್ರೋಹವನ್ನರಿಯದುದು. ಜ್ಞಾನರೂಪಿ ಯಾಗಲಿ, ಆನಂದ ಸ್ವರೂಪನಾದ ಆತ್ಮವಸ್ತುವಾಗಲಿ ಈ ಜಗತ್ತಲ್ಲ.

**ಅವ್ಯಕ್ತಂ ಕಾರಣಂ ಯತ್ತನ್ನಿತ್ಯಂ ಸದಸದಾತ್ಮಕಂ ।**
**ಪ್ರಧಾನಂ ಪ್ರಕೃತಿಂ ಚೇತಿ ಯಮಾಹುಸ್ತತ್ವಚಿಂತಕಾಃ ॥ ೧೨೬ ॥**

**ಗಂಧವರ್ಣರಸೈರ್ಹೀನಂ ಶಬ್ದಸ್ಪರ್ಶವಿವರ್ಜಿತಂ ।**
**ಜಗದ್ಯೋನಿಂ ತು ಸರ್ವಾರ್ಥಂ ದೇವಶಕ್ಯಂ ಸನಾತನಂ ॥ ೧೨೭ ॥**

**ಯಮಾಹುಸ್ಸರ್ವಭೂತಾನಾಂ ಪರಮಂ ಕಾರಣಂ ಮಹತ್ ।**
**ಅಯನಾದ್ಯಮಜಂ ಸೂಕ್ಷ್ಮಂ ತ್ರಿಗುಣಂ ಪ್ರಭವಾವ್ಯಯಂ ॥ ೧೨೮ ॥**

**ಯಮಾಹುಃ ಪುರುಷಂ ಶ್ರೇಷ್ಠಂ ಪರಮಂ ಪರಮೇಶ್ವರಂ ।**
**ಯೇನಾತ್ಮನಾ ಸರ್ವಮಿದಂ ಜಗದ್ವ್ಯಾಪ್ತಂ ಚರಾಚರಂ ॥ ೧೨೯ ॥**

**ಜಗತ್ಸೃಷ್ಟಿಕ್ಷಯಾವ್ಯಕ್ತೈರ್ಶ್ಯೋದಿತಃ ಸ ತದಾ ಸ್ವಯಂ ।**
**ಮಹದಾದಿಗುಣೈರ್ಯುಕ್ತಸ್ತೇಜೋರೂಪ ಸಮನ್ವಿತಃ ॥ ೧೩೦ ॥**

---

೧೨೬-೧೨೭. ಅಂತಹ ಜಗತ್ತಿಗೆ ಅವ್ಯಕ್ತಕಾರಣನೂ, ಸದಸದಾತ್ಮಕನೂ, ಆಗಿ ಯಾರನ್ನು ಪ್ರಕೃತಿ, ಪ್ರಧಾನ ಎಂಬ ಹೆಸರಿನಿಂದ ಕರೆಯುವರೋ ಅವನೇ ಸೂರ್ಯದೇವನು. ಗಂಧ, ವರ್ಣ, ರಸ, ಶಬ್ದ, ಸ್ಪರ್ಶ ಮುಂತಾದ ಪಂಚಭೂತದ ವಿಷಯಗಳಿಗೆ ಸೂರ್ಯಪರಮಾತ್ಮನು ಆಶ್ರಯವಿತ್ತಿಲ್ಲ. ಅಂತೂ ಜಗತ್ತಿಗೆ ಮೂಲಕಾರಣನೆನಿಸಿ ಸರ್ವಾರ್ಥಸಾಧನೆಗೂ ಪೂಜ್ಯನೆನಿಸಿ, ಸನಾತನನಾಗಿರುವವನು ಈ ಮಹಾಮಹಿಮನು.

೧೨೮-೧೩೦. ಸಕಲ ಪ್ರಾಣಿಗಳಿಗೂ ಮೂಲಕಾರಣನೆನಿಸಿ, ಅಜರಾಮರಣನೆನಿಸಿ, ಅಜರಾಮರಣನಾಗಿ ಸತ್ತ್ವರಜಸ್ತಮೋಗುಣರೂಪಿಯಾಗಿಯೂ, ನಾಶರಹಿತನಾಗಿಯೂ, ಸೂಕ್ಷ್ಮರೂಪಿಯಾಗಿಯೂ, ಇರುವವನೇ ಸೂರ್ಯಪರಮಾತ್ಮನು ಅವನನ್ನೇ ಪುರುಷಶ್ರೇಷ್ಠನೆಂದೂ, ಪರಮೇಶ್ವರನೆಂದೂ, ಹೇಳುವರು. ಆ ಪರಮಾತ್ಮನೇ ಈ ಚರಾಚರಾತ್ಮಕವಾದ ಜಗದ್ರೂಪದಿಂದ ಪರಿಣತನಾಗಿರುವನು. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಅವ್ಯಕ್ತಕಾರಣನೆನಿಸಿ, ಮಹದಾದಿ ಸಕಲ ಗುಣಗಳಿಂದಲೂ, ತೇಜೋರೂಪದಿಂದಲೂ ಕೂಡಿ ಶೋಭಿಸುತ್ತಿರುವವನೇ ಈ ಸೂರ್ಯದೇವನು.

ಅವ್ಯಕ್ತಂ ಕಾರಣಂ ಯತ್ತದುದ್ದಿಷ್ಟಂ ತ್ರಿಗುಣಾತ್ಮಕಂ ।
ಸ್ವಯಮೇಕಾಗ್ರಮಾಪನ್ನಂ ಖಖೋಲ್ಕಮಿತಿ ತತ್ಸ್ಮೃತಂ ॥ ೧೩೧ ॥

ಯೋಗಮಾಸ್ಥಾಯ ಪರಮಂ ಸ ವೇದಸ್ಸರ್ವತತ್ತ್ವವಿತ್ ।
ತತಃ ಪ್ರಜಾಸ್ಸಸ್ರುಕಾಮಃ ಸಸರ್ಜ ಸಲಿಲಂ ಪುನಃ ॥ ೧೩೨ ॥

ಅಪ ಏಕಾರ್ಣವೇ ಚೈವ ಯದಸ್ಯಾಯತನಂ ಗತಃ ।
ನಾರಾಸ್ತಾಸ್ಸೃಷ್ಟಿಕರಣೇ ತೇನ ನಾರಾಯಣಸ್ತು ಸಃ ॥ ೧೩೩ ॥

ಏಕಾರ್ಣವೇ ತತಸ್ತಸ್ಮಿನ್ನಿರ್ಭಾಗೇ ಸಮಂತತಃ ।
ನಾರಾಯಣಃ ಖಖೋಲ್ಕೋಽಸೌ ಸುಷ್ವಾಪ ಸಲಿಲೇ ರವಿಃ ॥ ೧೩೪ ॥

ದಿವ್ಯಂ ಶತಸಹಸ್ರಂ ಚ ವತ್ಸರಾಣಾಂ ತದಾಂಭಸಿ ।
ತೇಜೋರೂಪೇಣ ಮಹತಾ ನ್ಯವಸತ್ಸಲಿಲೇ ಸ್ವಯಂ ॥ ೧೩೫ ॥

---

೧೩೧-೧೩೨. ಸೂರ್ಯದೇವನು ಸಕಲ ಲೋಕಕ್ಕೂ ಅವ್ಯಕ್ತವಾದ ಕಾರಣನೆನಿಸಿ, ಸತ್ತ್ವರಜಸ್ತಮೋಗುಣಭರಿತನಾಗಿ, ಸಜಾತೀಯದ್ವಿತೀಯರಹಿತನಾಗಿ ಖಖೋಲ್ಕ ರೂಪಿಯಾಗಿರುವನು. ಅಂತಹ ದೇವದೇವನೆನಿಸಿದ ಸೂರ್ಯಪರಮಾತ್ಮನು ಲೋಕ ಸೃಷ್ಟಿಕಾಮನಾಗಿ ಸೃಷ್ಟಿಯೋಗವನ್ನವಲಂಬಿಸಿ, ಪ್ರಥಮದಲ್ಲಿ ಜಲರಾಶಿಯನ್ನು ಸೃಷ್ಟಿಮಾಡಿದನು.

೧೩೩-೧೩೪. ಆ ಜಲರಾಶಿಯು ಜಗತ್ತನ್ನೆಲ್ಲಾ ವ್ಯಾಪಿಸಿದ್ದಿತು. ಅದೇ ಸೂರ್ಯ ಭಗವಂತನಿಗೆ ಆದಿಸೃಷ್ಟಿಯಾಯಿತು. ಹಾಗೆ ನರಸೃಷ್ಟಿಗೆ ಕಾರಣಭೂತವಾದ ಜಲ ರಾಶಿಗೆ ನಾರಾ ಎಂದು ಹೆಸರು. ಅದನ್ನೇ ಸ್ಥಾನವನ್ನಾಗಿ ಮಾಡಿಕೊಂಡುದರಿಂದ ಸೂರ್ಯಭಗವಾನನಿಗೆ ನಾರಾಯಣನೆಂದು ಹೆಸರು ಬಂದಿತು. ಅಂತಹ ಖಖೋಲ್ಕ ರೂಪಿಯಾದ ನಾರಾಯಣನು ಅಂತಹ ಜಲರಾಶಿಯಲ್ಲಿ ಯೋಗನಿದ್ರೆಮಾಡಿದನು.

೧೩೫-೧೩೬. ಹಾಗೆ ಜಲರಾಶಿಯಲ್ಲಿ ನೂರುಸಾವಿರ ದೇವವರುಷ ಪರ್ಯಂತ ನಿದ್ರಿಸಿದನು. ಆಗ ಸ್ವಾಮಿಯ ಆಕಾರವು ಕೇವಲ ತೇಜೋಮಯವಾಗಿದ್ದಿತು.

ತತಃ ಕಾಲೇ ವ್ಯತೀತೇ ತು ಕೃತ್ವಾತ್ವಂಡಂ ಹಿರಣ್ಮಯಂ ।
ಆತ್ಮಾನಂ ಸೃಷ್ಟವಾಂಸ್ತತ್ರಾನ್ಯೈಕಶಕ್ತಿಸಮನ್ವಿತಃ ॥ ೧೩೬ ॥

ಪಂಚಾನಾಂ ತು ಸುಖಾದೀನಾಂ ಕಾರಣಂ ಹಿ ಯತಸ್ಸ್ಮೃತಃ ।
ಖಖೋಲ್ಕ ಇತಿ ತೇನಾಸೌ ನಿಗಮಜ್ಞೈರುದಾಹೃತಃ ॥ ೧೩೮ ॥

ಹಿರಣ್ಯೇನ ಚ ಗರ್ಭಸ್ಥೋ ಯಸ್ಮಾದೇಷ ಸಮಾವೃತಃ ।
ಹಿರಣ್ಯಗರ್ಭ ಇತ್ಯೇವಂ ತಸ್ಮಾತ್ಸ ತು ನಿಗದ್ಯತೇ ॥ ೧೩೯ ॥

ಬೃಹತ್ವಾದ್ಬೃಂಹಣತ್ವಾ ದ್ವಾಬ್ರಹ್ಮಾಸೌ ಪರಿಕೀರ್ತಿತಃ ।
ಪುರೇ ಪ್ರತಿಷ್ಠಿತೇ ತತ್ವಾಚ್ಚ ಪುರುಷತ್ವಮುಪಾಗತಃ ॥ ೧೪೦ ॥

ದೇವೇಷು ಚ ಮಹಾನ್ ದೇವೋ ಮಹಾದೇವಸ್ತತಸ್ಸ್ಮೃತಃ ।
ಸ ದೇಶತ್ವಾಚ್ಚ ಲೋಕಾನಾಮವಶ್ಯತ್ವಾನ್ಮಹೇಶ್ವರಃ ॥ ೧೪೧ ॥

---

ಅಷ್ಟು ಕಾಲವು ಕಳೆದಮೇಲೆ, ಹಿರಣ್ಯವನ್ನೇ ಗರ್ಭವನ್ನಾಗಿ ಹೊಂದಿರುವ ಒಬ ಹಿರಣ್ಯಗರ್ಭ ಬ್ರಹ್ಮನನ್ನೂ ಒಂದು ಶಕ್ತಿಯನ್ನೂ ಸೃಷ್ಟಿಮಾಡಿದನು.

೩೮-೪೦. ಜನನ, ಸುಖ, ದುಃಖ, ಮರಣ, ಮುಕ್ತಿ ಈ ಐದು ಅವಸ್ಥೆಗಳಿಗೂ ಆ ಶಕ್ತಿಯು ಕಾರಣವಾದ್ದರಿಂದ ಅದಕ್ಕೆ ಖಖೋಲ್ಕವೆಂಬ ಹೆಸರನ್ನು ಸ್ವಾಮಿಯೇ ಕೊಟ್ಟನು. ಗರ್ಭದಲ್ಲಿ ಹಿರಣ್ಯವನ್ನು ಧರಿಸಿದ್ದುದರಿಂದ ಆ ಬ್ರಹ್ಮನಿಗೆ ಹಿರಣ್ಯ ಗರ್ಭನೆಂದೂ, ಬೃಹದ್ರೂಪಿಯಾಗಿಯೂ, ಸರ್ವವ್ಯಾಪಿಯಾಗಿಯೂ ಇರುವುದರಿಂದ ಅವನಿಗೆ ಬ್ರಹ್ಮನೆಂದೂ, ಹೆಸರು ಬಂದಿತು. ಸಕಲ ಪ್ರಾಣಿಗಳ ಹೃದಯಕುಹರ ದಲ್ಲಿ ಅಡಗಿರುವುದರಿಂದ ಸೂರ್ಯಪರಮಾತ್ಮನಿಗೆ ಪುರುಷನೆಂದೂ ಹೆಸರಾಗಿರುವುದು.

೧೪೧-೧೪೨. ಸಕಲ ದೇವತೆಗಳಿಗಿಂತಲೂ ಈತನು ದೊಡ್ಡವನಾದುದರಿಂದ ಮಹಾದೇವನೆಂದೂ, ಸಕಲ ಪ್ರಪಂಚವೂ ತಾನೇ ಆಗಿ, ಅದಕ್ಕೆಲ್ಲಾ ಒಡೆಯನೆನಿ ಸಿರುವನೂ ತಾನೇ ಆಗಿರುವುದರಿಂದ ಮಹೇಶ್ವರನೆಂದೂ ಹೆಸರು. ಸಕಲ ಪ್ರಜೆಗಳೂ

ಯಾತಿ ಯಸ್ಮಾತ್ಪ್ರಜಾಸ್ಸರ್ವಾಃ ಪ್ರಜಾಪತಿರಿತಿ ಸ್ಮೃತಃ ।
ಸ್ವಯಂ ಬಭೂವ ಪೂರ್ಣತ್ವಾತ್ಸ್ವಯಂಭೂರಿತಿ ವಿಶ್ರುತಃ ॥ ೧೪೨ ॥

ಸಹಸ್ರಶೀರ್ಷಾ ಪುರುಷಃ ಸಹಸ್ರಪಾತ್ಸಹಸ್ರಭುಕ್ ।
ಸಹಸ್ರಬಾಹುಃ ಪ್ರಥಮಃ ಪುರುಷೋಽಸೌ ನಿಗದ್ಯತೇ ॥ ೧೪೩ ॥

ಯತ್ಕಿಂಚಿದ್ದೃಶ್ಯತೇ ಲೋಕೇ ತೇಜೋರೂಪಂ ಪ್ರಕಾಶಕಂ ।
ಖಖೋಲ್ಕ ಇತಿ ತತ್ಸರ್ವಂ ನಿರ್ದಿಷ್ಟಂ ಲೋಕಕಾರಣಂ ॥ ೧೪೪ ॥

ಸರ್ವೋಽಪಾಧಿವಿನಿರ್ಮುಕ್ತಂ ನಿತ್ಯಂ ಸದಸದಾತ್ಮಕಂ ।
ವಿಜ್ಞಾನಮಾತ್ರಮವ್ಯಕ್ತಂ ತಮಾಹುಃ ಕಾರಣಂ ಪರಂ ॥ ೧೪೫ ॥

---

ಆ ಬ್ರಹ್ಮವಸ್ತುವಿನಿಂದಲೇ ಆವಿರ್ಭವಿಸಿರುವುದರಿಂದ, ಅವನಿಗೆ ಪ್ರಜಾಪತಿಯೆಂದೂ, ಪೂರ್ಣನಾಗಿ ತಾನೇ ಉದಯಿಸಿರುವುದರಿಂದ ಸ್ವಯಂಭುವನೆಂದೂ ಹೆಸರು ಬಂದಿದೆ.

೧೪೩-೧೪೪. ಈ ಪುರುಷನು, ಸಹಸ್ರ ಶಿರಸ್ಸುಗಳಿಂದಲೂ, ಸಾವಿರ ಪಾದಗಳು, ಸಾವಿರ ನಾಲಗೆಗಳು, ಸಹಸ್ರತೋಳುಗಳಿಂದಲೂ ಪ್ರಕಾಶಿಸಿದನು. ಅಲ್ಲದೆ ಲೋಕದಲ್ಲಿ ಯಾವುದಾದರೊಂದು ತೇಜಸ್ಸು ಪ್ರಕಾಶಿಸಿದರೂ, ಆ ತೇಜಸ್ಸಿಗೆ ಮೂಲ ಭೂತವಾದದ್ದೇ ಖಖೋಲ್ಕ ಶಕ್ತಿಯು. ಸಕಲ ಲೋಕದ ಸೃಷ್ಟಿಗೆ ಖಖೋಲ್ಕ ಶಕ್ತಿಯೇ ಮುಖ್ಯ ಕಾರಣ.

೧೪೫-೧೪೭. ಅದರಲ್ಲಿ ಜಗತ್ಸೃಷ್ಟಿಗೆ ಮೂಲಭೂತವಾದ ಅವ್ಯಕ್ತಕಾರಣವು ಸಕಲ ವಿಧವಾದ ಉಪಾಧಿಗಳಿಂದಲೂ ನಿರ್ಮುಕ್ತವಾದದ್ದು. ಅದು ಸತ್, ಅಸತ್, ಏತದುಭಯಾತ್ಮಕವಾದದ್ದು. ವಿಜ್ಞಾನಸ್ವರೂಪವೇ ಅದು. ಅವ್ಯಕ್ತವೇ ಸಕಲ ಜಗನ್ನಿರ್ಮಾಣಕ್ಕೂ ಮುಖ್ಯ ಕಾರಣವೆಂದು ಹೇಳುವರು. ಇಂತಹ ಅವ್ಯಕ್ತವು ಪ್ರಕೃತ್ಯಾತ್ಮನಾಪರಿಣತವಾಯಿತು. ಇಲ್ಲಿ ಪರಿಣಾಮವೇ ಉತ್ಪತ್ತಿ. ಅದರಲ್ಲಿ ಸತ್, ಅಸತ್ ಮುಂತಾದ ಧರ್ಮಗಳೂ, ಸತ್ತ್ವರಜಸ್ತಮೋ ರೂಪವಾದ ತ್ರಿಗುಣಗಳೂ

ಅವ್ಯಕ್ತಾತ್ಪ್ರಕೃತಿರ್ಜಜ್ಞೇ ಮಹಾಂಸ್ತು ಸದಸದ್ಗುಣಃ ।
ಮಹತ್ತತ್ತ್ವಾದಹಂಕಾರಸ್ತಸ್ಮಾತ್ಸರ್ವೇಂದ್ರಿಯಾಣಿ ಚ ॥ ೧೪೬ ॥

ಇಂದ್ರಿಯಾಣಿ ಚ ತನ್ಮಾತ್ರಂ ಸನ್ನಿವೇಶ್ಯಾತ್ಮನಿ ಪ್ರಭುಃ ।
ಸೃಷ್ಟವಾನ್ ಸರ್ವಭೂತಾನಿ ಖಖೋಲ್ಕಃ ಪುರುಷಃ ಪ್ರಭುಃ ॥ ೧೪೭ ॥

ಖಖೋಲ್ಕಾತ್ಕಾರಣಾದ್ಯಸ್ಮಾದವ್ಯಕ್ತಾಂತಂ ಚತುರ್ವಿಧಂ ।
ಜಗದ್ವ್ಯಕ್ತಂ ಸಮುತ್ಪನ್ನಂ ವಿಕಾರೈರ್ಮಹದಾದಿಭಿಃ ॥ ೧೪೮ ॥

ಸ ಯದಾ ಮನಸಾ ಸಾರ್ಧಂ ಸಂಯೋಗಮಧಿಗಚ್ಛತಿ ।
ತದಾ ಹಿ ಸರ್ವಭೂತಾನಾಂ ಪ್ರವೃತ್ತಿರುಪಜಾಯತೇ ॥ ೧೪೯ ॥

ಆತ್ಮನೋ ದಿವಸಸ್ಯಾಂತೇ ಸರ್ವಕರ್ಮಾತ್ಮನಃ ಸ್ವಯಂ ।
ಯಸ್ಸಮಾರೋಪ್ಯಾತ್ಮಸುಖಂ ತೇಜೋರಾಶಿಃ ಸ್ವಪಿತ್ಯಸೌ ॥ ೧೫೦ ॥

---

ಅಡಗಿವೆ. ಆದರಿಂದ ಮಹತ್ತತ್ತ್ವವೂ, ಮಹತ್ತತ್ತ್ವದಿಂದ ಅಹಂಕಾರವೂ, ಅಹಂಕಾರದಿಂದ ಸರ್ವೇಂದ್ರಿಯಗಳೂ ಉತ್ಪನ್ನವಾದುವು.

೧೪೭-೧೪೮. ಪಂಚಕರ್ಮೇಂದ್ರಿಯಗಳನ್ನೂ, ಪಂಚಜ್ಞಾನೇಂದ್ರಿಯಗಳನ್ನೂ, ಪಂಚತನ್ಮಾತ್ರಗಳನ್ನೂ, ಖಖೋಲ್ಕರೂಪಿಯಾದ ಪರಮಾತ್ಮನು ಕಲ್ಪಿಸಿ ಸಮಸ್ತಪ್ರಾಣಿಗಳನ್ನೂ ಸೃಷ್ಟಿಮಾಡಿದನು.

೧೪೯-೧೫೦. ಖಖೋಲ್ಕರೂಪಿಯಾದ ಪುರುಷನು ಯಾವಾಗ ಮನಸ್ಸಿನೊಡನೆ ಸಂಯೋಗವಾಗುವನೋ, ಆಗಲೇ ಪ್ರಪಂಚ ಸೃಷ್ಟಿಯೊದಗುವುದು. ಅನೇಕ ಮಾನುಷ ದಿನಗಳು ಅಂದರೆ ಆತ್ಮದಿನವೊಂದು ಕಳೆದಮೇಲೆ ಸಕಲ ಪ್ರಾಣಿವರ್ಗವನ್ನು ತನ್ನಲ್ಲಿಯೇ ಐಕ್ಯಗೊಳಿಸಿ ಕೇವಲ ತೇಜೋರಾಶಿಯಂತೆ ಜಲರಾಶಿಯಲ್ಲಿ ಯೋಗನಿದ್ರೆಮಾಡುವನು.

ಪ್ರತಿಬುದ್ಧಃ ಪುನರಸೌ ಮಹಾಭೂತಾದಿಭಿಸ್ಸಹ ।
ಕರೋತಿ ಸರ್ಗಂ ಸ ತದಾ ಗುಣತ್ರಯಸಮನ್ವಿತಂ ॥ ೧೫೧ ॥

ಏವಂ ವಿಧಶ್ಚ ಸಪ್ತಾಶ್ವಃ ಸಹಸ್ರಕಿರಣೋಽಪ್ಯಸೌ ।
ಸೃಜತಿ ಗ್ರಸತೇ ಚೈವ ಜಗತ್ಸರ್ವಂ ಚರಾಚರಂ ॥ ೧೫೨ ॥

ತಪತಿ ಪ್ರಕಾಶತೇ ಚೈವ ಸ ಚ ಗರ್ಜತಿ ವರ್ಷತಿ ।
ಸ ಏವ ತೋಯಸ್ಯ ಪತಿಸ್ಸಂಭೃತೋ ವಡವಾನಲಃ ॥ ೧೫೩ ॥

ಕಾಲಾಗ್ನಿರುದ್ರೋ ವಿಖ್ಯಾತಸ್ಸ ಚ ಸ್ಯಾನ್ನೀಲಲೋಹಿತಃ ।
ಸರ್ವತೇಜೋಧಿಪೋ ಯೋಗೀ ಮಹಾಲ್ಲೋಕಶ್ಚ ಸ ಸ್ಮೃತಃ ೧೫೪ ॥

ಅನಾದಿನಿಧನೋ ಬ್ರಹ್ಮಾಽಕ್ಷರಶ್ಚಾಕ್ಷರ ಏವ ಚ ।
ತಸ್ಮಾತ್ಪರತರೋ ನಾಸ್ತಿ ದೇವಾನಾಮಪಿ ದೈವತಂ ॥ ೧೫೫ ॥

---

೧೫೧-೧೫೨. ಯೋಗನಿದ್ರೆಯಿಂದ ಎಚ್ಚೆತ್ತ ಈ ಪುರುಷನು ಮತ್ತೆ ಮಹಾಭೂತಾದಿಗಳನ್ನು ನಿರ್ಮಿಸಿ ತನ್ಮೂಲಕ ಮತ್ತೆ ಗುಣತ್ರಯವಿಶಿಷ್ಟನಾಗಿ ಲೋಕವನ್ನು ಸೃಷ್ಟಿಮಾಡುವನು. ಈ ರೀತಿ ಏಳು ಕುದುರೆಗಳಿಂದ ಕೂಡಿದ ರಥವುಳ್ಳ ಸಹಸ್ರಕಿರಣಾತ್ಮಕನಾದ ಸೂರ್ಯದೇವನು ಇದೇ ರೀತಿ ಜಗತ್ತನ್ನು ಸೃಷ್ಟಿಸುತ್ತಲೂ ನಾಶಮಾಡುತ್ತಲೂ ಇರುವನು.

೧೫೩-೧೫೪. ಈ ಸೂರ್ಯದೇವನೇ ಲೋಕವನ್ನೆಲ್ಲಾ ಸುಡುವನು. ಪ್ರಕಾಶಗೊಳಿಸುವನು. ಗರ್ಜನ, ವರ್ಷಣಾದಿಗಳಿಂದ ಲೋಕವನ್ನೆಲ್ಲಾ ಮುಂದುವರಿಸುವನು. ಜಲಾಧಿಪತಿಯೂ, ಜಲಪಾನಮಾಡುವ ವಡಬಾಗ್ನಿಯೂ ಈತನೇ. ಈತನನ್ನೇ ಕಾಲಾಗ್ನಿರುದ್ರನೆಂದೂ, ನೀಲಲೋಹಿತನೆಂದೂ, ಸರ್ವತೇಜೋಧಿಪತಿಯೆಂದೂ, ಮಹಾಯೋಗಿಯೆಂದೂ, ಜಗದ್ರೂಪಿಯೆಂದೂ ಹೇಳುವರು.

೧೫೫-೧೫೬. ಈ ಸೂರ್ಯದೇವನಿಗೆ ಆದ್ಯಂತಗಳಿಲ್ಲ. ಆದರೆ ಜಗದ್ರೂಪವಾಗಿ ಪರಿಣಮಿಸಿ, ನಾಶರಹಿತನಾಗಿದ್ದರೂ, ನಾಶಸಹಿತನಂತೆ ಕಂಡುಬರುವನು. ಇವನಿಗೆ

ತೇನ ಸೃಷ್ಟಮಿದಂ ಸರ್ವಂ ಜಗತ್ಸ್ಥಾವರಜಂಗಮಂ ।
ಸರ್ವಾತ್ಮಾನಂ ಚ ತಂ ಯಾಂತಿ ಪ್ರಲಯೇ ಸಮುಪಸ್ಥಿತೇ ॥ ೧೫೬ ॥

ಸಂತಾಪಯತಿ ಲೋಕಾಂಸ್ತ್ರೀಂಶ್ಚಿತ್ರಭಾನುಸ್ಸ್ವರಶ್ಮಿಭಿಃ ।
ವರ್ಣಾನಾಂ ಸರ್ವಕಾಮಾನಾಂ ಪರ್ಜನ್ಯ ಇತಿ ಸ ಸ್ಮೃತಃ ॥ ೧೫೭ ॥

ತೇಜೋರೂಪೇಣ ಮಹತಾ ಬಾಹ್ಯತಶ್ಚಾಪಿ ತೇನ ವೈ ।
ಯುಗಾಂತವಹ್ನಿನಾ ಸರ್ವಮಿದಂ ಬ್ರಹ್ಮಾಂಡಮಾವೃತಂ ॥ ೧೫೮ ॥

ಸಂಹಾರಕಾಲೇ ಚ ಜಗದ್ವ್ಯಾಪ್ತಾ ಸಂವರ್ತಕೋನಲಃ ।
ಭಸ್ಮೀಕರೋತಿ ತ್ರೈಲೋಕ್ಯಂ ದ್ವಾದಶಾದಿತ್ಯರೂಪಕೈಃ ॥ ೧೫೯ ॥

ಸ್ವರ್ಗಧಾರಣವಿದ್ಯಾತಃ ಸಂಹಾರಾನ್ ಪ್ರಕರೋತಿ ಸಃ ।
ಬ್ರಹ್ಮಾ ವಿಷ್ಣುಃ ಖಖೋಲ್ಕಸ್ಸ ರೂಪಕೈರ್ಜಗತಃ ಕ್ರಮಾತ್ ॥ ೧೬೦ ॥

---

ದೊಡ್ಡವನೆನಿಸಿದ ದೇವಶ್ರೇಷ್ಠನು ಲೋಕದಲ್ಲಿ ಯಾರೂ ಇಲ್ಲ. ಈ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಈತನಿಂದಲೇ ಸೃಷ್ಟವಾಗಿರುವುದು. ಮತ್ತು ಈತನಲ್ಲಿಯೇ ಲಯವನ್ನು ಪಡೆಯುವುದು.

೧೫೭-೧೫೮. ಸೂರ್ಯದೇವನು ತ್ರಿಲೋಕಗಳನ್ನು ತನ್ನ ಕಿರಣಗಳಿಂದ ಸಂತಾಪ ಗೊಳಿಸುವನು. ಮತ್ತು ಸರ್ವಲೋಕಗಳಿಗೂ ಹಿತಕರವಾಗುವಂತೆ ಮಳೆಯನ್ನು ಪರ್ಜನ್ಯರೂಪದಿಂದ ಸುರಿಸುವನು. ಮಹದ್ರೂಪವಾದ ತೇಜಸ್ಸಿನ ರೂಪದಲ್ಲಿ ಈ ಜಗತ್ತಿನ ಒಳಗೂ ಹೊರಗೂ ವ್ಯಾಪಿಸಿದವನಾಗಿ, ಕೊನೆಗೆ ಪ್ರಳಯಕಾಲಾಗ್ನಿಯ ರೂಪದಲ್ಲಿ ಈ ಬ್ರಹ್ಮಾಂಡವನ್ನೆಲ್ಲಾ ವ್ಯಾಪಿಸಿಬಿಡುವನು.

೧೫೯-೧೬೦. ಪ್ರಳಯಕಾಲದಲ್ಲಿ ಪ್ರಳಯಾಗ್ನಿಯೆಂಬ ಹೆಸರಿನಿಂದಲೂ, ದ್ವಾದಶಾದಿತ್ಯರೂಪದಿಂದಲೂ, ಈ ಪ್ರಪಂಚವನ್ನೆಲ್ಲಾ ಸುಡುವವನೂ ಈತನೇ. ಹೀಗೆ ನಾಶಮಾಡಿದ ಜಗತ್ತನ್ನು ಮತ್ತೆ ಸೃಷ್ಟಿಮಾಡಿ, ಬ್ರಹ್ಮ, ವಿಷ್ಣು, ರುದ್ರರೂಪ ದಿಂದ ಖಖೋಲ್ಕ ಪುರುಷನೇ ಆಗಿ ಮತ್ತೆ ಜಗತ್ತನ್ನು ಸೃಷ್ಟಿಸಿ ರಕ್ಷಿಸುವನು.

ಉದ್ಯನ್ ಸ ಪೂರ್ವದಿಗ್ಭಾಗೇ ಗಚ್ಛಂಶ್ಚಾಪಿ ಸಪಶ್ಚಿಮೇ ।
ಮೇರುಪ್ರದಕ್ಷಿಣಂ ಕುರ್ವನ್ ಜಗತ್ಸರ್ವಂ ಪ್ರಕಾಶತೇ ॥ ೧೬೧ ॥

ಸರ್ವಭೂತಶರೀರಾಣಿ ಯಸ್ಮಾದಾವೃತ್ಯ ತಿಷ್ಠತಿ ।
ಅರುಣಃ ಕೀರ್ತಿತಸ್ತೇನ ದೇವೋಸೌ ಸರ್ವಲೋಕಧೃಕ್ ॥ ೧೬೨ ॥

ಶಶ್ವಚ್ಚ ಜಾಯತೇ ಯಸ್ಮಾಚ್ಛಶ್ವತ್ಸಂತಿಷ್ಠತೇ ಚ ಯತ್ ।
ತಸ್ಮಾತ್ಸ ವೈ ಸ್ಮೃತಸ್ಸೂರ್ಯೋ ನಿಗಮಜ್ಞೈರ್ಮನೀಷಿಭಿಃ ॥ ೧೬೩ ॥

ಅಂಶವಃ ಕಿರಣಾಃ ಪ್ರೋಕ್ತಾಃ ಸ್ಮೃತಸ್ತೇನಾಂಶುಮಾನಿತಿ ।
ಐಶ್ವರ್ಯಂ ಪರಮಂ ತಸ್ಯ ವಶಗಾಶ್ಚ ಸುರಾಸುರಾಃ ॥ ೧೬೪ ॥

ಇದೀತಿ ಪರಮೈಶ್ವರ್ಯೇ ಧಾತುರಿಂದ್ರಸ್ತತಸ್ಸ್ಮೃತಃ ।
ಅವತೀಮಾಂಸ್ತು ಲೋಕಾಂಸ್ತ್ರೀನ್ಯಸ್ಮಾದೇಷ ಪರಿಭ್ರಮನ್ ॥ ೧೬೫ ॥

---

೧೬೧–೧೬೨. ಈ ಸೂರ್ಯದೇವನು ಪ್ರತಿದಿನವೂ ಪೂರ್ವದಿಗ್ಭಾಗದಲ್ಲಿ ಉದಯಿಸುತ್ತಲೂ, ಪಶ್ಚಿಮದಲ್ಲಿ ಮುಳುಗುತ್ತಲೂ, ಮೇರುಪರ್ವತವನ್ನು ಪ್ರದಕ್ಷಿಣೆ ಮಾಡುತ್ತಾ ಲೋಕವೆಲ್ಲವನ್ನೂ ಬೆಳಗಿಸುವನು. ಜಗತ್ತಿನ ಎಲ್ಲಾ ಪ್ರಾಣಿಗಳ ಶರೀರದಲ್ಲಿಯೂ ವ್ಯಾಪಕನಾಗಿ ನಿಂತಿರುವುದರಿಂದ ಸೂರ್ಯದೇವನನ್ನು ಅರುಣನೆಂದೂ, ಸರ್ವಲೋಕಧಾರಿಯೆಂದೂ ತಿಳಿಯಬೇಕು.

೧೬೩-೧೬೪. ಉದಯಾಸ್ತಗಳು ಬಾರಿಬಾರಿಗೂ ಜನರಕಣ್ಣಿಗೆ ಕಾಣುವುದರಿಂದ ವಿದ್ವಾಂಸರು ಇವನನ್ನು ಸೂರ್ಯನೆಂದು ವ್ಯವಹರಿಸುವರು. ಅಂಶಗಳೆಂದರೆ ಕಿರಣಗಳು. ಇಂತಹ ಸಹಸ್ರಾರು ಕಿರಣವುಳ್ಳವನಾದುದರಿಂದ ಸೂರ್ಯದೇವನನ್ನು ಅಂಶುಮಾನ್ ಎಂದು ಪ್ರಾರ್ಥಿಸುವರು. ಸಕಲ ದೇವಾಸುರರೂ ಸಹ ಈ ದೇವನ ಅಧೀನದಲ್ಲಿದ್ದೇ ನಿಖಿಲೈಶ್ವರ್ಯವನ್ನು ಸಂಪಾದಿಸುವರು.

೧೬೫-೧೬೬. ಇದಿ, ಪರಮೈಶ್ವರ್ಯೆ ಎಂಬ ಧಾತುವಿನಿಂದ ನಿಷ್ಪನ್ನವಾದ ಇಂದ್ರ ಶಬ್ದವು ಪರಮೈಶ್ವರ್ಯಪ್ರದನಾದ ಈ ಸೂರ್ಯದೇವನಿಗೇ ಸಲ್ಲುವುದು. ಹಾಗೆಯೇ ಅವ,

ಅವೇತಿ ರಕ್ಷಣೇ ಧಾತುಸ್ತಸ್ಮಾತ್ಸ ಚ ರವಿಃಸ್ಮೃತಃ ।
ಗಭಸ್ತಿಭಿಸ್ಸಮಾಯೋಗಾದ್ಗಭಸ್ತೀ ದೇವ ಉಚ್ಯತೇ ॥ ೧೬೬ ॥

ಸಂಯಚ್ಛತೇ ಯತಸ್ಸರ್ವಾನ್ಯಮಸ್ತೇನ ಸ ಉಚ್ಯತೇ ।
ಪ್ರಜಾಸ್ಸಂಸೃಜತೋ ರೇತಃ ಸ್ವರ್ಣಮಸ್ಯಾದ್ರವತತ್ಪುರಾ ।
ಸುವರ್ಣರೇತಾಸ್ತತೋ ದೇವೈಃ ಕೀರ್ತಿತೋಽಸೌ ದಿವಾಕರಃ ॥ ೧೬೭ ॥

ಸೃಜತ್ಯೇಷ ಪ್ರಜಾಸ್ಸ್ರಷ್ಟೋ ಯಸ್ಮಾತ್ತ್ವಷ್ಟಾ ತತಃ ಸ್ಮೃತಃ ।
ತ್ವಷ್ಟೃತ್ವೇನಾಪಿ ಯತ್ಸರ್ವಮೌಷಧೀಷ್ವೇವ ಯಃ ಸ್ಥಿತಃ ॥ ೧೬೮ ॥

ಸ್ನೇಹೇನ ಸರ್ವಭೂತಾನಿ ಯಸ್ಮಾದ್ಭಜತಿ ಭಾಸ್ಕರಃ ।
ಬಂಧುಭೂತೋ ಹಿ ಜಗತೋ ಮಿತ್ರಸ್ತೇನ ಸ ಕೀರ್ತಿತಃ ॥ ೧೬೯ ॥

ಯಸ್ಮಾಜ್ಜಾತಮಿದಂ ಸರ್ವಮಾದಿತ್ಯೇನೇಹ ರಶ್ಮಿಭಿಃ ।
ಪ್ರವೇಶನಾದ್ವ್ಯಾಪನಾಚ್ಚ ವಿಷ್ಣುಸ್ತೇನ ಸ ಕೀರ್ತಿತಃ ॥ ೧೭೦ ॥

---

ರಕ್ಷಣೇ ಎಂಬ ಧಾತು ನಿಷ್ಪನ್ನವಾದ ರವಿ ಎಂಬ ಶಬ್ದವು ಲೋಕರಕ್ಷಕನಾದ ಈ ದೇವದೇವನಿಗೆ ಒಪ್ಪುವುದು. [ವರ್ಣವಿಪರ್ಯಯದಿಂದ ಉಂಟಾದ ಶಬ್ದ] ಅನೇಕ ಕಿರಣಗಳಿಂದ ವ್ಯಾಪ್ತನಾದ ಈ ಸೂರ್ಯದೇವನನ್ನು ಗಭಸ್ತೀ ಎಂದು ಕರೆಯುವರು.

೧೬೭-೧೬೮. ಸಮಸ್ತಲೋಕಗಳನ್ನೂ ತನ್ನಲ್ಲಿಯೇ ಅಡಗಿಸಿಕೊಳ್ಳುವವನಾದ್ದರಿಂದ ಸೂರ್ಯನಿಗೆ ಯಮನೆಂದೂ ಹೆಸರುಂಟು. ಅಲ್ಲದೇ ಪ್ರಜಾಸೃಷ್ಟಿಕಾಲದಲ್ಲಿ ಪ್ರವೇಶಿಸಿದ ಈ ದೇವನ ರೇತಸ್ಸು ಸುವರ್ಣರೂಪದಲ್ಲಿದ್ದುದರಿಂದ ಸುವರ್ಣರೇತಸ್ಸು ಎಂಬ ಹೆಸರೂ, ಪ್ರಜಾಸೃಷ್ಟಿಕರ್ತನಾದುದರಿಂದ ತ್ವಷ್ಟೃ ಎಂದು ಹೆಸರೂ ಈ ಸ್ವಾಮಿಗೆ ಸಲ್ಲುವುದು.

೧೬೯-೧೭೦. ಸರ್ವಪ್ರಾಣಿಗಳಿಂದಲೂ ಸ್ನೇಹಪೂರ್ವಕವಾಗಿ ಸೇವಿಸಲ್ಪಡುವವನಾದ್ದರಿಂದ ಸೂರ್ಯನಿಗೆ ಭಾಸ್ಕರನೆಂದೂ, ಜಗತ್ತಿಗೇ ಬಂಧುಸ್ಥಾನನಾಗಿರುವುದರಿಂದ ಮಿತ್ರನೆಂದೂ, ಸರ್ವವೂ ಸೂರ್ಯನಿಂದಲೇ ಹುಟ್ಟಿರುವುದರಿಂದ ಆದಿತ್ಯನೆಂದೂ ಸರ್ವವ್ಯಾಪಿಯಾಗಿರುವುದರಿಂದ ವಿಷ್ಣುವೆಂದೂ ಹೇಳಲ್ಪಟ್ಟಿರುವನು.

ಪ್ರಣವೇನ ಸಮಾಯುಕ್ತಃ ಸಪ್ತಬೀಜಃ ಸ್ಮೃತಸ್ತು ಸಃ ।
ಮೂಲಮಂತ್ರಂ ಖಖೋಲ್ಕಸ್ಯ ದೇವಸ್ಯಾಮಿತತೇಜಸಃ ॥ ೧೭೧ ॥

ಪ್ರಣವೋ ದೀಪಕಸ್ತಸ್ಯ ಮಕಾರಃ ಸಾಂಪ್ರದಾಯಿಕಃ ।
ಸ್ವಾಹಾಕಾರನಮಸ್ಕಾರೌ ಕುರ್ಯಾತ್ಪೂಜಾಪದೇ ಸ್ಥಿತೌ ॥ ೧೭೨ ॥

ವರ್ಣತ್ರಯಂ ತು ಯಚ್ಛೇಷಂ ಖಖೋಲ್ಕ ಇತಿ ಸಂಜ್ಞಿತಂ ।
ತನ್ಮಹಾಭೂತಭೇದೈಸ್ತು ಭಿದ್ಯತೇ ಪಂಚಧಾ ಪುನಃ ॥ ೧೭೩ ॥

ಖಕಾರಃ ಖಂ ವಿನಿರ್ದಿಷ್ಟಂ ಸೂರ್ಯಶ್ಚಾತ್ಪಾರ್ಥಯೋಗತಃ ।
ಅನಾದಿನಿಧನಂ ಶುದ್ಧಂ ತಸ್ಯ ಶಬ್ದಂ ಗುಣಂ ವಿದುಃ ॥ ೧೭೪ ॥

ಸಜ್ಜನಾತ್ಸರ್ಜನಾಚ್ಚೈವ ಕಕಾರೋ ವಾಯುರುಚ್ಯತೇ ।
ಸ್ಪರ್ಶಸ್ತಸ್ಯ ಗುಣೋ ಜ್ಞೇಯಃ ಪೂರ್ವಶ್ವಾಸವಿಕಾರತಃ ॥ ೧೭೫ ॥

---

೧೭೧-೧೭೨. ಸೂರ್ಯಮೂಲಮಂತ್ರವಾದ ಖಖೋಲ್ಕಮಂತ್ರವು ಪ್ರಣವ ಯುಕ್ತವಾದರೆ ಸಪ್ತಬೀಜಮಂತ್ರವೆಂದು ಹೆಸರು. ಇದು ಸೂರ್ಯನಿಗೆ ಅತ್ಯಂತ ಪ್ರಿಯ ವಾದದ್ದು. ಪ್ರತಿ ಬೀಜಮಂತ್ರಕ್ಕೂ ಪ್ರಣವ ಮಂತ್ರವೇ ಪ್ರಕಾಶಕವಾದದ್ದು. ಮಕಾರವು ಸಾಂಪ್ರದಾಯಕವಾದದ್ದು. ಪೂಜಾಕಾಲದಲ್ಲಿ ಸ್ವಾಹಾ ನಮಃ ಎಂಬ ಶಬ್ದಗಳನ್ನು ಸೇರಿಸಿ ಹೇಳುವುದರಿಂದ ಬರುವ ಅರ್ಥವು ಪ್ರಣವಮಂತ್ರದಲ್ಲಿ ತೋರಿಬರುವುದು.

೧೭೩-೧೭೪. ಪ್ರಣವವೇ ಮೂರಕ್ಷರದ ಮಂತ್ರ. ಇನ್ನು ಉಳಿದ ಮೂಲ ಮಂತ್ರವೇ ಖಖೋಲ್ಕವೆಂಬುದು. ಇದರಲ್ಲಿ ಮಹಾಭೂತಗಳ ಭೇದವೆಲ್ಲಾ ಅಡಗಿರುವುದು. ಮೊದಲಿನ ಖಕಾರವೇ ಆಕಾಶವಾಚಿಯು. ಈ ಶಬ್ದವು ಸೂರ್ಯಾರ್ಥ ಬೋಧಕವಾದುದು. ಇದು ಆದ್ಯಂತರಹಿತವಾಗಿ, ಜನನಮರಣಾದಿಗಳಿಲ್ಲದೆ ಶಬ್ದ ಗುಣಕವಾದ ಆಕಾಶವೆನಿಸಿದೆ.

೧೭೫-೧೭೬. ಸೂರ್ಯನು ಸೃಷ್ಟಿಕರ್ತನಾಗಿರುವುದರಿಂದ ಕಕಾರವು ವಾಯು ಸಂಜ್ಞಕವಾಗಿರುವುದು. ಅದರ ಮುಖ್ಯ ಗುಣವೇ ಸ್ಪರ್ಶವು. ಇನ್ನು ಉಚ್ಚಾರಣೆಯು

ಓಂಕಾರಸ್ತೇಜೋವಿಜ್ಞೇಯಂ ತಚ್ಚ ರೂಪಗುಣಂ ಸ್ಮೃತಂ ।
ವಿಕಾರಾತ್ಪೂರ್ವಯೋಗಶ್ಚ ತದ್ಗುಣಾಭ್ಯಾಂ ಚ ಸಂಶಯಃ ॥ ೧೭೬ ॥

ಲಪನಾತ್ಪ್ರಲಯಾಚ್ಚೈವ ಲಕಾರೋ ವರುಣಃ ಸ್ಮೃತಃ ।
ರಸೇನ ಪೂರ್ವೈಶ್ಚ ಗುಣೈರಪ್ಯುಕ್ತತ್ವಾಚ್ಚತುರ್ಗುಣಃ ॥ ೧೭೭ ॥

ಕಕಾರಾತ್ಸಂಸ್ಮೃತಾ ಪೃಥ್ವೀ ಪಿತ್ರಾ ಗನ್ಧ್ಯಗುಣಾ ತು ಸಾ ।
ಪೂರ್ವೈಶ್ಚತುರ್ಭಿಶ್ಚ ಗುಣೈರ್ಯುಕ್ತಾ ಪಂಚಗುಣಾ ಭವೇತ್ ॥ ೧೭೮ ॥

ಖಖೋಲ್ಕ ಇತಿ ಯತ್ಪ್ರೋಕ್ತಂ ಮಹಾಭೂತಾನಿ ಪಂಚ ತತ್ ।
ಪ್ರಾಣಾದ್ಯಾವಾಯವಃ ಪಂಚ ತಥಾ ಬುದ್ಧೀಂದ್ರಿಯಾಣಿ ಚ ॥ ೧೭೯ ॥

---

ಶ್ವಾಸವಿಕಾರದಿಂದ ಕಂಡು ಬರುವ ಓ ಕಾರವೇ ತೇಜಸ್ಸು. ಅದರ ಮುಖ್ಯ ಗುಣವೇ ರೂಪ. ಹೀಗೆ ಪೂರ್ವಯೋಗದಿಂದ ಸ್ಪರ್ಶ, ತೇಜಸ್ಸು ಈ ಗುಣಗಳು ಈ ಮಂತ್ರದಲ್ಲಿ ಅಡಕವಾಗಿರುವುವು.

೧೭೭-೧೭೮. ಮೂಲಮಂತ್ರವಿಹಿತವಾದ ಲಕಾರವು ಪ್ರಲಯವಾಚಿಯಾಗಿರುವುದು. ಅದೇ ವರುಣಾಭಿಮಾನಿಯಾದ ಅಕ್ಷರವು. ಅದರ ಮುಖ್ಯ ಗುಣವೇ ರಸ. ಅಂತೂ ಹಿಂದೆ ಹೇಳಿದ ಶಬ್ದ, ಸ್ಪರ್ಶ, ರೂಪ, ರಸ ಈ ನಾಲ್ಕುಗುಣಗಳಿಂದ ಕೂಡಿದ ಈ ಮಂತ್ರವು ಚತುರ್ಗುಣಾತ್ಮಕವಾಯಿತು. ಇನ್ನು ಉಳಿದಿರುವ ಕಕಾರವು ಪೃಥ್ವೀವಾಚಕವು. ಅದರ ಗುಣವಾದ ಗಂಧವು ಹಿಂದೆ ಹೇಳಿದ ನಾಲ್ಕು ಗುಣಗಳಿಂದ ಕೂಡಿ ಒಟ್ಟಿನಲ್ಲಿ ಪಂಚಗುಣಾತ್ಮಕವಾದ ಪಂಚಭೂತಗಳೇ ಈ ಮಂತ್ರದಿಂದ ಸೂಚಿಸಲ್ಪಡುತ್ತಿರುವುವು.

೧೭೯-೧೮೦. ಅಂತೂ ಪ್ರಕೃತಿ, ಮಹತ್, ಅಹಂಕಾರ, ಕಣ್ಣು, ಮೊದಲಾದ ಜ್ಞಾನೇಂದ್ರಿಯಗಳು ಐದು, ವಾಕ್ಕು ಮೊದಲಾದ ಕರ್ಮೇಂದ್ರಿಯಗಳು ಐದು, ಉಭಯಸ್ವರೂಪವಾದ ಮನಸ್ಸು, ತನ್ಮಾತ್ರೆಗಳು ಐದು, ಆಕಾಶಾದಿ ಭೂತಗಳು ಐದು. ಜೀವಾತ್ಮನೂ ಸೇರಿ ಒಟ್ಟು ಇಪ್ಪತ್ತೈದು ತತ್ತ್ವಗಳು ಮೂಲಪುರುಷನಿಂದ

ಕರ್ಮೇಂದ್ರಿಯಾಣಿ ಪಂಚೈವ ಸತ್ವಾದ್ಯಾಸ್ತದ್ಗುಣಾಸ್ತ್ರಯಃ ।
ಮನೋಬುದ್ಧಿರಹಂಕಾರ ಇತ್ಯೇತದಪರತ್ರಯಂ ॥ ೧೮೦ ॥

ಖಖೋಲ್ಕಾನೀತಿ ಬೀಜಾನಿ ಚೋತ್ಪಾನ್ಯೇಕೋನವಿಂಶತಿಃ ।
ಷಡ್ವಿಂಶಕೇತನಾಸಕ್ತ ಸರ್ವವ್ಯಾಪ್ತನುನೇನ ತು ॥ ೧೮೧ ॥

ಸ ಏವ ದೇವ ಉತ್ಪಾದ್ಯಾನುಷ್ಠಾದ್ಯಾತ್ಮಾನಮಾತ್ಮನಾ ।
ಸರ್ವಂ ಕರೋತಿ ಜಗತಃ ಪಾಲನಂ ಪ್ರಲಯಂ ತಥಾ ॥ ೧೮೨ ॥

ಆದಿತ್ಯಃ ಸತತಂ ನಾಮ ತಪತ್ಯೇಷ ಮರೀಚಿಭಿಃ ।
ವಹ್ನಿಃ ಸಹಸ್ರಕಿರಣವೃತ್ತಂ ಕುಂಭನಿಭಂ ಸ್ಮೃತಂ ॥ ೧೮೩ ॥

ನದೀನದಸಮುದ್ರೇಭ್ಯಃ ಸರ್ವೇಭ್ಯಃ ಸಲಿಲಂ ಹ್ಯಸೌ ।
ಕಿರಣಾನಾಂ ಸಹಸ್ರೇಣ ಸಮಾದತ್ತೇ ಸದಾ ರವಿಃ ॥ ೧೮೪ ॥

---

ಕೂಡಿದ ಈ ಇಪ್ಪತ್ತಾರು ಪದಾರ್ಥಗಳೂ ಈ ಬೀಜಮಂತ್ರವೊಂದರಿಂದಲೇ ಸ್ಪಷ್ಟವಾಗಿ ತೋರುವುವು.

೧೮೧-೧೮೨. ಹೀಗೆ ಖಖೋಲ್ಕವೆಂಬ ಬೀಜಮಂತ್ರವು ಸರ್ವವ್ಯಾಪ್ತವೆನಿಸಿದಾಗ, ಸಕಲ ಲೋಕಕ್ಕೂ ಉತ್ಪಾದಕವೂ ಅಗ್ನಿರೂಪವೂ ಆಗಿರುವುದು. ಈ ಶಕ್ತಿಯಿರುವುದರಿಂದಲೇ ಸಕಲ ಜಗತ್ತಿನ ಸೃಷ್ಟಿಲಯಗಳು ಸಂಭವಿಸುತ್ತಿರುವುವು.

೧೮೩-೧೮೪. ಸೂರ್ಯನು ಯಾವಾಗಲೂ ತನ್ನ ಕಿರಣ ಸಮೂಹದಿಂದ ಲೋಕವನ್ನೆಲ್ಲಾ ಸುಡುತ್ತಿರುವನು. ಅಗ್ನಿಯು ಒಂದು ಗಡಿಗೆಯಂತೆ ಸೂರ್ಯನಿಂದ ಹೊಂದಿದ ತೇಜಸ್ಸುಳ್ಳವನು. ಸೂರ್ಯದೇವನು ನದಿಗಳಿಂದಲೂ, ನದಗಳಿಂದಲೂ, ಸಮುದ್ರಗಳಿಂದಲೂ ನೀರನ್ನು ತನ್ನ ಕಿರಣಗಳ ಸಹಸ್ರದಿಂದ ಹಬೆಯರೂಪದಲ್ಲಿ ಹೀರಿಬಿಡುವನು.

ಅಸ್ತಕಾಲೇ ಋಷೋಲ್ಕಸ್ಯ ಪ್ರಭಾಪಾದೇನ ಪಾವಕಂ ।
ಸಮಾವಿಶತಿ ಸೂರ್ಯಂ ಚ ದಿವಾ ತಚ್ಚಾಪಿ ಪಾವಕಃ ॥ ೧೮೫ ॥

ಏವಮೇತದ್ಭವೇದ್ಧೇತುಃ ಪರಸ್ಪರನಿವೇಶನಾತ್ ।
ಪ್ರಾಕಾಶ್ಯಮೌಷ್ಣವೃತ್ತಿಂ ಚ ಕುರುತೇ ಹಿ ದಿವಾ ನಿಶಿ ॥ ೧೮೬ ॥

ಏಷ ಬ್ರಹ್ಮಾ ಚ ವಿಷ್ಣುಶ್ಚ ಏಷ ದೇವೋ ಮಹೇಶ್ವರಃ ।
ಋಚೋ ಯಜೂಂಷಿ ಸಾಮಾನಿ ಏಷ ಏವ ನ ಸಂಶಯಃ ॥ ೧೮೭ ॥

ಉದ್ಯನ್ ಸ ದೀಪ್ಯತೇ ಋಗ್ಭಿರ್ಮಧ್ಯಾಹ್ನೇ ಯಜುರ್ಭಿಸ್ತಥಾ ।
ಸಾಮಭಿಶ್ಚೈವ ಸಾಯಾಹ್ನೇ ಭಾಸ್ಕರಃ ಪ್ರತಪತ್ಯಸೌ ॥ ೧೮೮ ॥

ತ್ರೀಣಿ ರಶ್ಮೀನಿ ತಸ್ಯೈವ ಭೂರ್ಲೋಕಂ ದ್ಯೋತಯಂತ್ಯಧಃ ।
ಚತ್ವಾರಿ ತು ಪಿತೄಂಸ್ತಿರ್ಯಕ್ ತ್ರೀಣ್ಯೇವೋರ್ಧ್ವಸುರಾಲಯಂ ॥೧೮೯॥

---

೧೮೫-೧೮೬. ಅಸ್ತಮಯಕಾಲದಲ್ಲಿ ಸೂರ್ಯನ ತೇಜಸ್ಸಿನಲ್ಲಿ ನಾಲ್ಕನೆಯ ಒಂದು ಭಾಗದ ಪ್ರಭೆಯನ್ನು ಹೊಂದಿ ಅಗ್ನಿಯು ಭೂಲೋಕವನ್ನು ಪ್ರವೇಶಿಸುವನು. ಚಂದ್ರನೂ ಸೂರ್ಯನಿಂದ ಪ್ರಕಾಶವನ್ನು ಪಡೆದು ಪ್ರಕಾಶಿಸುವನು. ಹೀಗೆ ಚಂದ್ರಾಗ್ನಿಗಳು ಸೂರ್ಯನಿಂದಲೇ ತೇಜಸ್ಸನ್ನೂ, ಉಷ್ಣಾಂಶವನ್ನೂ ಪರಿಗ್ರಹಿಸಿ ಲೋಕೋಪಕಾರಕರಾಗುವರು. ಹಾಗೆಯೇ ಹಗಲಿನಲ್ಲಿ ತಮ್ಮ ನ್ಯಾಸವನ್ನು ಮತ್ತೆ ಸೂರ್ಯದೇವನಿಗೆ ಅರ್ಪಿಸಿಬಿಡುವರು.

೧೮೭-೧೮೮. ಈ ಸೂರ್ಯನೇ ಬ್ರಹ್ಮನು. ಈತನೇ ವಿಷ್ಣುವು. ರುದ್ರನೂ ಈತನೇ. ಋಗ್ಯಜುಸ್ಸಾಮವೇದಾತ್ಮಕನಾಗಿ, ಉದಯಕಾಲದಲ್ಲಿ ಋಗ್ವೇದರೂಪಿಯಾಗಿಯೂ, ಮಧ್ಯಾಹ್ನಕಾಲದಲ್ಲಿ ಯಜುರ್ವೇದರೂಪಿಯಾಗಿಯೂ, ಸಾಯಂಕಾಲದಲ್ಲಿ ಸಾಮವೇದರೂಪದಿಂದಲೂ ಪ್ರಕಾಶಿಸುವನು.

೧೮೯-೧೯೧. ಸೂರ್ಯನ ಸಹಸ್ರ ಕಿರಣಗಳಲ್ಲಿ ದಿವ್ಯತೇಜೋರೂಪದಿಂದಿರುವುವುಗಳು, ಏಳು. ಅವುಗಳಿಗೆ ಕ್ರಮವಾಗಿ, ಸುಷುಮ್ನಾ, ಹರಿಕೇಶ, ವಿಶ್ವಕರ್ಮಾ,

ಸುಷುಮ್ನೋ ಹರಿಕೇಶಶ್ಚ ವಿಶ್ವಕರ್ಮಾ ತಥೈವ ಚ ।
ವಿಶ್ವವ್ಯಚಾ ಪುನಶ್ಚಾನ್ಯಃ ಸಂಯದ್ವಸುರಥಾಪರಃ ॥ ೧೯೦ ॥

ಉದಾವಸುಃ ಪುನಶ್ಚಾನ್ಯಃ ಪುರೋನ್ಯಃ ಪರಿಕೀರ್ತಿತಃ ।
ರವೇಃ ಕರಸಹಸ್ರಾದ್ಧಿ ಸಪ್ತಶ್ರೇಷ್ಠಾಸ್ತು ರಶ್ಮಯಃ ॥ ೧೯೧ ॥

ಏವಂ ಹಿ ರಶ್ಮಿಭಿರ್ದೇವೋ ಜಗತ್ಸರ್ವಂ ಪ್ರಕಾಶತೇ ।
ತಥಾ ವರ್ಧಯತಿ ಕ್ಷೀಣಂ ಕ್ರಮತೋಯಂ ನಿಶಾಕರಂ ॥ ೧೯೨ ॥

ಏವಂ ಹಿ ಸ್ವಲ್ಪ ಉದ್ದಿಷ್ಟಃ ಸರ್ವವ್ಯಾಪೀ ದಿವಾಕರಃ ।
ಅಧ್ವರೈರ್ವಿವಿಧೈಃ ಪುಜ್ಯೈರೀಜ್ಯೋಸೌ ಪಾಪನಾಶನಃ ॥ ೧೯೩ ॥

ತಸ್ಯ ತಾವತ್ಪಖೋಲ್ಕಸ್ಯ ಮಹಾಧ್ವರವಿಧಿಂ ಶುಭಂ ।
ಶೃಣುಷ್ವಾಖ್ಯಾಯಮಾನಂ ವೈ ಪಶ್ಚಾಚ್ಛ್ರೋಷ್ಯಥ ನಿಷ್ಕಲಂ ॥ ೧೯೪ ॥

---

ವಿಶ್ವವ್ಯಚಾ, ಸಂಯದ್ವಸು, ಉದಾವಸು, ಪುರಃ, ಎಂಬ ಈ ಹೆಸರುಗಳಿವೆ. ಈ ಏಳರಲ್ಲಿ ಮೊದಲನೆಯ ಮೂರು ಕಿರಣಗಳಿಂದ ಭೂಲೋಕವೇ ಮೊದಲಾದ ಅಧೋಲೋಕಗಳನ್ನೂ, ನಾಲ್ಕನೆಯ ಕಿರಣಗಳಿಂದ ಪಿತೃಲೋಕವನ್ನೂ ಇನ್ನುಳಿದ ಮೂರು ಕಿರಣಗಳಿಂದ ಊರ್ಧ್ವಲೋಕಗಳೆಲ್ಲವನ್ನೂ ಬೆಳಗಿಸುವನು.

೧೯೨-೧೯೩. ಹೀಗೆ ತನ್ನ ಕಿರಣಗಳಿಂದ ಸಕಲ ಲೋಕಗಳನ್ನು ಬೆಳಗಿಸುತ್ತಾ ಚಂದ್ರನನ್ನು ಕಲಾದಿಗಳಿಂದ ವೃದ್ಧಿಮಾಡುತ್ತಲೂ, ಕ್ಷೀಣನನ್ನಾಗಿ ಮಾಡುತ್ತಲೂ ಇರುವನು. ಇಂತಹ ಸರ್ವ ವ್ಯಾಪಿಯಾದ ಸೂರ್ಯನು, ಸಕಲ ಯಾಗಗಳಿಗೂ ಮುಖ್ಯದೇವತೆಯೆನಿಸಿರುವನು.

೧೯೪-೧೯೬. ಆ ರೀತಿ ಯಾಗಕ್ಕೆ ಮುಖ್ಯಾಭಿಮಾನದೇವತೆಯಾಗಿರುವುದನ್ನು ಮುಂದೆ ಹೇಳುವೆನು. ಹಾಗೆಯೇ ದೇವದೇವನು ನಿಷ್ಕಲನೆಂಬುದನ್ನು ತಿಳಿಯುವೆ. ಅಂತೂ ಸಕಲ ಜಗದ್ವ್ಯಾಪಿಯಾದ ದೇವದೇವನಾದ ಸೂರ್ಯನು ವಂದನೆಗೆಯೋಗ್ಯನು. ಅಲ್ಲದೆ, ಸಕಲ ಯಾಗಗಳಲ್ಲಿಯೂ ಅಧ್ವರಕ್ಕಾಗಿ ದೀಕ್ಷಿತನಾಗಿರುವವನು ಈ ಸೂರ್ಯ

ನಮಸ್ಸವಿತ್ರೇ ದೇವಾಯ ಸಮೀಹಿತಫಲಪ್ರದಃ ।
ಅದೀಕ್ಷಿತಸ್ತು ಯಃ ಕಶ್ಚಿತ್ ಇದಂ ತಂತ್ರಂ ವಿಚಾರಯೇತ್ ॥ ೧೯೫ ॥

ಸಕುಷ್ಠೀ ಭವತಿ ಕ್ಷಿಪ್ರಂ ಪ್ರೇತ್ಯೇಹ ನರಕಂ ವ್ರಜೇತ್ ।
ಆರ್ಜವೇ ಕುಲಸಂಪನ್ನೇ ಶೀಲಧರ್ಮರತೇ ಸದಾ ।
ದಾತವ್ಯಂ ಸೂರ್ಯಭಕ್ತಾಯ ಪ್ರಜ್ಞಾವತಿ ಜಿತೇಂದ್ರಿಯೇ ॥ ೧೯೬ ॥

ಇತಿ ಶ್ರೀ ಸಾಂಬಪುರಾಣೇ ಏಕಪಂಚಾಶತ್ತಮೋಧ್ಯಾಯಃ.

---

ತಂತ್ರವನ್ನು ವಿಚಾರಮಾಡದೆ ತಿರಸ್ಕಾರಮಾಡಿದ್ದೇ ಆದರೆ ಆತನು ಕುಷ್ಠರೋಗಿಯೆನಿಸಿ, ಅಂತ್ಯದಲ್ಲಿ ನರಕವನ್ನು ಹೊಂದುವನು. ಆದ್ದರಿಂದ ಈ ಸೂರ್ಯದೇವನ ಸಕಲ ವಿಷಯಗಳನ್ನೂ ಋಜುಸ್ವಭಾವದವನೂ, ಕುಲಶೀಲಾದಿಗಳಿಂದ ಯೋಗ್ಯನೆನಿಸಿದವನೂ, ಸೂರ್ಯಭಕ್ತನೂ ಆಗಿರುವ ಜಿತೇಂದ್ರಿಯನಿಗೆ ಮಾತ್ರ ವಿವರಿಸಿ ಹೇಳಬೇಕು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಐವತ್ತೊಂದನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ದ್ವಿಪಂಚಾಶತ್ತಮೋಽಧ್ಯಾಯಃ

---

ಅಹಂ ಚೇದಂ ಪ್ರವಕ್ಷ್ಯಾಮಿ ರಹಸ್ಯಂ ಜ್ಞಾನಮುತ್ತಮಂ ।
ಉಕ್ತಂ ಭಗವತಾ ಭಾನೋ ರಹಸ್ಯಂ ಚ ಪ್ರಕಾಶಕಂ ॥ ೧ ॥

ಪ್ರಥಮಂ ಶೋಧಯೇದ್ಭೂಮಿಂ ಸ್ಥಾನಾನಿ ಚ ಯಥಾವಿಧಿ ।
ವರ್ಣಾಶ್ಚಾನುಕ್ರಮಂ ಕೃತ್ವಾ ವಸುಧಾಂ ಚ ವಿಶೋಧಯೇತ್ ॥ ೨ ॥

ತತೋಽಧಿವಾಸಯೇದ್ದೇವಂ ನ್ಯಾಸೇನ ಸಕಲೀಕೃತಂ ।
ಮಂಡಲಂ ಚ ಸಮಾಲಿಖ್ಯ ಆಚಾರ್ಯಸ್ಸುಸಮಾಹಿತಃ ॥ ೩ ॥

---

## ಐವತ್ತೆರಡನೆಯ ಅಧ್ಯಾಯ

೧–೨. ಈಗ ಸೂರ್ಯದೇವನಿಂದಲೇ ಸಾಕ್ಷಾತ್ತಾಗಿ ಹೇಳಲ್ಪಟ್ಟ ಅಧ್ವರಕ್ರಮವನ್ನು ರಹಸ್ಯರೂಪವಾಗಿ ವಿವರಿಸುವೆನು. ಎಲ್ಲಕ್ಕೂ ಮೊದಲು ಅಧ್ವರಕ್ಕೆ ಬೇಕಾದ ಭೂಮಿಯನ್ನು ವಿಧಿವತ್ತಾದ ಬಣ್ಣವು ದೊರಕುವವರೆಗೂ ಅಗೆದು ಭೂಮಿಯನ್ನು ಶುದ್ಧಿಗೊಳಿಕೊಳ್ಳಬೇಕು.

೩-೪. ಅನಂತರ ಸಂಸ್ಕೃತವಾದ ಭೂಮಿಯಲ್ಲಿ ಹಿಂದೆ ಹೇಳಿದ ಮಂಡಲ ನ್ಯಾಸಾದಿಗಳನ್ನು ರಚಿಸಿ, ಅಲ್ಲಿ ಸೂರ್ಯದೇವನಿಗೆ ಅಧಿವಾಸ ಮಾಡಿಸಬೇಕು. ಆ

ಏಕಾಂತೇ ಸ ನದೀತೀರೇ ತೀರ್ಥೇಷ್ವಾಯತನೇಷು ಚ ।
ಉದ್ಯಾನಕುಸುಮಾಕೀರ್ಣೇ ಚಿತ್ರಪ್ರಾಸಾದಸಂಕುಲೇ ॥ ೪ ॥

ಆಕಾಶತಲಕೇ ಚೈವ ಯತ್ರ ವಾ ಶೋಭತೇ ಮನಃ ।
ಪೂರ್ವಾತ್ಮ ವೇಶನೇ ಚೈವ ಭೂದೇಶೇ ದೋಷವರ್ಜಿತೇ ॥ ೫ ॥

ವಿಪ್ರಸ್ಯ ವಸುಧಾ ಶುಕ್ಲಾ ಲೋಹಿತಾ ಕ್ಷತ್ರಿಯಸ್ಯ ತು ।
ಪೀತಾ ವೈಶ್ಯಸ್ಯ ವಿಜ್ಞೇಯಾ ಕೃಷ್ಣಾ ಶೂದ್ರಸ್ಯ ಕೀರ್ತಿತಾ ॥ ೬ ॥

ಚತುರ್ಣಾಮಪಿ ವರ್ಣಾನಾಂ ಯಥಾವದನುಪೂರ್ವಶಃ ।
ತತಶ್ಶಬ್ದಂ ನಿರೀಕ್ಷ್ಯೇಹ ಮಾಂಗಲ್ಯಾಂಶ್ಚಾಪಿ ವಾಚಕಾನ್ ॥ ೭ ॥

ಪ್ರಶಸ್ತಂ ವಚನಂ ಗ್ರಾಹ್ಯಮಪ್ರಶಸ್ತಂ ವಿವರ್ಜಯೇತ್ ।
ಆಜ್ಯಮಧ್ವವಲಿಪ್ತೇನ ಹನ್ಯಾಜ್ಜಂತುಫಲೇನ ತು ॥ ೮ ॥

---

ಪ್ರದೇಶವು, ಏಕಾಂತವಾಗಿದ್ದು, ನದೀತೀರ, ತೀರ್ಥಕ್ಷೇತ್ರ, ದೇವಾಲಯ, ಉದ್ಯಾನ ಪುಷ್ಪವನ, ಚಿತ್ರವಿಚಿತ್ರವಾದ ಅರಮನೆ ಇವುಗಳಿಗೆ ಸಂಬಂಧಪಟ್ಟಿರಬೇಕು.

೫-೬. ಅಥವಾ ಬಯಲು ಪ್ರದೇಶ, ಮೊದಲು ಮನೆಯಲ್ಲಿದ್ದ ಪ್ರದೇಶ ಅಥವಾ ದೋಷವರ್ಜಿತವಾದ ಯಾವ ಭೂಮಿಯಾದರೂ ಸರಿಯೇ, ಅಲ್ಲಿ ಮಂಡಲ ವಿನ್ಯಾಸಮಾಡಬಹುದು. ಅದರಲ್ಲಿ ಬ್ರಾಹ್ಮಣನಿಗೆ ಬಿಳಿಯಬಣ್ಣದ ಭೂಮಿಯೂ, ಕ್ಷತ್ರಿಯನಿಗೆ ರಕ್ತವರ್ಣದ್ದೂ, ವೈಶ್ಯನಿಗೆ ಪೀತವರ್ಣದ್ದೂ, ಕರಿಯ ಭೂಮಿಯು ಶೂದ್ರನಿಗೂ, ಶ್ರೇಷ್ಠವೆಂದು ಉಕ್ತವಾಗಿದೆ.

೭-೮. ನಾಲ್ಕು ವರ್ಣದವರೂ ಈ ರೀತಿಯಾಗಿ ಸ್ಥಳವನ್ನು ಸರಿಪಡಿಸಿಕೊಂಡು ಅನಂತರ ಶಕುನ, ಉಪಶ್ರುತಿ ಮುಂತಾದುವುಗಳಿಂದ ಮಂಗಳಕರವನ್ನಾದ ಸ್ಥಳವನ್ನು ಆರಿಸಿಕೊಂಡು, ಅಪ್ರಶಸ್ತವಾದ ಸ್ಥಳವನ್ನು ದೂರಮಾಡಬೇಕು. ಅನಂತರ ಆ ಪ್ರದೇಶಕ್ಕೆ ಸೂತ್ರಬಂಧನ ಮಾಡಬೇಕು. ಆ ಸೂತ್ರವನ್ನು ತುಪ್ಪ, ಜೇನುತುಪ್ಪ, ಅತ್ತೀಹಣ್ಣು, ಮುಂತಾದುವುಗಳಿಂದ ನೆನೆಸಿರಬೇಕು.

**ತತಸ್ಸೂತ್ರಂ ನ್ಯಸೇನ್ಮಂತ್ರೀ ಯಥಾವದನುಪೂರ್ವಶಃ ।**
**ಸಿಂದೂರಿಕಾನಸುರಸಗ್ರಂಥಿಸ್ತ್ರೈನವಿವರ್ಜಿತಾನ್ ॥ ೯ ॥**

**ಕಾರ್ಪಾಸಿಕಾನ್ ಬಲ್ವಲಕಾನ್ ಕ್ಷ್ಮೌಮಾನ್ ಕೌಶಿಕೆಪಟ್ಟಿಕಾನ್ ।**
**ಯಥಾಹಸ್ತವಿಭಾಗೇನ ಪಾತಯನ್ ಮಂತ್ರವಿತ್ಸ್ವಯಂ ॥ ೧೦ ॥**

**ಐಂದ್ರೇ ಚ ಪ್ರಥಮಂ ಸೂತ್ರಂ ಹೃದಯೇನಾಭಿಮಂತ್ರಿತಂ ।**
**ತಪಶ್ಚಾಷ್ಟದಳೇ ಪದ್ಮಂ ಮಧ್ಯೇ ತಸ್ಯ ನಿಯೋಜಯೇತ್ ॥ ೧೧ ॥**

**ಗಾಯತ್ರ್ಯಾ ಲಬ್ಧಹಸ್ತಂ ತು ಚಿಂತಯಿತ್ವಾ ದಿವಾಕರಂ ।**
**ಯಾತಚಿತ್ತರಜಾಃ ಪ್ರಾಜ್ಞೋ ಜಪೇಚ್ಚೈವ ಷಡಕ್ಷರಂ ॥ ೧೨ ॥**

**ಸತ್ವಂ ರಜಸ್ತಮಶ್ಚೇತಿ ಹಿತಂ ರಾಜಸಲಕ್ಷಣಂ ।**
**ಅಂಗುಷ್ಠಪರ್ವವಿಪುಲಂ ರಜಸ್ಸರ್ವತ್ರ ಕಥ್ಯತೇ ॥ ೧೩ ॥**

---

೯-೧೦. ಆ ಸೂತ್ರವು ಹತ್ತಿ, ಸೆಣಬು, ರೇಶ್ಮೆ, ಮುಂತಾದುವುಗಳಲ್ಲಿ ಒಂದಾಗಿರಬೇಕು. ಅದಕ್ಕೆ, ಸಿಂದೂರಚೂರ್ಣವನ್ನು ಸವರಿರಬೇಕು. ಅದರಲ್ಲಿ ಗಂಟುಗಳಾಗಲಿ ಕೂದಲಾಗಲಿ ಸೇರಿರಕೂಡದು. ಯಜಮಾನ ಹಸ್ತಪ್ರಮಾಣದಿಂದ ಅದು ವಿಧಿವತ್ತಾಗಿರಬೇಕು. ಅಂತಹ ದಾರದಿಂದ ಪೂರ್ವಾದಿಯಾಗಿ ಮಂತ್ರವತ್ತಾಗಿ ದಿಗ್ಬಂಧ ಮಾಡಬೇಕು.

೧೧-೧೨. ಅರ್ಕಮಂತ್ರಹೃದಯದಿಂದ ಸೂತ್ರವನ್ನು ಅಭಿಮಂತ್ರಿಸಿ ಪೂರ್ವಾದಿಯಾಗಿ ಕಟ್ಟಬೇಕು. ಅನಂತರ ಮಧ್ಯಭಾಗದಲ್ಲಿ ಅಷ್ಟದಳ ಪದ್ಮವನ್ನು ಬರೆದು ಅದರಲ್ಲಿ ದಿವಾಕರನಾದ ಸೂರ್ಯದೇವನನ್ನೂ ಆರಾಧಿಸಿ, ರಜೋಗುಣ ರಹಿತನಾಗಿ ಓಂ ಖಖೋಲ್ಕಾಯ ಸ್ವಾಹಾ ಎಂಬ ಷಡಕ್ಷರವನ್ನು ಜಪಿಸಬೇಕು.

೧೩-೧೪. ಸತ್ವ, ರಜಸ್ಸು ಈ ಗುಣಗಳಲ್ಲಿ ರಾಜಸಲಕ್ಷಣವೇ ಈ ಜಪಕ್ಕೆ ಮುಖ್ಯವಾದದ್ದು. ಅಂಗುಷ್ಠಪರ್ವವನ್ನು ಎಣಿಸುವುದರಿಂದ ರಜೋಲಕ್ಷಣವು

ಅತಿಕ್ಷೀಣಂ ತಥಾ ಸ್ಥೂಲಂ ಕೃಶಬಿಂದುವಿವರ್ಜಿತಂ ।
ಆಲಿಖೇನ್ಮಂಡಲಂ ದಿವ್ಯಂ ಚತುರ್ದ್ವಾರಂ ಸುಶೋಭನಂ ॥ ೧೪ ॥

ಆಯುಧಾನಿ ತಥಾ ಚಾಷ್ಟೌ ದಿಶಾಸು ವಿದಿಶಾಸು ಚ ।
ಪೂರ್ವಪತ್ರೇ ತಥೋಂಕಾರಂ ಪಶ್ಚಿಮೇ ತು ಖಕಾರಕಂ ॥ ೧೫ ॥

ಖೋಕಾರಂ ದಕ್ಷಿಣೇ ಪತ್ರೇ ಲ್ಕಾರಂ ಚೋತ್ತರೇ ತಥಾ ।
ಯಕಾರಂ ವಾಯುಭಾಗೇ ತು ಸ್ವಾಕಾರಂ ವಹ್ನಿಸಂಸ್ಥಿತಂ ॥ ೧೬ ॥

ಹಾಕಾರಂ ನೈರೃತೇ ಯೋಜ್ಯಂ ಕ್ಷೇನ್ಯೈಶಾನ್ಯಾಂ ತಥಾ ದಿಶಿ ।
ಕರ್ಣಿಕಾಯಾಂ ತಥಾ ದೇವಂ ಮಹಾತೇಜೋದ್ವಿರಕ್ಷರಂ ॥ ೧೭ ॥

ಪೂರ್ವಪ್ರಾಕಾರಮಧ್ಯೇ ಕವರ್ಗಃ ಪಂಚಭೂತಮಹಾನಿ ಚ ।
ದಕ್ಷಿಣೇ ಚಕಾರವರ್ಗಃ ಪಂಚಬುದ್ಧೀಂದ್ರಿಯಾಣಿ ಚ ॥ ೧೮ ॥

---

ತೋರಿಬರುವುದು. ಇಲ್ಲಿ ಬರೆಯುವ ಮಂಡಲವು, ಅತಿಕ್ಷೀಣವಾಗಿಯೂ, ಅತಿಸ್ಥೂಲವಾಗಿಯೂ, ಕೃಶವಾಗಿಯೂ, ಬಿಂದುಗಳಿಂದ ಕೂಡಿದ್ದಾಗಿಯೂ, ಇರಬಾರದು. ಅದಕ್ಕೆ ನಾಲ್ಕು ಬಾಗಿಲುಗಳನ್ನೂ ರಚಿಸಿರಬೇಕು.

೧೫-೧೭. ಎಂಟು ದಿಕ್ಕುಗಳಲ್ಲೂ ಹಿಂದೆ ಹೇಳಿದಂತೆ ಆಯುಧಗಳನ್ನೂ ರಚಿಸಬೇಕು. ಪೂರ್ವದಳದಲ್ಲಿ ಓಂಕಾರವನ್ನೂ, ಪಶ್ಚಿಮದಲ್ಲಿ ಖಕಾರವನ್ನೂ, ದಕ್ಷಿಣದಲ್ಲಿ ಖೋಕಾರವನ್ನೂ ಲ್ಕಾ ಎಂಬ ಅಕ್ಷರವನ್ನು ಉತ್ತರದಲ್ಲಿಯೂ, ಯಕಾರವನ್ನು ವಾಯುವ್ಯದಲ್ಲಿಯೂ, ಸ್ವಾ ಕಾರವನ್ನು ಅಗ್ನೇಯದಲ್ಲಿಯೂ, ಹಾ ಕಾರವನ್ನು ನೈರುತ್ಯ ದಿಕ್ಕಿನಲ್ಲಿಯೂ, ಐಶಾನ್ಯದಲ್ಲಿ ಕ್ಷಕಾರವನ್ನೂ, ಮಧ್ಯೆ ಮಹಾತೇಜೋ ರೂಪಿಯಾದ ಸೂರ್ಯದೇವನನ್ನು ಬರೆಯಬೇಕು.

೧೮-೨೦. ಪೂರ್ವಪ್ರಾಕಾರ ಮಧ್ಯದಲ್ಲಿ ಕವರ್ಗಾಕ್ಷರಗಳನ್ನೂ, ಪಂಚಭೂತಗಳನ್ನೂ, ದಕ್ಷಿಣದಲ್ಲಿ ಚವರ್ಗವನ್ನೂ ಚಕ್ಷುಶ್ರೋತ್ರಗಳೆಂಬ ಬುದ್ಧೀಂದ್ರಿಯಗಳನ್ನೂ

ಪಶ್ಚಿಮೇ ಟಕಾರವರ್ಗಃ ಪಂಚಕರ್ಮೇಂದ್ರಿಯಾಣಿ ಚ ।
ಉತ್ತರೇ ತಕಾರವರ್ಗಃ ಪಂಚ ತನ್ಮಾತ್ರಾಣಿ ಚ ।
ಐಶಾನ್ಯಾಂ ಪಕಾರವರ್ಗಮವ್ಯಕ್ತಂ ಚ ತಥಾ ಹಿತಂ ॥ ೨೦ ॥

ಆಗ್ನೇಯ್ಯಾಂ ಯಕಾರವರ್ಗಂ ಬುದ್ಧಿಂ ಚ ।
ನೈಋತ್ಯಾಂ ಶಕಾರವರ್ಗಮಹಂ ಚ ।
ವಾಯವ್ಯಾಂ ಕ್ಷೋಹಂ ಕ್ಷ್ಮಾಂ ಮನಶ್ಚೇತಿ ।
ದ್ವಿತೀಯಪ್ರಾಕಾರೇ ಸುರೇಂದ್ರಂ ।
ಪೂರ್ವೇ ಆಗ್ನೇಯ್ಯಾಂ ಅಗ್ನಿಂ ।
ಯಾಮ್ಯೇ ಯಮಂ ।
ನೈಋತ್ಯೇ ನಿರೃತ್ಯಾಧಿಪಂ ।
ಪಶ್ಚಿಮೇ ವರುಣಂ ।
ವಾಯವ್ಯೇ ವಾಯುಂ ।
ಸೌಮ್ಯೇ ಸೋಮಂ ।
ಐಶಾನ್ಯಾಮೀಶಾನಂ ।
ಮುದ್ರಾಲಕ್ಷಣಂ ಘಟೇತ ಇತಿ ।

---

ಪಶ್ಚಿಮಭಾಗದಲ್ಲಿ ಟವರ್ಗ, ವಾಕ್ಪಾಣಿಪಾದಗಳೆಂಬ ಪಂಚಕರ್ಮೇಂದ್ರಿಯಗಳನ್ನೂ ಉತ್ತರದಲ್ಲಿ ತವರ್ಗವನ್ನೂ, ಪಂಚತನ್ಮಾತ್ರೆಗಳನ್ನೂ, ಈಶಾನ್ಯದಲ್ಲಿ ಪವರ್ಗವನ್ನೂ ಅವ್ಯಕ್ತಸ್ವರೂಪನಾದ ಪರಬ್ರಹ್ಮನನ್ನೂ ವಿನ್ಯಾಸಮಾಡಬೇಕು.

ಆಗ್ನೇಯಭಾಗದಲ್ಲಿ ಯವರ್ಗವನ್ನೂ, ಬುದ್ಧಿಯನ್ನೂ, ನೈರುತ್ಯದಿಕ್ಕಿನಲ್ಲಿ ಶವರ್ಗವನ್ನೂ ಅಹಂಕಾರವನ್ನೂ, ವಾಯುವ್ಯದಲ್ಲಿ, ಕ್ಷೋಹಂಕ್ಷ್ಮಾಂ, ಎಂಬ ಬೀಜಾಕ್ಷರವನ್ನೂ, ಮನಸ್ಸನ್ನೂ, ಬರೆಯಬೇಕು. ಎರಡನೆಯ ಪ್ರಾಕಾರದ ಪೂರ್ವದಲ್ಲಿ ಸುರೇಂದ್ರನನ್ನೂ, ಆಗ್ನೇಯದಿಕ್ಕಿನಲ್ಲಿ -ಅಗ್ನಿಯನ್ನೂ, ದಕ್ಷಿಣದಲ್ಲಿ ಯಮನನ್ನೂ, ನೈರೃತ್ಯದಲ್ಲಿ ನಿಋೃತಿಯನ್ನೂ, ವಾಯುವ್ಯದಲ್ಲಿ ವಾಯುವನ್ನೂ, ಈಶಾನ್ಯದಲ್ಲಿ ಈಶಾನನನ್ನೂ, ಉತ್ತರದಲ್ಲಿ ಸೋಮನನ್ನೂ ಆವಾಹಿಸಿ, ಮುದ್ರಾಲಕ್ಷಣದಿಂದ ಅವುಗಳನ್ನು ಅನುಸಂಧಾನಮಾಡಬೇಕು.

ತೃತೀಯಪ್ರಾಕಾರೇ ಚ ಅಶನಿಂ ತಥಾ ಶಕ್ತಿದಂಡಂ ।
ಖಡ್ಗಂ ಶಂಖಂ ಚಕ್ರಂ ಗದಾಂ ಪರಶುಂ ಚ ।
ಪುನರ್ಲಿಖೇತ್ ।
ತಥಾಪರಂ ಪುರಂ ಚೈವ ಮಹಾಮುದ್ರಾ ।
ದಾತವ್ಯಾ ದಿಶಿ ವಿದಿಶಿ ।
ಪೂರ್ವಾದಾರಭ್ಯ ಲೋಕಪಾಲಾನಾವಾಹಯೇತ್ ।
ಚತುರ್ಥೇ ತ್ವಾವರಣೇ ವ್ಯೋಮಪುಷ್ಪಂ ।
ಬಲಿಮುಪಹಾರಾಂಶ್ಚ ಗೃಹ್ಣೀತವತಿ ।
ಓಂಕಾರಾದಿಸ್ವಾಹಾಂತಾಃ ।
ತತೋಽಗ್ನಿ ಸ್ಥಾಪನಂ ಕೃತ್ವಾ ।
ಆಚಾರ್ಯ ಉಷ್ಣಿಕ್ ಕೃತಭೂಷಣಃ ।
ಭೂಮಿಂ ಉಲ್ಲಿಖ್ಯೋಲ್ಲಿಖ್ಯ ಧೃತದರ್ಭಮವಕೀರ್ಯ ।
ಬ್ರಾಹ್ಮಣಂ ದಕ್ಷಿಣತಃ ಸ್ಥಾಪ್ಯ ಸ್ರುವಪಾತ್ರಂ ವಿಶೋಧ್ಯ ।

---

ಮೂರನೆಯ ಪ್ರಾಕಾರದಲ್ಲಿ ಅಶನಿ, ಶಕ್ತಿ, ದಂಡ, ಖಡ್ಗ, ಶಂಖ, ಚಕ್ರ, ಗದೆ, ಪರಶು, ಮುಂತಾದ ಆಯುಧಗಳನ್ನು ಮತ್ತೆ ಮತ್ತೆ ಬರೆಯಬೇಕು. ಅನಂತರ, ಪೂರ್ವಮುದ್ರೆಗಳನ್ನು ದಿಕ್ಕುಗಳಲ್ಲಿಯೂ ವಿದಿಕ್ಕುಗಳಲ್ಲಿಯೂ ವಿನ್ಯಾಸಮಾಡಬೇಕು ಪೂರ್ವದಿಕ್ಕಿನಿಂದ ಹಿಡಿದು ಅಷ್ಟದಿಕ್ಪಾಲಕರನ್ನೂ ಆವಾಹಿಸಬೇಕು. ನಾಲ್ಕನೆಯ ಆವರಣದಲ್ಲಿ ಅರ್ಚನೆಗೆ ಉಕ್ತವಾದ ವ್ಯೋಮಪುಷ್ಪಬಲಿ, ಉಪಹಾರ ಮುಂತಾದುವುಗಳನ್ನು ಇರಿಸಬೇಕು. ಅನಂತರ ಅಗ್ನಿಸ್ಥಾಪನಮಾಡಿ, ಓಂಕಾರಾದಿಯಾಗಿ ಸ್ವಾಹಾಂತವಾದ ಮಂತ್ರಂಗಳಿದ ಹೋಮಮಾಡಬೇಕು ಆಚಾರ್ಯನನ್ನು, ಶಿರೋವೇಷ್ಟನಾದಿ ಭೂಷಣಗಳಿಂದ ಪೂಜಿಸಿ, ಆಚಾರ್ಯವರಣವನ್ನು ಕೊಡಬೇಕು.

ಭೂಮಿಯನ್ನು ಉಲ್ಲೇಖನಾದಿಗಳಿಂದ ಶುದ್ಧಿಗೊಳಿಸಿ, ದರ್ಭೆಯಿಂದ ಅವಕರಣ (ಗುಡಿಸಿ) ಮಾಡಿ ಬಲಭಾಗದಲ್ಲಿ ಬ್ರಾಹ್ಮಣನೊಬ್ಬನನ್ನು (ಬ್ರಹ್ಮನನ್ನು) ಕೂರಿಸಿ

ಆಜ್ಯಂ ಪ್ರದಕ್ಷಿಣೀಕೃತ್ಯ ದಕ್ಷಿಣಂ ಜಾನುಭೂಮೌ ನಿಪಾತ್ಯ ।
ಸ್ರುವಮುಪಾಗೃಹ್ಯ ಅವಮುಕ್ತಪಾತ್ರಃ ಷಡಾಹುತೀರ್ಜುಹುಯಾತ್ ।
ಸಾನ್ನಿಧ್ಯಕರಣಂ ಸಂಭವತಿ ಏತಾದೃಶಲಕ್ಷಣಮಗ್ನಿಂ ।
ತತಃ ಶಿಷ್ಯಸ್ಯ ಗರ್ಭಾಧಾನಾದ್ಯಾಃ ಪಂಚ ಪಂಚಾಹುತೀ ।
ರ್ಜುಹುಯಾತ್ । ತತೋ ದಂಡಂ ಮೇಖಲಾಂ ।
ಸ್ಥಾಪಯೇತ್ । ಪೂರ್ವತೋ ಮುಖಂ ಪ್ರವೇಶಯೇತ್ಸೂ ।
ರ್ಯಭಕ್ತಾನ್ ಹೃದಯೇನಾಭಿಮಂತ್ರಿತಾನ್ ವಸ್ತ್ರಬದ್ಧಮು ।
ಖಾನ್ ಕೃತ್ವಾ ತ್ರಿಧಾ ಭ್ರಾಮ್ಯನ್ವಿಚಕ್ಷಣಃ ।
ಜಾನುಭ್ಯಾಮವನೀಂ ಗತ್ವಾ ಶಿರಸಾ ತೇ ಕ್ಷಮಾಪಯೇತ್ ॥ ೨೦ ॥

---

ಕೊಂಡು, ಸುಕ್, ಸ್ರುವಸಂಮಾರ್ಜನಾದಿಗಳು ಆಜ್ಯಸಂಸ್ಕಾರ ಇವುಗಳನ್ನು ಸ್ವಶಾಖಾವತ್ತಾಗಿ ನೆರವೇರಿಸಿ ಬಲಗಾಲು ಮಂಡಿಯನ್ನೂರಿಕೊಂಡು, ಆಜ್ಯಪಾತ್ರೆಯನ್ನು ಒಂದು ಕೈಯಲ್ಲಿ ಸ್ಪರ್ಶಮಾಡುತ್ತಾ, ಮತ್ತೊಂದು ಕೈಯಲ್ಲಿ ಸ್ರುವವನ್ನು ಹಿಡಿದು ಆರು ಹೋಮ ಮಾಡಬೇಕು. ಇದರಿಂದ ಅಗ್ನಿಸಾನ್ನಿಧ್ಯವು ಲಭಿಸುವುದು. ಮತ್ತು ಮೇಷವಾಹನನೂ ಸಪ್ತಜ್ವಾಲೆಯುಳ್ಳವನೂ, ಕುಂಡೆ, ಜಪಸರ ಇವುಗಳನ್ನು ಧರಿಸಿದವನೂ, ಪಿಂಗಳವರ್ಣದ ಶ್ಮಶ್ರುವುಳ್ಳವನೂ, ಕೆಂಪಾದ ಕಣ್ಣುಳ್ಳವನೂ, ಆದ ಅಗ್ನಿದೇವನನ್ನು ಧ್ಯಾನಿಸಿ, ಆವಾಹಿಸಬೇಕು. ಅನಂತರ ಶಿಷ್ಯನ ಗರ್ಭಾಧಾನಾದಿ ಸಂಸ್ಕಾರಪ್ರತ್ಯಾಮ್ನಾಯವಾಗಿ, ಒಂದೊಂದು ಕರ್ಮಕ್ಕೆ ಐದೈದು ಹೋಮಗಳಂತೆ ಹೋಮಮಾಡಬೇಕು. ಹಾಗೆಯೇ ಶಿಷ್ಯನಿಗೆ ದಂಡವನ್ನೂ, ಸೊಂಟಕ್ಕೆ ಕಟ್ಟುವ ಮೇಖಲೆಯನ್ನೂ (ಉಡಿದಾರ)ಕೊಡಬೇಕು. ಹೀಗೆ ಸಂಸ್ಕರಿಸಿ ಶಿಷ್ಯನನ್ನು ಪೂರ್ವಾಭಿಮುಖನಾಗಿ ಆ ಯಜ್ಞಮಂಟಪಕ್ಕೆ ಪ್ರವೇಶಿಸಬೇಕು. ಅಲ್ಲಿರುವ ಸೂರ್ಯ ಭಕ್ತರೂ, ಸೂರ್ಯ ಮಂತ್ರಪಾಠಕರೂ, ವಸ್ತ್ರದಿಂದ ಆಚ್ಛಾದಿತರಾದವರೂ ಆದವರನ್ನು ಮೂರು ಸಾರಿ ಪ್ರದಕ್ಷಿಣಾದಿಗಳಿಂದ ನಮಸ್ಕರಿಸಿ ಮೊಳಕಾಲೂರಿ ವಂದಿಸಿ ಅವರಲ್ಲಿ ತನ್ನ ಅಪರಾಧಕ್ಷಮಾಪಣೆ ಕೇಳಿಕೊಳ್ಳಬೇಕು.

ತತ್ರ ತಚ್ಛಿಕೇಃ ಪುಣ್ಯಂ ತಸ್ಯ ತಲ್ಲಯಮಾದಿಶೇತ್ ।
ನಾಮ ತಸ್ಯ ಸ್ವರೂಪೇಣ ಕಾರಯೇದ್ರವಿಪೂರ್ವಕಂ ॥ ೨೨ ॥

ಯಷ್ಟ್ವಾ ಚೈವ ಮಹಾಶ್ವೇತಾ ಹೃದಿ ಧ್ಯಾತ್ವಾ ದಿವಾಕರಂ ।
ಸಾಧನಂ ತು ನಿರೀಕ್ಷೇತ ತತೋ ದೀಕ್ಷಿತ ಉಚ್ಯತೇ ॥ ೨೩ ॥

ತತಸ್ಸಾಧಕೋಗ್ನಿಸ್ಥಾಪನಂ ಕೃತ್ವೈಕೈಕಾಮಾಹುತಿಂ ।
ಜುಹುಯಾತ್ ತತೋಽಷ್ಟಪುಷ್ಪಿಕಾಂ ದಾಪಯೇತ್ ॥ ೨೪ ॥

ಇತಿ ಶ್ರೀ ಸಾಂಬಪುರಾಣೇ ದ್ವಿಪಂಚಾಶತ್ತಮೋಽಧ್ಯಾಯಃ.

---

೨೨-೨೩. ಗುರುವು ಶಿಷ್ಯನಿಗೆ ಸುಕೃತವು ವೃದ್ಧಿಯಾಗುವಂತೆಯೂ, ಪಾಪವು ನಾಶವಾಗುವಂತೆಯೂ, ಅನುಗ್ರಹಿಸಬೇಕು. ಶಿಷ್ಯನಾದರೋ ತನ್ನ ಗುರುವನ್ನು ಸೂರ್ಯದೇವನೆಂದೇ ಭಾವಿಸಿರಬೇಕು. ಅಲ್ಲದೆ ಶುದ್ಧವಾದ ತನ್ನ ಮನಸ್ಸಿನಲ್ಲಿ ಸರ್ವದಾ ಸೂರ್ಯ ಭಗವಂತನನ್ನೇ ಪ್ರಾರ್ಥಿಸುತ್ತಾ ಮುಂದಿನ ಯಾಗಸಾಧನಗಳ ಶೇಖರಣೆಗೆ ಮನಗೊಡಬೇಕು.

೨೪. ಅನಂತರ ಆಚಾರ್ಯನು ಪ್ರಾಯಶ್ಚಿತ್ತಾದ್ಯಾಹುತಿಗಳನ್ನೂ ಅಗ್ನಿಯಲ್ಲಿ ಸಮರ್ಪಿಸಿ, ಅನಂತರ ಅಷ್ಟಪುಷ್ಪ ಪೂಜೆಯನ್ನು ಮಾಡಿ ಸಮಾಪ್ತಿಗೊಳಿಸಬೇಕು. (ಇದು ಸೂರ್ಯವ್ರತ ದೀಕ್ಷಾವಿಧಾನ)

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಐವತ್ತೆರಡನೆಯ ಅಧ್ಯಾಯವು ಮುಗಿದುದು.

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ತ್ರಿಪಂಚಾಶತ್ತಮೋಽಧ್ಯಾಯಃ



॥ ನಾರದ ಉವಾಚ ॥

ಪ್ರಥಮಂ ಚಿಂತಯೇತ್ಪದ್ಮಮಷ್ಟಪತ್ರಂ ಸಕರ್ಣಿಕಂ ।
ತನ್ಮಧ್ಯೇ ಚಿಂತಯೇದ್ದೇವಂ ಭಾಸ್ಕರಂ ರಶ್ಮಿವಿಗ್ರಹಂ ॥ ೧ ॥

ಸಹಸ್ರದಿನಸಂಸ್ಕಾರಂ ಸೂರ್ಯಕೋಟಿಸಮಪ್ರಭಂ ।
ಮಹಾತೇಜೋಮಯಂ ಧ್ಯಾತ್ವಾ ಆದಿತ್ಯಂ ಪೂಜಯೇದ್ಬುಧಃ

ಯೋಽಯಂ ಹರಿತವರ್ಣಾಭಂ ರಥೇ ತಿಷ್ಠತಿ ವಾಜಿನಂ ।
ಅರುಣಃ ಸಾರಥಿರ್ಯಸ್ಯ ರಥವಾಹಃ ಸ್ವಯಂ ಸ್ಥಿತಃ ॥ ೨ ॥

---

## ಐವತ್ತುಮೂರನೆಯ ಅಧ್ಯಾಯ

೧-೨. ಅನಂತರ ಸೂರ್ಯದೇವನನ್ನು ಈ ರೀತಿಯಾಗಿ ಆರಾಧಿಸಬೇಕು. ಮೊದಲು ಅಷ್ಟದಳಪದ್ಮಮಧ್ಯಗತನಾಗಿಯೂ, ಕಿರಣಗಳಪುಂಜವಾಗಿಯೂ, ತೇಜೋರಾಶಿಯಾಗಿಯೂ, ಇರುವ ಸಹಸ್ರ ಕಿರಣನಾದ ಈ ಪರಾತ್ಪರವಸ್ತುವನ್ನು ಕಮಲಮಧ್ಯದಲ್ಲಿರುವಂತೆ ಧ್ಯಾನಿಸಬೇಕು.

೩-೪. ಸೂರ್ಯದೇವನಿಗೆ ಸಾರಥಿಯಾಗಿಯೂ, ಹರಿದ್ವರ್ಣದ ಕುದುರೆಗಳನ್ನು ಹಿಡಿದು ರಥವನ್ನು ನಡೆಸುವವನಾಗಿಯೂ, ಇರುವ ಅರುಣನು ಸೂರ್ಯನ ಮುಂದಿ

ತಮಹಂ ಲೋಕಶಾಂತ್ಯರ್ಥಮಾದಿತ್ಯಮಾಹ್ವಯಾಮ್ಯಹಂ ।
ಆಯಾಹಿ ಭಗವನ್ ಭಾನೋ ತವ ಯಜ್ಞಃ ಪ್ರವರ್ತತೇ ॥ ೪ ॥

ಇದಮರ್ಘ್ಯಂ ಚ ಪಾದ್ಯಂ ಚ ಪ್ರತಿಗೃಹ್ಯ ನಮೋನಮಃ ।
ಆಹ್ವಾನಂ ಸಹಸ್ರಕಿರಣಂ ಸ್ವಾಗತಂ ಸ್ವಾಗತಂ ಠಃ ಠಃ ।
ಓಂ ಧರಧರ ಅರ್ಧ್ಯ ॥ ೫ ॥

ವನಸ್ಪತಿರಸೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ।
ಆಘ್ರೇಯಸ್ಸರ್ವಭೂತಾನಾಂ ಪ್ರತಿಗೃಹ್ಯ ನಮೋ ನಮಃ ॥ ೬ ॥

ಸ್ವಾಹಾ ಧೂಪಃ ಗಂಧಗಂಧಾನಿ ಠಃ ಠಃ (ಗಂಧಃ) ।
ಓಂ ದೀಪಪಂಚಲಿನಿ ಠಠಂ ದೀಪಃ ।
ಓಂ ಏತತ್ಸುಮನಸಾಂ ದಿವ್ಯಂ ಗಂಧಾಢ್ಯಂ ಗಂಧವತ್ತಮಂ ।

---

ರುವನು. ಇಂತಹ ಸಾರಥಿದ್ವಿತೀಯನಾದ ಸೂರ್ಯಭಗವಂತನನ್ನು ಲೋಕಕಲ್ಯಾಣಕ್ಕಾಗಿ ಇಲ್ಲಿಗೆ ಆಹ್ವಾನಿಸುವೆನು. ಪೂಜ್ಯನಾದ ಭಾನುವೇ! ನಿನ್ನ ಪೂಜಾರ್ಥವಾಗಿ ನನಗೆ ಸಾನ್ನಿಧ್ಯವನ್ನು ದಯಪಾಲಿಸು ಎಂದು ಪ್ರಾರ್ಥಿಸಬೇಕು.

೫. ಹೇ ಸ್ವಾಮಿಯೇ, ಈ ಅರ್ಘ್ಯವನ್ನೂ, ಪಾದ್ಯವನ್ನೂ, ಸ್ವೀಕರಿಸಿ ನನ್ನ ಆಹ್ವಾನದಂತೆ ಇಲ್ಲಿಗೆ ದಯಮಾಡಿಸಿ ನನಗೆ ಪ್ರಸನ್ನನಾಗು, ಎಂದು ಅರ್ಘ್ಯವನ್ನು ಸಮರ್ಪಿಸಬೇಕು.

೬. ಅನೇಕ ವನಸ್ಪತಿಗಳ ರಸದಿಂದ ಮೇಳನವಾಗಿರುವ ಈ ದಿವ್ಯಗಂಧವನ್ನು ಆಘ್ರಾಣಿಸು. ಸರ್ವಭೂತಗಳಿಗೂ ಒಡೆಯನಾದ ನಿನಗೆ ಈ ಗಂಧವು ತೃಪ್ತಿಕರವಾಗಲಿ, ಎಂದು ಗಂಧವನ್ನು ಲೇಪಿಸಬೇಕು.

೭. ಧೂಪಾನಂತರದಲ್ಲಿ ಮೇಲಿನ ಮಂತ್ರದಿಂದ ನೀರಾಜಿಸಬೇಕು.

ಆಘ್ರೇಯಯಂ ಸರ್ವಭೂತಾನಾಂ ಪ್ರತಿಗೃಹ್ಯ ನಮೋ ನಮಃ
ತಃ ತಃ (ಪುಷ್ಪಂ) ॥ ೭ ॥

ಓಂ ಬ್ರಹ್ಮಣಾ ಗ್ರಥಿತಂ ಸೂತ್ರಂ ಪವಿತ್ರಮಿದಮುತ್ತಮಂ ।
ಯಜ್ಞೋಪವೀತಂ ಮಹಾತೇಜ ಗೃಹ್ಣ ಹಂಸ ನಮೋಸ್ತುತೇ ॥ ೮ ॥

ಸರ್ವೌಷಧಿಸಮೃದ್ಧಸ್ತು ಭಕ್ಷ್ಯೋಯಂ ಪರಮೇಶ್ವರ ।
ಅಮೃತಂ ಗೃಹ್ಯತಾಂ ದೇವ ಅಮೃತೋಯಂ ತವಾಶನಃ (ಅನ್ನಂ) ॥ ೯ ॥

ರತ್ನೋಜ್ಜ್ವಲಮಿದಂ ಪುಣ್ಯಂ ಮುಕುಟಂ ಭೂಷಣೋತ್ತಮಂ ।
ಮುಕುಟಂ ಗೃಹ್ಯತಾಂ ದೇವ ದೇವದೇವ ನಮೋ ನಮಃ ॥ ೧೦ ॥

॥ ಇತಿ ಮುಕುಟಂ ॥

---

ಓ ಸ್ವಾಮಿಯೇ. ಈ ಪುಷ್ಪಗಳೆಲ್ಲಾ ಶ್ರೇಷ್ಠವಾದುದಾಗಿ ದಿವ್ಯಗಂಧದಿಂದ ಕೂಡಿರುವುವು. ಇಂತಹ ಪುಷ್ಪವನ್ನು ಆಘ್ರಾಣಿಸಿ ನಮ್ಮನ್ನೂ ಅನುಗ್ರಹಿಸಬೇಕು. ಎಂದು ಹೇಳುತ್ತಾ ಪುಷ್ಪವನ್ನು ಸಮರ್ಪಿಸಬೇಕು.

೮-೯. ಓ ಸ್ವಾಮಿಯೇ, ಸಾಕ್ಷಾದ್ಬ್ರಹ್ಮನಿಂದಲೇ ನಿರ್ಮಿತವಾಗಿ, ಪರಮ ಪವಿತ್ರವೆನಿಸಿರುವ ಯಜ್ಞೋಪವೀತವನ್ನು ತೇಜೋರಾಶಿಯಾದ ನೀನು ಸ್ವೀಕರಿಸಬೇಕು. ಎಂದು ಯಜ್ಞೋಪವೀತದಾನಮಾಡಬೇಕು.

ಓ ಸ್ವಾಮಿಯೇ, ಸಕಲ ಔಷಧಿಗಳಿಂದಕೂಡಿ, ಅಮೃತೋಪಮವಾದ ಭಕ್ಷ್ಯ ಭೋಜ್ಯಗಳಿಂದ ಮೆರೆಯುತ್ತಿರುವ ಈ ನಿವೇದನಾನ್ನವನ್ನು ಅಮೃತಕ್ಕೆ ಸಮಾನವೆಂದರಿತು ಆಸ್ವಾದಿಸು, ಎಂದು ನಿವೇದನಮಾಡಬೇಕು.

೧೦-೧೧. ಎಲೈ ಸ್ವಾಮಿಯೇ, ರತ್ನದಿಂದ ಪ್ರಕಾಶಮಾನವಾದ ಮತ್ತು ಭೂಷಣೋತ್ತಮವೆನಿಸಿದ ಈ ದಿವ್ಯಕಿರೀಟವನ್ನು ಸ್ವೀಕರಿಸು. ಎಂದು ಕಿರೀಟವನ್ನು ಸಮರ್ಪಿಸಬೇಕು.

**ಓಂ ಭಾಸ ರಾಯತ್ವಿದಂ ವಸ್ತ್ರಂ ಸರ್ವವಸ್ತ್ರೋತ್ತಮಂ ಪರಂ ।**
**ಕಟಿಭೂಷಃ ಮಿದಂ ಪುಣ್ಯಂ ದಿವ್ಯಂ ದೇವ ನಮೋಽಸ್ತು ತೇ ॥ ೧೧ ॥**

**ಇತಿ ೯ ಸಾಂಬಪುರಾಣೇ ಪೂಜಾವಿಧಿನಿರೂಪಣೇ ಪ್ರಥಮಂ**
**ಪಟಲಂ ನಾಮ ತ್ರಿಪಂಚಾಶತ್ತಮೋಽಧ್ಯಾಯಃ.**

ಅನಂತರ ಭಾಸ್ಕರನಿಗಾಗಿ ಮೀಸಲಾಗಿಟ್ಟಿರುವ ಈ ದಿವ್ಯವಸ್ತ್ರವನ್ನು ಕಟಿ ಭೂಷಣರೂಪವ ಾಗಿ ಸ್ವೀಕರಿಸಿ ನಮ್ಮನ್ನು ಕಾಪಾಡು ಎಂದು ಹೇಳುತ್ತಾ ಒಂದು ಹೊಸವಸ್ತ್ರವನ್ನು ಅರ್ಪಿಸಬೇಕು.

ಇಲ್ಲಿಗೆ ಸಾಂ ಪುರಾಣದ ಪೂಜಾವಿಧಿನಿರೂಪಣದಲ್ಲಿ ಪ್ರಥಮ ಪಟಲವು
ಸಮಾಪ್ತವಾದುದು

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ
# ಚತುಪಂಚಾಶತ್ತಮೋಽಧ್ಯಾಯಃ

---

॥ ದೇವಾ ಊಚುಃ ॥

ಸಂಕ್ಷೇಪೇಣ ತು ದೇವೇಶ ಕಥಯಸ್ವಾಷ್ಟಪುಷ್ಪಿಕಾಂ ।

ದೇವ ಉವಾಚ

ಖಖೋಲ್ಕಾಯ ಸ್ವಾಹಾ ಠಃ ಠಃ ॥ ೧ ॥

ಓಂಕಾರಂ ಸ್ಥಾಪಯೇತ್ಪೂರ್ವಂ ಖಕಾರಂ ವಹ್ನಿಸಂಯುತಂ ।
ಖೋಂಕಾರಂ ದಕ್ಷಿಣೇ ಭಾಗೇ ಲ್ಕಾಕಾರಂ ನೈಋತೇ ತಥಾ ॥ ೨ ॥

---

## ಐವತ್ತನಾಲ್ಕನೆಯ ಅಧ್ಯಾಯ.

ಅನಂತರ ದೇವತೆಗಳು ಸೂರ್ಯದೇವನಿಗೆ ಸಮರ್ಪಿಸುವ ಅಷ್ಟಪುಷ್ಪಿಕಾ ವಿಧಾನವನ್ನು ವಿವರಿಸಬೇಕೆಂದು ಕೇಳಿಕೊಂಡರು. ಆಗ ದೇವದೇವನು ಈ ರೀತಿ ಹೇಳಲಾರಂಭಿಸಿದನು.

೨-೩. ಇಲ್ಲಿ ಅಷ್ಟಾಕ್ಷರಾತ್ಮಕವಾಗಿರುವ ಮಂತ್ರವೆಂದರೆ ಓಂ ಖಖೋಲ್ಕಾಯ ಸ್ವಾಹಾಠಃಠಃ ಎಂಬುದು. ಇದರಲ್ಲಿ ಮೊದಲನೆಯದಾದ ಓಂಕಾರವನ್ನು ಪೂರ್ವಭಾಗದಲ್ಲಿಯೂ, ಖಕಾರವನ್ನು ಆಗ್ನೇಯದಲ್ಲೂ, ದಕ್ಷಿಣದಲ್ಲಿ ಖೋಕಾರವನ್ನೂ ನೈಋತ್ಯದಲ್ಲಿ

ಯಕಾರಂ ಪಶ್ಚಿಮೇ ಭಾಗೇ ಸ್ವಾಕಾರಂ ವಾಯುನೇ ತತಃ ।
ಹಾಕಾರಮುತ್ತರೇ ಸ್ಥಾಪ್ಯ ತಥೈಶಾನ್ಯಾಂ ಕ್ಷಕಾರಕಂ ॥ ೩ ॥

ಓಂಕಾರೇಣಾವಾಹನಂ ಕುರ್ಯಾತ್ಸಾನ್ನಿಧ್ಯೇ ಚ ಖ ಉಚ್ಯತೇ ।
ಖೋಂಕಾರಂ ಸ್ಥಾಪನೇ ವಿದ್ಯಾಲ್ಯಾಕಾರಂ ಪುಷ್ಪಕಾರಣಾತ್ ॥ ೪ ॥

ಸ್ವಾಕಾರಂ ಯೋಜಯೇತ್ಸೂಕ್ತಂ ಭೋಜ್ಯಂ ಭಕ್ಷ್ಯಂ ತಥೈವ ಚ ।
ಹಾಕಾರಂ ಚ ಸದಾ ಯೋಗೀ ಚಿಂತಯೇನ್ಮುಕ್ತಿಕಾರಣಾತ್ ॥ ೫ ॥

ಕ್ಷಕಾರಂ ತು ಸ್ವಯಂ ದೇವಮಾದಿತ್ಯಸಮತೇಜಸಂ ।
ವಿನ್ಯಸೇದ್ದಕ್ಷಿಣಾವರ್ತಂ ಸಾಧಕೋ ಬೀಜಸಾಧನೇ ॥ ೬ ॥

ತತೋ ಮಂತ್ರಾನ್ ಪ್ರಯುಂಜೀತ ಯಥಾ ನ್ಯಾಯೇನ ಸಾಧಕಃ ।

॥ ಬೀಜಾಷ್ಟಪುಷ್ಪಿಕಾ ॥

ಇತಿ ಶ್ರೀ ಸಾಂಬಪುರಾಣೇ ಚತುಃಪಂಚಾಶತ್ತಮೋಧ್ಯಾಯಃ.

---

ಲ್ಯಾಕಾರವನ್ನೂ, ಉತ್ತರದಲ್ಲಿ ಹಾಕಾರವನ್ನೂ, ಈಶಾನ್ಯದಲ್ಲಿ ಕ್ಷಕಾರವನ್ನೂ ಬರೆಯಬೇಕು. ಒಟ್ಟಿನಲ್ಲಿ ಮಂಡಲವು ಅಷ್ಟದಳಾತ್ಮಕವಾಗಿರಬೇಕು.

೩-೫. ಓಂಕಾರದಿಂದ ಸೂರ್ಯಾವಾಹನೆಯೂ, ಖಕಾರದಿಂದ ಸೂರ್ಯ ಸಾನ್ನಿಧ್ಯವೂ ಒದಗುವುದು. ಸ್ಥಾಪನದಲ್ಲಿ ಖೋಕಾರವೂ, ಲ್ಯಾರವು ಪುಷ್ಪಾರ್ಚನೆಯಲ್ಲಿಯೂ, ಸ್ವಾಕಾರದಿಂದ ಸೂಕ್ತಗಳು. ಭಕ್ಷ್ಯಭೋಜ್ಯಾದಿಗಳೂ, ನಿವೇದಿಸಲ್ಪಡುವುವು. ಹಾಕಾರವನ್ನು, ಯೋಗಿಯು ಅಪೇಕ್ಷಿಸುವ ಮುಕ್ತಿಯ ಸಲುವಾಗಿಯೂ ಇದೆಯೆಂದು ಭಾವಿಸಬೇಕು.

೬. ಕ್ಷಕಾರವೇ ಸಾಕ್ಷಾತ್ಸೂರ್ಯಮೂರ್ತಿಯೆಂದು ಭಾವಿಸಬೇಕು. ಈ ಎಂಟು ಅಕ್ಷರಗಳನ್ನು ಬಲಭಾಗದಿಂದ ಪ್ರದಕ್ಷಿಣಾಕಾರದಲ್ಲಿ ಸಾಧಿಸಬೇಕು. ಅನಂತರ ಆಯಾ ಪೂಜಾದಿಗಳಿಗೆ ಬೇಕಾದ ಮಂತ್ರಗಳನ್ನು ಬಳಸಿ ಪೂಜಿಸಬೇಕು. [ಓಂ ಖಖೋಲ್ಯಾಯಸ್ವಾಹಾಃಕ್ಷಃ ಎಂಬದೇ ಅಷ್ಟಾಕ್ಷರಾತ್ಮಕವಾದ ಅಷ್ಟಪುಷ್ಪಿಕಾ]

ಇಲ್ಲಿಗೆ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಪಂಚಪಂಚಾಶೋಧ್ಯಾಯಃ

---

॥ ದೇವ ಉವಾಚ ॥

ಯದ್ಯತ್ಸ್ವರ್ಗಾಪವರ್ಗಾರ್ಥಂ ಯಚ್ಚ ಸರ್ವಾರ್ಥಸಾಧನಂ ।
ಸಂವತ್ಸರಾಖ್ಯಮತುಲಂ ಮಂಡಲಂ ಕಥಯಾಮಿ ತೇ ॥ ೧ ॥

ಆಚಾರ್ಯಃ ಸಂಯುತೋ ಧೀಮಾನರ್ಕಶಾಸ್ತ್ರವಿಶಾರದಃ ।
ಕ್ರೋಧಲೋಭಪರಿತ್ಯಕ್ತೋ ದ್ವಿಜಶ್ಚಸ್ತೋ ನಿರಾಮಯಃ ॥ ೨ ॥

ಸ್ನಾನಾಭಿಷೇಕನಿಪುಣಾಃ ಶಾಸ್ತ್ರಭಕ್ತಾ ನಿರಾಮಯಾಃ ।
ಗುರೋರ್ವಿಧಿಸಮಾಖ್ಯಾತಾ ಇಷ್ಯಂತೇ ಪರಿಚಾರಕಾಃ ॥ ೩ ॥

---

## ಐವತ್ತೈದನೆಯ ಅಧ್ಯಾಯವು

೧-೨. ಸ್ವರ್ಗ, ಮೋಕ್ಷಮುಂತಾದ ಆಮುಷ್ಮಿಕಫಲಾಪೇಕ್ಷಿಯೂ. ಭೋಗ್ಯವಸ್ತುಗಳಿಂದ ಒದಗುವ ಐಹಿಕಸುಖಾಭಿಲಾಷಿಯೂ ಆದವನು ಆಚರಿಸಬೇಕಾದ ಸಂವತ್ಸರ ಮಂಡಲವೆಂಬ ವ್ರತ ವಿಧಾನವನ್ನು ಈಗ ಹೇಳುವೆನು. ಮೊದಲು ಇದರಲ್ಲಿ ಆಚಾರ್ಯನೆನಿಸಬೇಕಾದರೆ ಆತನು ಜಿತೇಂದ್ರಿಯನೂ. ಬುದ್ಧಿಶಾಲಿಯೂ, ಸೂರ್ಯವಿಷಯವನ್ನು ಚೆನ್ನಾಗಿ ಅರಿತವನೂ, ಕ್ರೋಧ, ಲೋಭ ಇವುಗಳಿಂದ ಬಿಡಲ್ಪಟ್ಟವನೂ, ದ್ವಿಜವಂಶದವನೂ, ರೋಗಾದ್ಯುಪದ್ರವವಿಲ್ಲದವನೂ, ಆಗಿರಬೇಕು.

೩-೪. ಆ ಕರ್ಮಕ್ಕೆ ಸಹಾಯಕರಾಗಿರುವವರು, ಸ್ನಾನಾದಿಗಳಿಂದ ಶುದ್ಧರಾಗಿ, ಶಾಸ್ತ್ರಭಕ್ತರೂ, ನೀರೋಗಿಗಳೂ, ಆಗಿರಬೇಕು. ಗುರುವಿನ ಅಪ್ಪಣೆಯಂತೆ

ಕುಲೀನಾಶ್ಶುಚಯೋ ದಾಂತಾ ದೇವದ್ವಿಜಪರಾಯಣಾಃ ।
ಏತೇ ಶಿಷ್ಯಾಃ ಪ್ರಶಂಸಂತೇ ರವಿಶಾಸನತತ್ಪರಾಃ ॥ ೪ ॥

ಅನ್ಯೇ ಯೇ ಯೇಸ್ಸ್ವರಾರ್ತಾ ವಾ ಪಾಪರೋಗಾದ್ಯವಿಪ್ಲುತಾಃ ।
ಅಪ್ರಜಾ ವಸುಹೀನಾ ವಾ ನ ಕುರ್ಯುಸ್ತೇಭಿಷೇಚನಂ ॥ ೫ ॥

ಸಪ್ತಮ್ಯಾಮುಪರಾಗೇ ಚ ಸಂಕ್ರಾಂತಿಷು ಗಭಸ್ತಿನಃ ।
ಪುಣ್ಯೇಷ್ವನ್ಯೇಷು ವಾಹಸ್ಸು ಲಿಖೇದರ್ಕೋದಿತೇ ತಥಾ ॥ ೬ ॥

ಪ್ರಾಗುದ್ದಿಷ್ಟೇ ಭುವೋ ಭಾಗೇ ಸುವಿಸ್ತೀರ್ಣೇ ಶುಭೇ ಶುಚೌ ।
ಗೋಭಿರಧ್ಯುಷಿತಂ ಕಾರ್ಯಂ ಬ್ರಾಹ್ಮಣೈಶ್ಚಾಭಿನಂದಿತಂ ॥ ೭ ॥

ಚೈತ್ಯಕಂಟಕವಲ್ಮೀಕಶ್ಮಶಾನಾದಿವಿವರ್ಜಿತಂ ।
ಖಖೋಲ್ಕಹೃದಯೇನಾರ್ಘ್ಯಂ ದತ್ವಾ ಚೈತದ್ವಿಶೋಧಯೇತ್ ॥ ೮ ॥

---

ನಡೆಯುವವರಾಗಿ ವಿಧೇಯತೆಯಿಂದಿರಬೇಕು. ಶಿಶ್ಯರಾದವರು ಸದ್ವಂಶಜರಾಗಿಯೂ ಶುಚಿರ್ಭೂತರಾಗಿ ದಮನ ಶಕ್ತಿಯಿಂದ ಕೂಡಿದವರಾಗಿಯೂ ಇರಬೇಕು. ಅಂತಹ ಶಿಶ್ಯರು ಸದಾ ಸೂರ್ಯಶಾಸ್ತ್ರದ ಅರಿವಿನಲ್ಲಿ ಮನಸ್ಸಿಟ್ಟವರಾಗಿರಬೇಕು.

೫-೬. ಇನ್ನು ಉಳಿದ ಆರ್ತರೂ. ಪಾಪಿಷ್ಠರೂ, ರೋಗಿಗಳೂ, ನಿರಪತ್ಯರೂ, ಹುಟ್ಟುದರಿದ್ರರೂ, ಇಂತಹವರು ಇದರಲ್ಲಿ ಭಾಗವಹಿಸಬಾರದು. ಈ ವ್ರತವನ್ನು ಮಾಡಬೇಕಾದರೆ ಸಪ್ತಮೀ, ಗ್ರಹಣಕಾಲ, ಸೂರ್ಯಸಂಕ್ರಾಂತಿ, ಅಥವಾ ಪುಣ್ಯಕರವಾದ ದಿನದಲ್ಲಿ ಸೂರ್ಯೋದಯ ಕಾಲದಲ್ಲಿ ಆರಂಭಿಸಬೇಕು.

೭-೮. ಇಂತಹ ದಿನದಲ್ಲಿ, ವಿಶಾಲವಾಗಿಯೂ ಶುಚಿಯಾಗಿಯೂ ಇರುವ ಒಂದು ಭಾಗವನ್ನು, ಗೋಬ್ರಾಹ್ಮಣರಿಂದ ಕೂಡಿದ್ದನ್ನಾಗಿ ಮಾಡಿಕೊಳ್ಳಬೇಕು. ಅಲ್ಲಿ ಬಸ್ತಿ, ಸ್ಮಶಾನ, ಅಥವಾ ಹುತ್ತ, ಮುಳ್ಳುಗಿಡಗಳು ಇವುಗಳ ಸಂಬಂಧವಿರಬಾರದು. ಇಂತಹ ಭೂಭಾಗವನ್ನು ಅರ್ಕಹೃದಯ ಮಂತ್ರದಿಂದ (ಮೂಲಮಂತ್ರ) ಶುದ್ಧಿಗೊಳಿಸಬೇಕು.

ದಂದಶೂಕಾಖುಕೇಶಾಸ್ಥಿಕಾಷ್ಠಭಸ್ಮತುಷಾದಿಕಂ ।
ಖಖೋಲ್ಕಂ ಚ ಗುರುಂ ಚೈವ ಪ್ರಣಮ್ಯ ಶಿರಸಾ ತತಃ ॥ ೯ ॥

ಭೂಮ್ಯಾದಿಭ್ರಾಮಯೇಚ್ಛಿಷ್ಯಃ ಸ್ವಪೇತ್ಸಂಯತಮಾನಸಃ ।
ಪ್ರಾಸಾದಂ ದ್ವಿರದಾದೀನಾಂ ಕಾನನಸ್ಯ ದ್ರುಮಸ್ಯ ಚ ॥ ೧೦ ॥

ಆರೋಹಣಂ ಪ್ರಶಸ್ತಂ ಸ್ಯಾತ್ಸ್ವಪ್ನೇ ಸಿಂಹಾಸನಸ್ಯ ವಾ ।
ವಸ್ತ್ರಭೂಷಣದಧ್ಯನ್ನನಾರೀಕ್ಷೇತ್ರಧ್ವಜಸ್ರಜಂ ॥ ೧೧ ॥

ಲೋಭೋ ಪ್ರಸ್ತರಣಂ ವೈರಿಮಾರಣಂ ರುಧಿರಸ್ರವಂ ।
ಮಾಂಸಾಶನಂ ಸುರಾಸ್ವಾದೋ ರುಧಿರಸ್ವಾದುಕರ್ತನಂ ॥ ೧೨ ॥

ಸ್ವಪ್ನೆ ಏವಂ ವಿಧೋ ದೃಷ್ಟಃ ಸಾಧಯೇದಭಿವಾಂಛಿತಂ ।
ಪುನಃ ಕುರ್ವೀತ ಸಂಸ್ಕಾರಂ ಚಂದನಾಗುರುಪಾಣಿನಾ ॥ ೧೩ ॥

---

೯-೧೦. ಆ ಭೂಮಿಯಲ್ಲಿ ಹಾವು, ಇಲಿ, ಕೂದಲು, ಮೂಳೆ, ಕಾಷ್ಠ ಭಸ್ಮ, ಹೊಟ್ಟು ಮುಂತಾದುವುಗಳು ಇಲ್ಲದಂತೆ ಶುದ್ಧಿಗೊಳಿಸಬೇಕು. ಅನಂತರ ವ್ರತಿಯು ತನ್ನ ಗುರುವು ಸಾಕ್ಷಾತ್ ಸೂರ್ಯಸ್ವರೂಪನೆಂದು ತಿಳಿದು ಆತನಿಗೆ ವಂದಿಸಿ, ಆತನ ಅಪ್ಪಣೆಯಂತೆ ಪ್ರದೇಶಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ವಿಭಾಗಿಸಿ, ರಾತ್ರಿ ಜಿತೇಂದ್ರಿಯನಾಗಿ ಅಲ್ಲಿಯೇ ನಿದ್ರಿಸಬೇಕು. ಗಜಶಾಲೆ, ಕಾನನ, ಮರ, ಸಿಂಹಾಸನ ಇಂತಹವುಗಳ ಆರೋಹಣವು ಆ ರಾತ್ರಿ ಸ್ವಪ್ನದಲ್ಲಿ ಕಂಡರೆ ಅದು ಶ್ರೇಷ್ಠ ವೆನಿಸುವುದು.

೧೧-೧೩. ಅಲ್ಲದೆ ಸ್ವಪ್ನದಲ್ಲಿ ವಸ್ತ್ರ, ಭೂಷಣಗಳನ್ನೂ, ಮೊಸರನ್ನ, ಸುಮಂಗಲಿ, ಕ್ಷೇತ್ರಗಳು, ಧ್ವಜ, ಪುಷ್ಪಮಾಲೆ, ಲೋಭಿಗಳ ಪ್ರಸಾರ, ವೈರಿಮಾರಣ, ರಕ್ತಪ್ರವಾಹ, ಮಾಂಸಭಕ್ಷಣ, ಮದ್ಯಪಾನ, ರಕ್ತಬರುವಂತೆ ಛೇದಿಸುವುದು. ಇಂತ ಹವುಗಳನ್ನು ನೋಡುವುದರಿಂದ ಇಷ್ಟಾರ್ಥಸಿದ್ಧಿಯಾಗುವುದೆಂದು ತಿಳಿಯಬೇಕು. ಅನಂತರ ಮರುದಿನ ಮತ್ತೆ ಆ ಭೂಮಿಯನ್ನು ಚಂದನ, ಅಗುರು ಮುಂತಾದುವು ಗಳಿಂದ ಶುದ್ಧಿಗೊಳಿಸಬೇಕು.

ತತ್ಸ್ಥಾನಂ ಶೋಭನಂ ಕಾರ್ಯಂ ನಾನಾಧ್ವಜವಿಭೂಷಿತಂ ।
ಕಿಂಕಿಣೀನಾದಮುಖರಂ ಪ್ರಚಲಚ್ಚಾರುಚಾಮರಂ ॥ ೧೪ ॥

ಪದ್ಮಪತ್ರವನೋಪೇತಂ ಕದಲೀಖಂಡಮಂಡಿತಂ ।
ಶಿಖಿಪಿಚ್ಛೋಲ್ಲಸಚ್ಛತ್ರಂ ವಿತಾನಕವಿಭೂಷಿತಂ ॥ ೧೫ ॥

ನಾನಾರತ್ನಸಮಾಕೀರ್ಣಂ ಲಸತ್ಸ್ರಗ್ದಾಮತೋರಣಂ ।
ತ್ರಿವೃತಂ ಗ್ರಂಥಿರಹಿತಂ ಕ್ಷೌಮಂ ಕಾರ್ಪಾಸಮಾವಿಕಂ ॥ ೧೬ ॥

ಸೂತ್ರಂ ಪ್ರಶಸ್ಯತೇ ತತ್ರ ಖಖೋಲ್ಕಪುರತಸ್ತತಃ ।
ಆಶಾಪೂರ್ವಾ ಸಮುಸ್ಥಾತು ಸಾವಿತ್ರ್ಯ ಶಾಸತೇ ರವಿಃ ॥ ೧೭ ॥

ಧ್ರುವಾಸ್ಪದಾಸ್ತು ಸೌಮ್ಯಾ ಯೇ ಸ್ಯಾತಾಂ ಪಶ್ಚಿಮದಕ್ಷಿಣೇ ।
ತತ್ರ ಕ್ಷೋಣೀಪ್ರಮಾಣೇನ ಅತುಲಾತ್ಪ್ರಭೃತಿ ಕ್ಷಮಃ ॥ ೧೮ ॥

---

೧೪-೧೬. ಆ ಪ್ರದೇಶವನ್ನು ನಾನಾವಿಧವಾದ ಧ್ವಜಗಳಿಂದಲೂ, ಕಿರುಗೆಜ್ಜೆಗಳಿಂದಲೂ, ಛತ್ರಿ ಚಾಮರಾದಿಗಳಿಂದಲೂ ಅಲಂಕರಿಸಬೇಕು. ಅಲ್ಲಲ್ಲಿ ಕಮಲಗಳನ್ನೂ, ಬಾಳೆಕಂಬಗಳನ್ನೂ, ನವಿಲುಗರಿಗಳಿಂದ ನಿರ್ಮಿತವಾದ ಛತ್ರಿಯನ್ನೂ, ಮೇಲುಕಟ್ಟನ್ನೂ, ಕಟ್ಟಿ ಶೃಂಗರಿಸಬೇಕು. ಅನಂತರ ಯಾಗಭೂಮಿಯ ಸುತ್ತಲೂ, ನಾನಾರತ್ನಗಳಿಂದಲೂ, ಪುಷ್ಪಮಾಲೆಗಳ ತೋರಣಗಳಿಂದಲೂ, ಅಲಂಕಾರ ಮಾಡಬೇಕು. ಮತ್ತು ಅಲ್ಲಲ್ಲಿ ಗಂಟುಗಳಿಲ್ಲದ ನೀಳವಾದ ರೇಶ್ಮೆ ಅಥವಾ ಹತ್ತಿಯ ಅಥವಾ ಉಣ್ಣೆಯ ದಾರವನ್ನು ತ್ರಿರಾವೃತ್ತಿ ಆ ಮಂಟಪದ ಸುತ್ತಲೂ ಕಟ್ಟಬೇಕು.

೧೭-೧೮. ಅನಂತರ ಮಂಡಲಕ್ಕೆ ಸುತ್ತಲೂ ದಿಗ್ವ್ಯವಸ್ಥೆಮಾಡಬೇಕು. ಪೂರ್ವದಿಕ್ಕಿನಲ್ಲಿ ಸೂರ್ಯದೇವನು ಸಾವಿತ್ರೀ ಶಬ್ದವಾಚ್ಯನಾಗಿರುವನು. ಆ ಪೂರ್ವದಿಂದ ಉತ್ತರಕ್ಕೆ ೯೦ ಅಂಶದಲ್ಲಿ ಉತ್ತರ ಧ್ರುವಸ್ಥಾನವನ್ನು ಒಳಗೊಂಡು, ಉತ್ತರ ದಿಕ್ಕನ್ನೂ ಆದರಿಂದ ಪಶ್ಚಿಮ ಮತ್ತು ದಕ್ಷಿಣ ದಿಕ್ಕುಗಳನ್ನು ಸಾಧಿಸಬೇಕು. ಆ ಚತುರ್ದಿಕ್ಕುಗಳ ಮಧ್ಯದಲ್ಲಿ ಒಂದು ವಿವಿಧವಾದ ಅಳತೆಯಿಂದ ಭೂಪ್ರಮಾಣ ಸದೃಶವಾಗಿರುವ ಒಂದು ಕಮಲದ ಕರ್ಣಿಕೆಯನ್ನು ಬರೆಯಬೇಕು.

ಕರ್ಣಿಕಾಂ ಸೂತ್ರಯೇನ್ಮಧ್ಯೇ ಕಮಲಸ್ಯ ರವೇಃ ಶುಭಾಂ ।
ಕೇಸರಂ ಕರ್ಣಿಕಾತುಲ್ಯಂ ತಸ್ಮಾಚ್ಚ ದ್ವಿಗುಣಂ ದಲಂ ॥ ೧೯ ॥

ಮಂಡಲಂ ವೃತ್ತಪತ್ರಾಗ್ರಂ ತಚ್ಛಿಷ್ಟಾಬ್ಜಪುರಸ್ಥಿತಂ ।
ಷಡ್ವಿಂಶತಿಬೀಜಪತ್ರಂ ಚತುರ್ವಿಂಶತಿಕೇಸರಂ ॥ ೨೦ ॥

ಕಲ್ಪಿತಂ ಚ ಸಿತಾಂಭೋಜಂ ಚತುಃಶೃಂಗಂ ಶಿಖೋಜ್ಜ್ವಲಂ ।
ತತೋಽಪಿ ಬಾಹ್ಯಮಪರಂ ಚತುರಸ್ರಂ ತು ಸೂತ್ರಯೇತ್ ॥ ೨೧ ॥

ಚತುರ್ಗ್ರೀವಂ ವಿದಿಕ್ಕೋಣಂ ರಥಸ್ಯಾವಯವಂ ಶುಭಂ ।
ಪುರಾವರಣಮಧ್ಯೇ ತು ಅರುಣಂ ಕಂದರಾವೃತಂ ॥ ೨೨ ॥

ತತ್ಪರ್ಯಂತಂ ವಿನಿಷ್ಕ್ರಾಂತೇ ದ್ವೇ ದ್ವೇ ರೇಖೇ ತದರ್ಧಿಕೇ ।
ಪುನಸ್ತಿರ್ಯಗ್ಗತೇಗ್ರೇತು ಸ್ವನಿಷ್ಕಾಂತಪ್ರಮಾಣತಃ ॥ ೨೩ ॥

---

೧೯-೨೦. ಆ ಕರ್ಣಿಕೆಯ ಸುತ್ತಲೂ ಅದೇ ಪ್ರಮಾಣದಲ್ಲಿ ಕೇಸರಗಳನ್ನೂ, ಅದರ ಎರಡರಷ್ಟು ಪ್ರಮಾಣದಲ್ಲಿ ದಳವನ್ನೂ, ಸುತ್ತಲೂ ಮಂಡಲಾಕಾರವಾಗಿ ರಚಿಸಬೇಕು. ಇನ್ನು ಉಳಿದ ಭಾಗಗಳನ್ನೆಲ್ಲಾ ಕಮಲದ ಆಕಾರದಂತೆ ಪೂರ್ತಿಗೊಳಿಸಬೇಕು. ಆ ಕಮಲದ ಎಸಳುಗಳು ೨೬. ಕೇಸರಗಳು ೨೪ ಇರಬೇಕು. ಅದರಲ್ಲಿಯೇ ಬೀಜ ಮಂತ್ರಗಳನ್ನು ಬರೆಯುವಂತಿರಬೇಕು.

೨೧-೨೨. ಅಲ್ಲಿಯೇ ಬಿಳಿಯ ಕಮಲವೊಂದನ್ನು ರಚಿಸಿ, ಅದಕ್ಕೆ ಚತುಃಶೃಂಗಗಳನ್ನೂ ಶಿಖೆಯನ್ನೂ ನಿರ್ಮಿಸಬೇಕು. ಅದಕ್ಕೂ ಸುತ್ತಲೂ ಚತುಷ್ಕೋಣದ ರೀತಿಯಿಂದ ದಾರವನ್ನು ಕಟ್ಟಬೇಕು. ಅದಕ್ಕೆ ದಿಕ್ಕು, ವಿದಿಕ್ಕುಗಳನ್ನು ಗುರುತಿಸಿ, ಸೂರ್ಯ ರಥದ ಎಲ್ಲಾ ಅವಯವಗಳನ್ನೂ ಗುರ್ತಿಸಬೇಕು.

೨೩-೨೪. ಆ ಕಮಲದ ಎರಡು ಭಾಗದಲ್ಲಿಯೂ ದಕ್ಷಿಣೋತ್ತರವಾಗಿ ಎರಡು ರೇಖೆಗಳನ್ನು ಬರೆಯಬೇಕು. ಅನಂತರ ಅವುಗಳಮೇಲೆ ಪೂರ್ವಾಪರವಾಗಿ ಮಧ್ಯ

ಪುನಸ್ತಾವಚ್ಚ ನಿಷ್ಕ್ರಮ್ಯ ವಿಲಗ್ನಮುಭಯೋ ತು ತೇ ।
ಪದ್ಮಗರ್ಭಾದ್ವಿನಿಷ್ಕ್ರಾಂತಾಂ ವಾರುಣ್ಯಾಂ ಮಕರಾನನಾಂ ॥ ೨೪ ॥

ಯಷ್ಟಿಂ ಪದ್ಮಾಯತಾಂ ಕುರ್ಯಾದ್ರಥಸ್ಯ ಕರ್ಣಿಕಾಮಿತಾಂ ।
ಯಷ್ಟ್ಯಗ್ರೇ ಸಪ್ತಸಂಲಗ್ನಾನ್ ವಾಜಿನಃ ಪಾರ್ಶ್ವಯೋರ್ದ್ವಯೋಃ॥ ೨೫ ॥

ತದಧಸ್ತಾವತೀಯಷ್ಟೇ ಮೂರ್ಲಾದೂರ್ಧ್ವಸ್ಸ್ಥಿತೋಽರುಣಃ ।
ಕ್ಷೋಣೀ ಚ ಪೀಠಮಿತ್ಯುಕ್ತಾ ತಥಾಂತಶ್ಶೇಷಪನ್ನಗಾಃ ॥ ೨೬

ಕರ್ಣಿಕಾ ತೇಜಸಃ ಪಿಂಡೌ ಭೂತಾದ್ಯಾ ಬೀಜಸಂಜ್ಞಿತಾಃ ।
ಖಪರಂ ಕರ್ಣಿಕಾವ್ಯೋಮವಾರಂ ಪತ್ರಂ ಸಕೇಸರಂ ॥ ೨೭ ॥

---

ಭಾಗದಲ್ಲಿ ಎರಡು ರೇಖೆಗಳನ್ನು ನಿರ್ಮಿಸಬೇಕು. ಆಗ ಉಂಟಾಗುವ ರೇಖಾ ಮೂಲಗಳನ್ನು ಮಧ್ಯಭಾಗದಲ್ಲಿ ಪದ್ಮವು ಬರುವಂತೆ ಪರಸ್ಪರವಾಗಿ ಸಂಬಂಧವನ್ನು ಕಲ್ಪಿಸಬೇಕು. ಪಶ್ಚಿಮ ಭಾಗದಲ್ಲಿ ಪದ್ಮಕ್ಕೆ ಸಂಬಂಧಿಸಿದಂತೆ ಒಂದು ಮಕರಾ ಕಾರವನ್ನು ನಿರ್ಮಿಸಬೇಕು.

೨೫-೨೬. ಪದ್ಮದ ಆಳತೆಯಷ್ಟೇ ಮುಂದಕ್ಕೆ ಒಂದು ಯಷ್ಟಿಯನ್ನು (ಗೂಟ) ಬರೆಯಬೇಕು. ಅದರ ತುದಿಭಾಗದಲ್ಲಿ ಏಳುಕುದುರೆಗಳನ್ನೂ ಆ ಕುದುರೆಗಳ ಪಕ್ಕಗಳಲ್ಲಿ ಮತ್ತೆ ಅದೇ ತರಹ ಯಷ್ಟಿಗಳನ್ನೂ ರಚಿಸಬೇಕು. ಅಲ್ಲಿ ಮಧ್ಯವರ್ತಿ ಯಾಗಿರುವ ಕ್ಷೋಣೀಪ್ರಮಾಣವೇ ಪೀಠವಾಗುವುದು. ಉಳಿದ ಕರ್ಣಿಕಾ ಸದೃಶವಾದ ರೇಖೆಗಳೇ ಪನ್ನಗಗಳೆನಿಸುವುವು. ಅವುಗಳ ಮುಂಭಾಗವೇ ಅರುಣ ಸ್ಥಾನವೆಂದು ಎಣಿಸಬೇಕು.

೨೭-೨೮. ಆ ಕರ್ಣಿಕೆಯೇ ತೇಜಃ ಪಿಂಡ. ಭೂತಾದಿಗಳೇ ಬೀಜಾಕ್ಷರಗಳು. ಕರ್ಣಿಕೆಯ ಮೇಲ್ಭಾಗವೇ ಖಪರವಾದ (ಖಖೋಲ್ಕಬೀಜಮಂತ್ರ) ದೇವತೆ. ಕೇಸರ

ಪತ್ರಾಗ್ರಂ ಮಂಡಲಂ ಹಸ್ತಿರಂತರ್ವ್ಯೋಮಸ್ಥಿತಂ ಪುರೇ ।
ಬಾಹ್ಯಾಕಾಶಂ ಚ ತಂ ವಿದ್ಧಿ ಯಷ್ಟಿರ್ಧರ್ಮಾರ್ಥಸಂಜ್ಞಿತಂ ॥ ೨೮ ॥

ರಥಸ್ಸಂವತ್ಸರೋ ಜ್ಞೇಯಃ ಪಿತರಸ್ತು ಋತವಸ್ಸ್ಮೃತಾಃ ।
ನೇತ್ರಂ ಪತ್ರಸ್ಯ ಮೂಲೇ ವೈ ದೋಷಾಶ್ಛಂದಾಂಸಿ ಶಂಕವಃ ॥ ೨೯ ॥

ಸುಷುಮ್ನಾದ್ಯಾಸ್ತು ಯಾ ನಾಡ್ಯಃ ಸಹಸ್ರಂ ರವಿವಿಗ್ರಹೇ ।
ಅತ ಊರ್ಧ್ವಂ ವಿದಿಕ್ಷುಸ್ಯಾತ್ಪ್ರೀತಂ ತಸ್ಯ ಶತಂ ಶತಂ ॥ ೩೦ ॥

ಯೋಜನಾಯುತವಿಸ್ತೀರ್ಣಮುಚ್ಛ್ರಿತಂ ತತ್ಪ್ರಮಾಣತಃ ।
ಅರುಣೋ ಘೃಣಯಃ ಪ್ರೋಕ್ತಾ ಬಾಹ್ಯಚ್ಛಂದಾಂಸಿ ವಾಜಿನಃ ॥ ೩೧ ॥

---

ಸಹಿತವಾದ ಪತ್ರಗಳೇ ಸಪ್ತಾಶ್ವಗಳು. ಪತ್ರಾಗ್ರವೇ ರವಿಮಂಡಲ. ವ್ಯೋಮಸ್ಥಿತವಾದದ್ದೇ ಪುರವು. ಅದನ್ನೇ ಬಾಹ್ಯಾಕಾಶವೆನ್ನಬಹುದು. ಧರ್ಮಾರ್ಥಸಂಜ್ಞವಾದದ್ದೇ ಯಷ್ಟಿ.

೨೯-೩೦. ಆ ರಥವೇ ಸಂವತ್ಸರವೆಂದೂ, ಅಲ್ಲಿರುವ ಪಿತೃದೇವತೆಗಳೇ ಋತುವೆಂದೂ, ಪತ್ರಮೂಲವೇ ನೇತ್ರವೆಂದೂ, ಯಷ್ಟಿಯೇ ವೇದಗಳೆಂದೂ, ಶಂಕುಗಳೇ ಸೂರ್ಯದೇವನ ಸುಷುಮ್ನಾದಿ ನಾಡಿಗಳೆಂದೂ ತಿಳಿಯಬೇಕು. ಅಲ್ಲಿಂದ ಮುಂದೆ ಕಂಡುಬರುವ ದಿಕ್ಕುವಿದಿಕ್ಕುಗಳೇ ಸೂರ್ಯಕಿರಣಪ್ರಸರಕ್ಕೆ ಅವಕಾಶಕೊಟ್ಟವುಗಳೆಂದೂ ಭಾವಿಸಬೇಕು.

೩೧-೩೨. ಸೂರ್ಯದೇವನ ಕಿರಣಗಳ ವ್ಯಾಪ್ತಿ ಹತ್ತುಸಹಸ್ರಯೋಜನ ಊರ್ಧ್ವಭಾಗದವರೆಗೂ ವ್ಯಾಪಿಸುವುದು. ಅರುಣನೂ ಸಹ ಸೂರ್ಯಕಿರಣ ರೂಪಿಯೇ, ವೇದಗಳೆಂದು ಪ್ರಸಿದ್ಧವಾಗಿರುವುವುಗಳೆಲ್ಲವೂ ಕುದುರೆಗಳು. ಅವನಿಗೆ ಪಂಚ ಋತು

ಪಂಚಶರ್ಗವಾರ್ಗಸುಕಿಃ ಪ್ರೋಕ್ತೈಶ್ಚಕ್ರೇಶೋಽಸ್ಯ ಭುವಸ್ತ್ರಯಃ ।
ಏವಂ ಸರ್ವಮಯಂ ಪ್ರೋಕ್ತಂ ರಥಶ್ರೇಷ್ಠಂ ವಿಭಾವಸೋಃ ॥ ೩೨ ॥

ದರ್ಭೈಶ್ಚ ಕುಸುಮೈರ್ವಾಪಿ ಲಿಖೇದೇತತ್ಸಮಾಹಿತಃ ।
ಸಂಚಿಂತ್ಯ ಮನಸಾ ವಾಪಿ ಪೂರ್ವೋದ್ದಿಷ್ಟಂ ವಿಧಾನತಃ ॥ ೩೩ ॥

ಪೂಜಯೇತ್ಪರಮಂ ದೇವಂ ಖಖೋಲ್ಕಮಿತಿ ವಿಶ್ರುತಂ ।
ನಿತ್ಯಮೇಕವಿಧಿರ್ಜ್ಞೇಯಃ ಪರೋ ನೈಮಿತ್ತಿಕಸ್ಸ್ಮೃತಃ ॥ ೩೪ ॥

ತೇಜೋದಾನಾದಿದೀಕ್ಷಾಸು ಭುವನಸ್ಥಾಪಿತರ್ಪಣೇ ।
ರಥೇ ಚಾಸ್ಮಿನ್ ಮಹಾಯೋಗಾ ಬಾಹ್ಯಾ ವಾ ಚಾರಣಾವುಭೌ ॥ ೩೫ ॥

---

ಗಳೆಂದು ಪ್ರಸಿದ್ಧವಾದವುಗಳೇ ಆದಿಶೇಷನು. ಹೀಗೆ ತ್ರಿಲೋಕಾಧಿಪತಿಯಾದ ಸೂರ್ಯ ದೇವನಿಗೆ ತ್ರಿಲೋಕದಲ್ಲಿಯೂ ಪೂಜ್ಯವಸ್ತುಗಳೆಂದು ಪ್ರಸಿದ್ಧಿಗೊಂಡಿರತಕ್ಕುವುಗಳೇ ರಥ ರೂಪವಾಗಿ ಪರಿಣತವಾಗಿವೆ.

ಹೇಮಂತ ಶಿಶಿರಗಳು ಒಂದು ಋತು. 'ಹೀಗೆ ಪಂಚಋತುಗಳೆಂದು ಹೇಳುವ ಪಕ್ಷವನ್ನನುಸರಿಸಬೇಕು.

೩೩-೩೪. ಇಲ್ಲಿನವರೆಗೆ ಹೇಳಿದ ಕ್ರಮವನ್ನು ಮನಸ್ಸಿನಲ್ಲಿ ಅನುಸಂಧಾನ ಮಾಡುತ್ತಾ ದರ್ಭೆಯಿಂದಾಗಲಿ, ಹೂವಿನಿಂದಾಗಲಿ ಮಂಡಲವನ್ನು ಬರೆಯಬಹುದು. ಅಲ್ಲಿ ಖಖೋಲ್ಕರೂಪಿಯಾದ ಮಹಾಸೂರ್ಯದೇವನನ್ನು ನಿತ್ಯದಲ್ಲಿಯೂ ಆರಾಧಿಸಬೇಕು. ಇದು ನಿತ್ಯಪೂಜಾವಿಧಿ. ಇನ್ನು ನೈಮಿತ್ತಿಕವಾಗಿ ಮಾಡುವ ಪೂಜಾವಿಧಿಯು ಬೇರೆಯಾಗಿರುವುದು. ಇಲ್ಲಿ ಮಾತ್ರ ಸೂರ್ಯಾರಾಧಕನಿಗೆ ಕಮಲದ ಆಕಾರದ ಮಂಡಲವೇ ವಿಹಿತವಾದಂತಿದೆ.

೩೫-೩೬. ತೇಜಸ್ಸ್ವಾಮಿಯಾಗಿಯೂ, ಲೋಕೋಪಕಾರಕ್ಕಾಗಿಯೂ ವ್ರತ ಮಾಡುವ ಸಂದರ್ಭದಲ್ಲಿ ಈ ರಥ ನಿರ್ಮಾಣದಲ್ಲಿ ವಿಶೇಷವಿಧಿಯುಂಟು. ಆಗ

ರಥಕಂಧರವೀಥ್ಯಾಸ್ತು ತದರ್ಧಗುಣಸಂಯುತಾ ।
ವೀಥೀ ಕಾರ್ಯಾ ಪ್ರಮಾಣೇನ ದ್ವಿಗುಣಾ ಚಾಪರಾ ಬಹಿಃ ॥ ೩೬ ॥

ಸಾ ತೂದ್ದಿಷ್ಟಗುಣಾ ಗ್ರೀವಾ ಚಾರುಣಾ ಪರ್ಗತುಲ್ಯಯಾ ।
ಅಲಗ್ನಾ ಬಾಹ್ಯತಃ ಕಾರ್ಯಾ ಯಾಮ್ಯಾ ದಿಶಿ ಸದಾ ಸುರಾಃ ॥ ೩೭ ॥

ದ್ವಾರಮೇತದ್ವಿನಿರ್ದಿಷ್ಟಂ ಭಿನ್ನಮಂಬುಜವೇಶ್ಮನಿ ।
ರಥಸ್ಯಬಾಹ್ಯವೀಥ್ಯಾ ದ್ವೇ ತಸ್ಯ ದೀಪ್ತಿಃ ಪ್ರಕೀರ್ತಿತಾ ॥ ೩೮ ॥

ಗ್ರಹದಿಗ್ದೇವತಾ ಭಾನೋಸ್ತತ್ರಸ್ತ್ಯಾ ಗುಣಕಂದರಾ ।
ದ್ವಾರಪಶ್ಚಿಮತೋ ಮೋಕ್ಷಂ ಯೇನ ಶಿಷ್ಯಾನ್ ಪ್ರವೇಶಯೇತ್ ॥ ೩೯ ॥

---

ರಥಕ್ಕೆ ಕಂಧರ (ಮೂಕಿ) ವೀಥೀ (ರಸ್ತೆ) ಇವುಗಳನ್ನು ರಥದ ಅರ್ಧ, ತದರ್ಧ ಪ್ರಮಾಣದಲ್ಲಿಯೂ ಮತ್ತು ದ್ವಿಗುಣ ಪ್ರಮಾಣದಲ್ಲಿಯೇ ರಚಿಸಬೇಕಾಗುವುದು.

೩೭-೩೮. ಆ ವಿಥಿಯ ಪ್ರಮಾಣದಷ್ಟೇ ಹಗ್ಗದ ಪ್ರಮಾಣವನ್ನೂ ಇಡಬೇಕು. ಆ ಗುಣ (ಹಗ್ಗ) ವಾದರೋ ಅರುಣಪರ್ಯಂತವಾಗಿ ವಾಜಿಗ್ರೀವದವರೆಗೆ ಕೆಂಪು ಬಣ್ಣದಿಂದ ನಿರ್ಮಿತವಾಗಿರಬೇಕು. ದಕ್ಷಿಣಭಾಗದ ಗುಣವು-ಮಾತ್ರ ಅರುಣನಿಗೆ ಸಂಬಂಧಪಡದಂತೆಯೇ ತೋರಬೇಕು. ವರುಣದಿಕ್ಕಾದ ಪಶ್ಚಿಮದಲ್ಲಿ ಈ ರಥಕ್ಕೆ ಒಂದು ದ್ವಾರವನ್ನು ಕಲ್ಪಿಸಬೇಕು. ಸೂರ್ಯರಥಮಾರ್ಗದ ಪಾರ್ಶ್ವವನ್ನು ಎರಡಾಗಿ ಕಲ್ಪಿಸಿ ಅದು ಸರ್ವದಾ ಹೊಳೆಯುವಂತೆ ಬರೆಯಬೇಕು.

೩೯-೪೦. ಆ ರಥದಲ್ಲಿರುವ ಗುಣ (ಹಗ್ಗ) ಗಳಲ್ಲಿ ಸಕಲಗ್ರಹಗಳಿಗೂ, ದಿಗ್ದೇವತೆಗಳೂ ಅಡಗಿದ್ದು, ಪಶ್ಚಿಮದಿಕ್ಕಿನ ದ್ವಾರದಲ್ಲಿ ಮೋಕ್ಷವನ್ನು ಹೊಂದುವರು. ಅದರಂತೆ ಈ ಪೂಜಾಂತ್ಯದಲ್ಲಿ ಆಚಾರ್ಯನು ಶಿಷ್ಯನನ್ನೂ ಪಶ್ಚಿಮದ್ವಾರದ ಮೂಲಕ

ಏವಂ ನಿಖಿಲಉದ್ದಿಷ್ಟಃ ಸೂತ್ರಪಾತವಿಧಿಕ್ರಮಃ ।
ಅನೇನ ಸಮ್ಯಗ್ಜ್ಞಾನೇನ ಪ್ರಾಪ್ನೋತಿ ಪರಮಾಂ ಗತಿಂ ॥ ೪೦ ॥

ಆದ್ಯಾಕ್ಷರೇಣ ಯೇನ ಸ್ಯಾದ್ದೇ ಚ ಲೇಖ್ಯಾಃ ಸವಿಗ್ರಹಾಃ ।
ಯಾದೃಶ್ಯಶ್ವರಜಃ ಪಾತೇ ವಿಧಿಂ ತತ್ಕಥಯಾಮ್ಯಹಂ ॥ ೪೧ ॥

ಮಣಿಮುಕ್ತಾಪ್ರವಾಲೋತ್ಥೈರ್ವ್ರೀಹಿ ಧಾತುಸಮುದ್ಭವೈಃ ।
ಚೂರ್ಣೈರಗ್ನೀಂದ್ರಮರುದ್ವರ್ಣೈರಥಂ ವಾ ಚಾನುಪೂರ್ವತಃ ॥ ೪೨ ॥

ಅಸಂಸಕ್ತಮಿದಂ ಕುರ್ಯಾದಸ್ಥೂಲಾಮಕೃಶಾಂ ತಥಾ ।
ಅವಿಕ್ಷೀಣಾಂ ರಜೋರೇಖಾಂ ದೇಶಿಕಾಂಗುಷ್ಠಯೋಜಿತಾಂ ॥ ೪೩ ॥

---

ಮುಂದೆ ಹೋಗುವಂತೆ ಮಾಡಬೇಕು. ಇದನ್ನೇ ಸೂತ್ರಪಾತ ಕ್ರಮವೆನ್ನುವರು. ಇದನ್ನು ಸಂಪೂರ್ಣವಾಗಿ ತಿಳಿದವನು ಮೋಕ್ಷಮಾರ್ಗವನ್ನು ಸುಲಭವಾಗಿ ಅವಲಂಬಿಸುವನು.

೪೧-೪೨. ಅಲ್ಲಿ ಬರೆಯುವ ದೇವತಾ ವಿಗ್ರಹಗಳನ್ನೆಲ್ಲಾ ಆದ್ಯಾಕ್ಷರದಿಂದ ಅವುಗಳ ಹೆಸರುಗಳನ್ನು ಗುರ್ತಿಸಬೇಕು. ಆ ದೇವತೆಗಳ ನಿರ್ಮಾಣಕ್ಕೆ ರತ್ನ, ಮುತ್ತು, ಹವಳ, ಧಾನ್ಯ ಅಥವಾ ಗೈರಿಕಾದಿ ಧಾತುಗಳು ಇವುಗಳ ಪುಡಿಯಿಂದ ಅಗ್ನಿ, ಇಂದ್ರ, ಇತರ ದೇವತೆಗಳ ವರ್ಣ, ಇವುಗಳನ್ನನುಸರಿಸಿ, ಆಯಾ ಬಣ್ಣದ ಚೂರ್ಣಗಳಿಂದ ನಿರ್ಮಾಣಮಾಡಬೇಕು.

೪೩-೪೪. ಈ ವಿಗ್ರಹಗಳು ಒಂದಕ್ಕೊಂದು ಸೇರದಂತೆಯೂ, ಅತಿ ದಪ್ಪವಾಗಿಯೂ, ಅತಿ ಕೃಶವಾಗಿಯೂ ಇಲ್ಲದಂತೆ ರಚಿಸಬೇಕು. ರೇಖೆಯಾದರೋ ಆಚಾರ್ಯನ ಬೆರಳಿನಿಂದ ಮುಂದುವರಿಯುತ್ತಾ ಸ್ಪಷ್ಟವಾಗಿ ಕಾಣುವಂತಿರಬೇಕು. ಮಾಸಪ್ರಮಾಣವನ್ನಾಗಲಿ, ಅದರ ಹೆಸರನ್ನಾಗಲೀ ಪ್ರತ್ಯೇಕವಾಗಿ ಬರೆಯಬೇಕಾಗಿಲ್ಲ. ಆ ರೇಖೆ

ನ ಚ ಮಾಸಪ್ರಮಾಣಾ ತು ರೇಖಾ ಮಾನವಶಾದ್ಭವೇತ್ ।
ವಲಿತಾ ಚಾಪರಾ ವ್ಯೃಷ್ಟ್ಯಾ ದೀನಾ ಶುಕ್ಲಾ ತತಃ ಕ್ರಮಾತ್ ॥ ೪೪ ॥

ಪದ್ಮಗರ್ಭಸ್ಯ ನವಮೋ ಯೋಗಃ ಸ ಪರಿಕೀರ್ತಿತಃ ।
ತಸ್ಯಾಪಿ ನವಮೀ ಯಾಮ್ಯಾಂ ತಯೋರ್ಮಧ್ಯೇ ತು ತತ್ಸ್ಮೃತಃ ॥ ೪೫ ॥

ಲಿಖೇದ್ಭೂತಾದಿತಃ ಪದ್ಮಂ ಭೌತಿಕೇ ಪದ್ಮಸಂಪ್ರಭಂ ।
ಉದಿತಾರ್ಕಸಮಾನಂ ತು ನೈಷ್ಠಿಕೇ ಕರ್ಮಣಿ ಸ್ಥಿತಂ ॥ ೪೬ ॥

ಪೀತಾಂ ತು ಕರ್ಣಿಕಾಂ ತತ್ರ ಕಿಂಜಲ್ಕಹರಿತಂ ಲಿಖೇತ್ ।
ಕೇಸರಾಣ್ಯರುಣಾನ್ಯಂತಃ ಶುಕ್ಲಾನ್ಯಾ ದಂತಪತ್ರಯೋಃ ॥ ೪೭ ॥

---

ಯಿಂದಲೇ ಮಾಸವನ್ನು ಊಹಿಸುವಂತಿರಬೇಕು. ರೇಖೆಯು ಸ್ವಲ್ಪ ವಕ್ರವಾಗಿಯೂ ಸ್ವಲ್ಪ ದುಂಡಾಗಿಯೂ ಶುಕ್ಲವರ್ಣ ವಿಶಿಷ್ಟವಾಗಿಯೂ ಇರಬೇಕು.

೪೫-೪೬. ಹಿಂದೆ ಹೇಳಿದ ಮಾಸರೇಖೆಗಳಲ್ಲಿ ಒಂಬತ್ತನೆಯ ಮಾಸ ರೇಖೆಯು ಪದ್ಮದ ಮಧ್ಯಭಾಗದಲ್ಲಿ ಹಾದುಹೋಗುವಂತಿರಬೇಕು. ದಕ್ಷಿಣಭಾಗದಲ್ಲಿಯೂ ಮತ್ತೊಂದು ರೇಖೆಯು ಬಂದು, ಪದ್ಮವು ರೇಖಾದ್ವಯ ಮಧ್ಯಗತವಾಗಿರಬೇಕು.

ಪಂಚಭೂತಾದಿಗಳ ವಿಕಾರದಿಂದ ಹುಟ್ಟಿದ ವರ್ಣಗಳಿಂದ ಒಂದು ಪದ್ಮದ ಆಕಾರವನ್ನು ಬರೆಯಬೇಕು. ಅದೇ ಪದ್ಮದಲ್ಲಿ ಗೈರಿಕಾದಿ ಧಾತುವರ್ಣದಿಂದ ಸೂರ್ಯ ದೇವನನ್ನು ನಿರ್ಮಿಸಬೇಕು. ನಿಷ್ಠಾಪೂರ್ವಕವಾದ ಕರ್ಮಗಳಲ್ಲಿ ಕೇವಲ ತೇಜೋ ರೂಪದಿಂದ ಉದಯಕಾಲಿಕನಾದ ಸೂರ್ಯನ ವರ್ಣದಿಂದಲೇ ಸೂರ್ಯಾಕಾರವನ್ನು ನಿರ್ಮಿಸಬೇಕು.

೪೭-೪೮. ಪದ್ಮಕರ್ಣಿಕೆಯನ್ನು ಹಳದಿಯ ವರ್ಣದಲ್ಲಿಯೂ, ಅದರಲ್ಲಿರುವ ಪರಾಗಗಳನ್ನು ಹಸುರು ಬಣ್ಣದಲ್ಲಿಯೂ, ಕೇಸರಗಳನ್ನು ಕೆಂಪು ಬಣ್ಣದಲ್ಲಿಯೂ, ಎಲೆಗಳನ್ನು ಬಿಳಿಯ ಬಣ್ಣದಿಂದಲೂ, ಸೂರ್ಯನ ನಗರವನ್ನು ಹಳದಿಯಿಂದಲೂ,

ಪೀಠಾಮರ್ಕಪುರಂ ಶೋಣಂ ಅಸ್ತ್ರಂ ಪದ್ಮಾಗ್ರಸಂಧಿಷು ।
ಪ್ರತಿದಿಗ್ದೇವತಾಸ್ತ್ರಾಣಿ ಸ್ವೀಕೃತ್ಯ ಹರಿತಾನ್ ಹಯಾನ್ ॥ ೪೮ ॥

ಸಂಧ್ಯಾರುಣಸಮಂ ವ್ಯೋಮ ಕಂದರಾಂ ಕನಕಪ್ರಭಾಂ
ಸಿತಪೀತಾರುಣೈರ್ವರ್ಣೈರ್ಯಷ್ಟಿರ್ಲೇಖಾಸು ನಾನತಃ ॥ ೪೯ ॥

ಚತುರ್ಭಿರ್ವರ್ಣಕೈರ್ಲೇಖ್ಯಂ ಸರ್ವಮಾವರಣಾದಿಕಂ ।
ಚತುರ್ಭಿರ್ವರ್ಣಕೈರೇವ ಚಾರಾಲಾನ್ ಪೂರಯೇತ್ತಥಾ ॥ ೫೦ ॥

ಉಕ್ತಾ ದೇವಾದಯೋ ಯೇಷು ಪೂರ್ವಸ್ಥಾನೇಷು ತತ್ರ ವೈ ।
ಸ್ವನಾಭ್ಯಂಭ್ಯಂತರೇ ತೇಷಾಂ ಲಿಖಿತಂ ಲೇಖನಂ ಭವೇತ್ ॥ ೫೧ ॥

ಏವಂ ಮಂಡಲಮಾಲೇಖ್ಯ ಭೂಯಃ ಸ್ನಾತ್ವಾ ಸಮಾಹಿತಃ ।
ಶಸ್ಯತೇ ಹರಿತಾ ಹೃದ್ಯಾ ಸರ್ವೇಷು ರವಿಕರ್ಮಸು ॥ ೫೨ ॥

---

ಅಸ್ತ್ರಗಳನ್ನೂ, ಪದ್ಮಾಗ್ರಸಂಧಿಗಳನ್ನೂ, ಮಾಸಲು ಕೆಂಪುಬಣ್ಣದಲ್ಲಿಯೂ, ದಿಗ್ದೇವತಾಸ್ತ್ರಗಳನ್ನೂ, ಆಯಾ ದೇವತೆಗಳ ವರ್ಣದಿಂದಲೂ, ಕುದುರೆಗಳನ್ನು, ಹಸುರು ಬಣ್ಣದಿಂದಲೂ ನಿರ್ಮಿಸಬೇಕು.

೪೯–೫೦. ವ್ಯೋಮ ಮಂತ್ರಾಕ್ಷರವನ್ನು ಸಂಧ್ಯಾಕಾಲದ ಕೆಂಪಿನಂತಹ ಮಾಸಲು ಕೆಂಪಿನಿಂದಲೂ, ಪದ್ಮದ ತಳಭಾಗವನ್ನು ಚಿನ್ನದ ವರ್ಣದಿಂದಲೂ, ಕಮಲದ ಯಷ್ಟಿಯನ್ನು ಬಿಳುಪು, ಹಳದಿ, ಕೆಂಪು ಮೊದಲಾದ ವರ್ಣಗಳಿಂದಲೂ ಅಲಂಕರಿಸಬೇಕು. ಆವರಣಾದಿಗಳನ್ನು ಮಾತ್ರ ನಾಲ್ಕು ವರ್ಣಗಳಿಂದಲೂ ತುಂಬಿರುವಂತೆ ರಚಿಸಬೇಕು.

೫೧–೫೨. ಮಂಡಲದ ಮಧ್ಯಭಾಗದಲ್ಲಿ ಹಿಂದೆ ಹೇಳಲ್ಪಟ್ಟ ಸಕಲದೇವತೆಗಳನ್ನೂ ಪೂರ್ವಸ್ಥಾನಗಳಲ್ಲಿ, ಕಮಲದ ನಾಭಿಭಾಗದಲ್ಲಿ ಆಯಾ ವರ್ಣಗಳಿಂದಲೇ ಬರೆಯಬೇಕು. ಹೀಗೆ ಮಂಡಲವನ್ನು ರಚಿಸಿ, ಅನಂತರ ಮತ್ತೆ ಸ್ನಾನಮಾಡಬೇಕು. ಸೂರ್ಯಪ್ರಾರ್ಥನಾದಿ ಸಕಲ ಕರ್ಮಗಳಲ್ಲಿಯೂ ಮಂಡಲ ನಿರ್ಮಾಣದಲ್ಲಿ ಹರಿದ್ವರ್ಣವೇ ಶ್ರೇಷ್ಠವಾದದ್ದು ಎಂದು ಭಾವಿಸಬೇಕು.

ಅಗ್ನಿಗರ್ಭೇಷ್ವಥೋಷು ನ್ಯಸ್ತಾಗುದಕ್ಕೂಲಕಾನ್ ಕುಶಾನ್ ।
ನ್ಯಸೇತ್ಸಮಂತಾತ್ಸರ್ವೇಷು ಹ್ಯಗ್ನಿಕಾರ್ಯೇ ಚ ನೈತ್ಯಿಕೇ ॥ ೫೩ ॥

ವಿಶೇಷಾಂ ಪರಮಾಂ ಕಿಂಚಿತ್ಪೂಜಾಗ್ನಿ ಕ್ರಿಯಯೋರ್ಮಯಾ ।
ಕಥ್ಯಮಾನಂ ಸುರಾಸ್ಸರ್ವೇ ನಿಬೋಧತ ಮಹಾಫಲಂ ॥ ೫೪ ॥

ನದೀದ್ವಿಕೂಲಗೋಶೃಂಗಮೃತ್ಸ್ನಾ ಗೋಶೀರ್ಷಕಾನನಂ ।
ಶುಕ್ಲಂ ಸಭಸ್ಮದೂರ್ವಾಂತಿಕರ್ಣೇ ಸರ್ಷಪರೋಚನಾಃ ॥ ೫೫ ॥

ಕ್ರೋಡಕ್ರಾಂತಾಂ ನಿಶಾಂ ಮುಸ್ತಾಂ ಸರ್ವಾಸ್ತ್ವಷ್ಟಾಸು ದಿಕ್ಷ್ವಪಿ ।
ಚಂದನೋದಕಪೂರ್ವೇಷು ಚಂದನಸ್ಥಾಸಿಕೇಷು ಚ ॥ ೫೬ ॥

ಶಮ್ಯಾಭಿಪಲ್ಲವಾಕ್ಷೇಪಚಿರಾಂಜಿತಮುಖೇಷು ಚ ।
ಕಂಧರಾಬದ್ಧವಸ್ತ್ರೇಷು ಕಲಶೇಷು ವಿನಿಕ್ಷಿಪೇತ್ ॥ ೫೭ ॥

---

೫೩-೫೪. ನಿತ್ಯದಲ್ಲೂ ಅಗ್ನಿ ಮುಖದಿಂದ ಮಾಡುವ ಅಗ್ನಿ ಪೂಜೆಯಲ್ಲಿ ದರ್ಭೆಯನ್ನು ಪೂರ್ವ ಅಥವಾ ಉತ್ತರ ದಿಕ್ಕುಗಳಲ್ಲಿ ಅಗ್ರಗಳನ್ನಿಟ್ಟು ಹೋಮಾದಿಗಳನ್ನು ನಡೆಸಬೇಕು. ಅಗ್ನಿ ಪೂಜೆ ಮತ್ತು ಅಗ್ನಿಕಾರ್ಯ ಇವುಗಳಿಂದ ಸೂರ್ಯಪ್ರೀತ್ಯರ್ಥವಾಗಿ ನಡೆಸುವ ವಿಧಿಗಳನ್ನು ವಿಸ್ತಾರವಾಗಿ ಈಗ ಹೇಳುವೆನು ಕೇಳಿರಿ.

೫೫-೫೭. ನದಿಗಳ ದಡದಲ್ಲಿರುವ ಮೃತ್ತಿಕೆ, ಗೋಶೃಂಗ, ಗೋವಿನ ಶಿರೋಭಾಗದಲ್ಲಿರುವ ಮೃತ್ತಿಕೆ, ಶುಭ್ರವಾಗಿರುವ ಭಸ್ಮ, ಬಿಳಿಯ ದೂರ್ವೆ, ಅಂತಿಕರ್ಣೇ (ಕಣಿಗಲು) ಸಾಸುವೆ, ಗೋರೋಚನ, ಕ್ರೋಡ ಕ್ರಾಂತ (ಹಂದಿಯು ಅಗೆದಭೂಮಿ) ಭದ್ರಮುಸ್ತೆ, ಇವುಗಳನ್ನು ಕಲಶಗಳಲ್ಲಿ ಹಾಕಬೇಕು. ಆ ಮಂಡಲವನ್ನು ಗಂಧೋದಕಗಳಿಂದಲೂ ಚಂದನ ಸಾಮಗ್ರಿಗಳಿಂದಲೂ ಶಮೀ (ಬನ್ನೀ) ವೃಕ್ಷದ ತಳಿರು ಮುಂತಾದುವುಗಳಿಂದಲೂ ಕಲಶವನ್ನು ಅಲಂಕರಿಸಬೇಕು. ವಸ್ತ್ರಗಳನ್ನು ಕಲಶಗಳ ಕತ್ತಿಗೆ ಸುತ್ತಿರಬೇಕು.

**ಸಂವತ್ಸರಸ್ಯ ತಸ್ಯಾಪಿ ದಿಶ್ಯಾಗ್ನೇಯ್ಯಾಂ ತತಃ ಶುಭಂ ।**
**ಅಗ್ನಿಕುಂಡಂ ವಿದಿಕ್ಕೋಣೇ ತದಬ್ಜಪುರಸಂನಿಭಂ ॥ ೫೮ ॥**

**ಆರ್ಯಾದಿತೀರ್ಥಸಹಿತಂ ನಿಖಾತಂ ದ್ವಾದಶಾಂಗುಲಂ ।**
**ವಿಸ್ತೃತಾಷ್ಟಾಂಗುಲಂ ತೀರ್ಥಂ ಕುರ್ಯಾತ್ಪ್ರಾಕ್ಪ್ಲವಮುತ್ತಮಂ ॥ ೫೯ ॥**

**॥ ಆರ್ಯಾದಿಕತೀರ್ಥಂ ॥**

**ಕುಂಡಾದಷ್ಟಾಂಗುಲಂ ನ್ಯಸ್ಯ ಯಾಮ್ಯಾದರ್ಭಸಮೋನಕಂ ।**
**ವಿಜ್ಞಃ ಸಪ್ತಾಂಗುಲೈಶ್ಚೈವ ಪಾರಿಯಾತ್ರಮಥೋತ್ತರೇ ॥ ೬೦ ॥**

**ಯೈಸ್ಸಹೈವ ಖಖೋಲ್ಕಸ್ಯ ಪೂಜಾ ನಿಗದಿತಾ ಶುಭಾ ।**
**ವಹ್ನಿರೂಪಃ ಸ ತೈಃ ಸಾರ್ಧಂ ಧ್ಯೇಯಃ ಸ್ವಹೃದಯೇನ ತು ॥ ೬೧ ॥**

---

೫೮-೬೦ ಸಂವತ್ಸರ ವ್ರತದಲ್ಲಿ ನಡೆಸತಕ್ಕಂತಹ ಪೂಜಾಮಂಡಲದ ಆಗ್ನೇಯ ಭಾಗದಲ್ಲಿ ಅಬ್ಜಪುರ (ಕಮಲ) ದ ಆಕಾರದಲ್ಲಿ ಒಂದು ಅಗ್ನಿಕುಂಡವನ್ನು ಮಾಡಬೇಕು. ಅದನ್ನು ತೀರ್ಥೋದಕಾದಿಗಳಿಂದ ಪ್ರೋಕ್ಷಿಸಿ, ಭೂಶುದ್ಧಿಪೂರ್ವಕವಾಗಿ ಹನ್ನೆರಡು ಅಂಗುಲ ಆಳವಾಗಿ ತೋಡಬೇಕು. ಎಂಟಂಗುಲ ಅಗಲವಾಗಿರುವಂತೆ ಮಾಡಿ, ಕುಂಡದ ಮುಂಭಾಗವನ್ನು ಪೂರ್ವದಿಕ್ಕಿಗೆ ಬರುವಂತೆ ಮಾಡಬೇಕು. ಕುಂಡದಿಂದ ಎಂಟಂಗುಲ ದೂರದಲ್ಲಿ ದಕ್ಷಿಣದಿಗ್ಭಾಗದಲ್ಲಿ ದರ್ಭೆಗಳನ್ನು ಹರಡಿರಬೇಕು. ಉತ್ತರಭಾಗದಲ್ಲಿ ಪಾರಿಯಾತ್ರ ಪರ್ವತವೆಂಬ ಭಾವನೆಯಿಂದ ಏಳಂಗುಲ ದೂರದಲ್ಲಿ ದರ್ಭೆಯನ್ನು ಹಾಸಿರಬೇಕು.

೬೧-೬೨. ಹಿಂದೆ ಖಖೋಲ್ಕರೂಪಿಯಾದ ಸೂರ್ಯದೇವನಿಗೆ ಯಾವರೀತಿ ಪೂಜಾದಿಗಳು ಉಕ್ತವಾಗಿರುವುವೋ, ಅದೇ ಪೂಜಾಕ್ರಮದಿಂದ ಅಗ್ನಿಯನ್ನು ಪೂಜಿಸಿ, ಸೂರ್ಯದೇವನು ಈಗ ಅಗ್ನಿರೂಪದಲ್ಲಿರುವನೆಂದು ಭಾವಿಸಬೇಕು. ದಕ್ಷಿಣ

ಬ್ರಹ್ಮತೋ ವರುಣಾಭ್ಯಾಶೇ ಪ್ರಾಜ್ಯಾಜೀ ಸ್ರುಕ್‌ಸ್ರುವೌ ನ್ಯಸೇತ್ ।
ಇಷ್ವಾಂಗಾನಿ ತು ಸರ್ವಾಣಿ ಗುರೋರ್ನೈರ್ಋತ್ಯಭಾಗತಃ ॥ ೬೨ ॥

ಅಕ್ಷೀಣಾಗ್ರಾಃ ಕುಶಾ ಹ್ರಸ್ವಾಃ ಲೂನಾಶ್ಚೈವೋಪವೋಪಮೂಲತಃ ।
ಶಸ್ಯಂತೇ ಹರಿತಾ ಹೃದ್ಯಾಃ ಸರ್ವೇಷು ರವಿಕರ್ಮಸು ॥ ೬೩ ॥

ಅಗ್ನಿಗರ್ಭಸ್ಯ ಚಾಂತೇಷು ಪ್ರಾಗುದಕ್ಕೂಲಕಾನ್ ಕುಶಾನ್ ।
ನ್ಯಸೇತ್ಸಮಂತಾತ್ಸರ್ವೇಷಾಂ ಬ್ರಹ್ಮಾದೀನಾಮಧಸ್ತತಃ ॥ ೬೪ ॥

ಚತುರ್ವಿಂಶತಿರಂಗುಷ್ಠಪರಿಮಾಣಂ ಸ್ರುವಸ್ಯ ತು ।
ತಸ್ಯಾಪ್ಯುದ್ಧರಣಾಗ್ರಸ್ಯ ನತಮಂಗುಷ್ಠಸಂಮಿತಂ ॥ ೬೫ ॥

---

ಭಾಗದಲ್ಲಿರುವ ಬ್ರಹ್ಮಸ್ಥಾನಕ್ಕೆ ಪಶ್ಚಿಮದಲ್ಲಿ ಪೂರ್ವಾಭಿಮುಖವಾಗಿ ಸ್ರುಕ್, ಸ್ರುವಗಳನ್ನು ಇರಿಸಬೇಕು. ನೈಋತ್ಯಭಾಗದಲ್ಲಿ ಹೋಮ ದ್ರವ್ಯಗಳನ್ನೆಲ್ಲಾ ಶೇಖರಿಸಿಟ್ಟುಗೊಂಡು, ಆಚಾರ್ಯನು ಸಿದ್ಧನಾಗಿರಬೇಕು.

೬೩-೬೪. ಈ ಕಾರ್ಯಕ್ಕೆ ಉಪಯೋಗಿಸುವ ದರ್ಭೆಯು ಕ್ಷೀಣವಲ್ಲದ್ದಾಗಿರಬೇಕು. ತುಂಡುತುಂಡಾಗಿರಬಾರದು. ಬುಡದಿಂದ ಅಗ್ರಪರ್ಯಂತವಾಗಿರುವ ಪೂರ್ಣದರ್ಭೆಯೆನಿಸಿರಬೇಕು. ಹಸುರು ಬಣ್ಣದ ದರ್ಭೆಯೇ ಸಕಲ ಸೂರ್ಯಾರಾಧನೆಗಳಲ್ಲಿಯೂ ಶ್ರೇಷ್ಠವೆನಿಸುವುದು. ಅಗ್ನಿಗರ್ಭನ ಪೂಜಾಕಾಲದಲ್ಲಿ ದರ್ಭೆಯನ್ನು ಪ್ರಾಗಗ್ರ ಅಥವಾ ಉದಗಗ್ರವಾಗಿರಿಸಬೇಕು. ಬ್ರಹ್ಮಾದಿಗಳ ಸ್ಥಾನದಲ್ಲಿ ಮಾತ್ರ ಅಧೋಭಾಗದಲ್ಲಿ ಹಾಕಿರಬೇಕು.

೬೫-೬೬. ಹೋಮಮಾಡುವ ಸ್ರುವದಪರಿಮಾಣವು ಇಪ್ಪತ್ತನಾಲ್ಕು ಅಂಗುಲ ದೀರ್ಘವಾಗಿರಬೇಕು. ಅದರಲ್ಲಿ ಕೈಯಿಂದ ಹಿಡಿದುಕೊಳ್ಳುವ ಹಿಡಿಯು ಒಂದಂಗುಲ ಸ್ವಲ್ಪ ಅಧೋಮುಖವಾಗಿ ಬಗ್ಗಿರಬೇಕು. ಸ್ರುವದ ಮುಖದಲ್ಲಿರುವ ಬಟ್ಟಲು ಹನ್ನೆರಡು ಅಂಗುಲದ ಒಳಗೆ ಸೇರಿರಬೇಕು. ಮುಂದಿನ ಬಟ್ಟಲು ದುಂಡಾ

ತದರ್ಧಾಂಗುಲಂ ಪಾತ್ರಮಾನಂ ಪಾಣಿಪಾತ್ರತಲೋದರಂ ।
ವೃತ್ತಂ ತಸ್ಯಾಪಿ ನಿರ್ದಿಷ್ಟಂ ಖಾತಂ ದ್ವ್ಯಂಗುಲಮೇವ ಚ ॥ ೬೬ ॥

ರಕ್ತಚಂದನಕಾಷ್ಠೈಶ್ಚ ಖದಿರಾಶ್ವತ್ಥಕಿಂಶುಕೈಃ ।
ಅನ್ಯೈಶ್ಚೈವಾಪಿ ಯಾಜ್ಞೀಯೈಃ ಕರ್ತವ್ಯಂ ಸ್ರುಕ್‌ಸ್ರುವಾದಿಕಂ ॥ ೬೭ ॥

ಕಾಷ್ಠೈರಮೀಭಿಃ ಕರ್ತವ್ಯಂ ಮುಶಲೋಲೂಖಲಂ ತಥಾ ।
ಚಮಸಶ್ಚೈವ ತತ್ರಾಪಿ ಮುಸಲಂ ದ್ವಾದಶಾಂಗುಲಂ ॥ ೬೮ ॥

ಉಲೂಖಲಂ ತು ದಿಕ್ಸಂಖ್ಯಂ ಖಾತಂ ಚ ಚತುರಂಗುಲಂ ।
ಚಮಸಂ ವರ್ಣಸಂಖ್ಯಾತಂ ಖಾತಂ ಹ್ಯರ್ಧಾಂಗುಲಂ ತಥಾ ॥ ೬೯ ॥

ಪೃಚ್ಛಂ ಷಡಂಗುಲಂ ತಸ್ಯ ವಿಜ್ಞೇಯಂ ಪರಿಮಾಣತಃ ।
ದಂತಕಾಷ್ಠಂ ತು ಶಿಷ್ಯಸ್ಯ ಲಲಾಟೇ ನ ತು ಸಂಮಿತಂ ॥ ೭೦ ॥

---

ಗಿಯೂ, ತಲಭಾಗವು ವೃತ್ತಾಕಾರದಲ್ಲಿಯೂ ಇದ್ದು ಅದರ ಬಟ್ಟಲಿನ ಆಳವು ಎರಡಂಗುಲ ಆಳತೆಯಿಂದ ಕೂಡಿರಬೇಕು.

೬೭-೬೮. ರಕ್ತಚಂದನವೃಕ್ಷ, ಕಗ್ಗಲಿ, ಅಶ್ವತ್ಥ, ಮುತ್ತುಗ ಅಥವಾ ಇನ್ನೂ ಯಜ್ಞಕ್ಕೆ ಸಂಬಂಧಿಸಿದ ಇತರ ಯಾವ ವೃಕ್ಷ ವಿಶೇಷಗಳಿಂದಾಗಲಿ, ಸ್ರುಕ್, ಸ್ರುವ, ಮುಸಲ, ಉಲೂಖಲ ಮುಂತಾದುವುಗಳನ್ನು ನಿರ್ಮಾಣಮಾಡಬೇಕು. ಮುಸಲ (ಒನಕೆ) ಎಂಬುದು ಹನ್ನೆರಡು ಅಂಗುಲ ಪ್ರಮಾಣದಲ್ಲಿರಬೇಕು.

೬೯-೭೦. ಉಲೂಖಲ (ಒರಳು) ವನ್ನು ಎಂಟಂಗುಲ ಅಗಲವಾಗಿಯೂ, ಅದರಲ್ಲಿ ನಾಲ್ಕಂಗುಲ ಆಳವಾದ ಒರಳುಳ್ಳದ್ದಾಗಿಯೂ ನಿರ್ಮಿಸಬೇಕು. ಚಮಸ ಪಾತ್ರೆಯು (ಪ್ರಣೀತಾಪಾತ್ರೆ) ಮೂರಂಗಲ ಅಗಲವಾಗಿ ಅರ್ಧಂಗುಲ ರಂಧ್ರವುಳ್ಳದ್ದಾಗಿರಬೇಕು- ಶಿಷ್ಯನು ಉಜ್ಜುವ ದಂತಕಾಷ್ಠವು ಆತನ ಲಲಾಟದ ಪರಿಮಾಣದಲ್ಲಿದ್ದು, ಅದರ ಪುಚ್ಛವು ಆರಂಗುಲ ಪ್ರಮಾಣದಲ್ಲಿರಬೇಕು.

ಅರ್ಕಸ್ಯ ಸಮಿಧಃ ಕಾಷ್ಠಂ ದ್ವಾದಶಾಂಗುಲಮಾಯತಂ ।
ಅವಕ್ರಂ ಸತ್ವಚಂ ಚೈವ ಸಾರ್ದ್ರಂ ನಿಷ್ಪಾಣಿಕಂ ತಥಾ ।
ಉಪವೀತಂ ಕುಶಮಯಂ ಕರ್ತವ್ಯಾ ಮೇಖಲಾ ತ್ರಿವೃತ್ ॥ ೭೧ ॥

ಸಮಾ ಶುಕ್ಲಾ ಚ ಮೌಂಜೀಸ್ಯಾಚ್ಛರ್ಜಾ ಬಲ್ವಜಾತಥಾ ।
ಅವಿಚ್ಛಿನ್ನಶಿಖಾಜಾಲಃ ಸರ್ಪಿಃ ಕಾಂಚನಸನ್ನಿಭಂ ॥ ೭೨ ॥

ಸಿಗ್ಧಃ ಪ್ರದಕ್ಷಿಣಾವರ್ತೋ ವಹ್ನಿಃ ಸಿದ್ಧಿಕರಃ ಸ್ಮೃತಃ ।
ಉಲೂಖಲ್ಯೈಸತಸ್ತಸ್ಮಿನ್ ಕ್ಷೋದಯೇಚ್ಚತುರಂಗುಲಂ ॥ ೭೩ ॥

ಖಖೋಲ್ಕಮೂಲಮಂತ್ರೇಣ ಮುಶಲೇನ ಸಮಾಹಿತಃ ।
ನವೋಪಮಾನಂ ತು ಶಿಖಯಾ ಪಂಚಸಾ ತಂಡುಲೇನ ಚ ॥ ೭೪ ॥

ಮೂಲೇನ ಚೈವ ಶಮಯೇತ್ಪಾಯಸಂ ಚತುರಂಗುಲಂ ।
ಪ್ರವೇಶ್ಯಾಃ ಪ್ರಯತಾಃ ಶಿಷ್ಯಾ ಯೇ ಪೂರ್ವಮಧಿವಾಸಿತಾಃ ॥ ೭೫ ॥

---

೭೧-೭೨. ಅದು ಎಕ್ಕದ ಕಡ್ಡಿಯಾಗಿದ್ದು ಒಟ್ಟು ಹನ್ನೆರಡಂಗುಲಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿರಬಾರದು. ಆ ಕಾಷ್ಠವು ನೇರವಾಗಿಯೂ, ಮೇಲಿನ ತೊಗಟೆ ಯಿಂದ ಕೂಡಿದ್ದಾಗಿಯೂ ಇರಬೇಕು. ಯಜ್ಞೋಪವೀತವನ್ನು ದರ್ಭಮಯ ವನ್ನಾಗಿಮಾಡಿಕೊಂಡು, ಅದೇ ದರ್ಭೆಯಿಂದಲೇ ಮೂರೆಳೆ ಉಡಿದಾರ (ಮೇಖಲಾ) ವನ್ನು ಮಾಡಿಕೊಂಡು ಸೊಂಟಕ್ಕೆ ಕಟ್ಟಿಕೊಳ್ಳಬೇಕು.

೭೩-೭೪. ಹುತವಾದ ಅಗ್ನಿಯು ಪ್ರದಕ್ಷಿಣಾಕಾರವಾಗಿ ಸೌಮ್ಯವಾಗಿ ಉರಿ ಯುತ್ತಿದ್ದರೆ ಹೋಮಸಿದ್ಧಿಯು ಲಭಿಸುವುದೆಂದು ತಿಳಿಯಬೇಕು. ಹೋಮದ್ರವ್ಯ ವಾದ ಅಕ್ಕಿಯನ್ನು ಖಖೋಲ್ಕಮಂತ್ರದಿಂದ ಉಲೂಖಲದಲ್ಲಿಟ್ಟು ಮುಸಲದಿಂದ ಕುಟ್ಟಿ, ನಾಲ್ಕು ಅಂಗುಲ ನೀರಿನಿಂದ ತೊಳೆದು ಮತ್ತೆ ನಾಲ್ಕಂಗುಲ ನೀರನ್ನಿಟ್ಟು ಅಗ್ನಿಯಲ್ಲಿ ಪಚನಮಾಡಬೇಕು. ಅನಂತರ ಅದನ್ನು ಮೂಲಮಂತ್ರದಿಂದ ಅಗ್ನಿ ಶಿಖೆಯಲ್ಲಿ ಹೋಮಮಾಡಬೇಕು.

೭೫-೭೬. ಅದೇ ಮೂಲಮಂತ್ರದಿಂದಲೇ ಚತುರಂಗುಲ ಪ್ರಮಾಣವುಳ್ಳ ಸೌಟಿನಿಂದ ಪಾಯಸ ಹೋಮಮಾಡಬೇಕು. ಅನಂತರ ಆಚಾರ್ಯನು ನಿಯಮ

**ಲಿಖಿತಂ ಸ್ಯಾದ್ಯಮುದ್ದಿಶ್ಯ ತಂ ಚ ಪೂರ್ವಂ ನಿವೇಶಯೇತ್ ।**
**ಸೋಷ್ಣೀಷಂ ವಾಗ್ಯತಂ ದಾಂತಂ ಸಿತಚಂದನಚರ್ಚಿತಂ ॥ ೭೬ ॥**

**ಅಚಂಚಲೋಜ್ಜ್ವಲಕರಂ ಸಿತವಸ್ತ್ರವಿಭೂಷಿತಂ ।**
**ಗವಾಂ ಪುಚ್ಛೇನ ಸಲಿಲೈಃ ಖಿಖೋಲ್ಕಹೃದಯೇನ ತು ॥ ೭೭ ॥**

**ಅಭಿಷಿಂಚೇದ್ಗುರುಃ ಶಿಷ್ಯಂ ತತಸ್ತೈಃ ಪಾಪನಾಶನೈಃ ।**
**ಪ್ರದದ್ಯಾದ್ಗುರವೇ ಶಿಷ್ಯೋ ಗಾಂ ವತ್ಸೇನ ಸಮನ್ವಿತಾಂ ॥ ೭೮ ॥**

**ಚಾರುರೂಪಾಂ ಸಮಾಧಾನಾಂ ಹೇಮಸ್ರಗ್ವಸ್ತ್ರಭೂಷಿತಾಂ ।**
**ಸಿತವಸ್ತ್ರಾವೃತಖುರಾಂ ದ್ವಾರೇಣಾಪ್ಯಾನಯೇತ್ಸದಾ ॥ ೭೯ ॥**

---

ದಿಂದಿರುವ ಶಿಷ್ಯರನ್ನು ಕರೆಸಿ ಮೊದಲು ಯಾರು ಕರ್ಮಕ್ಕೆ ಮುಖ್ಯನಾಗಿರುವನೋ, ಯಾರಿಗೆ ಆ ಪೂಜಾಸಿದ್ಧಿಯು ಲಭಿಸಬೇಕೋ ಅವನನ್ನು ಸಮೀಪದಲ್ಲಿ ಕೂರಿಸಿ ಕೊಳ್ಳಬೇಕು. ಅವನು ತಲೆಯಲ್ಲಿ ರುಮಾಲನ್ನು (ಉಷ್ಣೀಷ) ಧರಿಸಿರಬೇಕು. ಮೌನಿಯಾಗಿ, ಇಂದ್ರಿಯಗಳನ್ನು ನಿಗ್ರಹಿಸಿದವನಾಗಿ, ಬಿಳಿಯ ಗಂಧದಿಂದ ಶರೀರ ವನ್ನೆಲ್ಲಾ ಲೇಪಿಸಿಕೊಂಡಿರಬೇಕು.

೭೭-೭೮. ಆತನು ತನ್ನ ಕೈಗಳನ್ನು ಸ್ಥಿರವಾಗಿ ಜೋಡಿಸಿಕೊಂಡು, ಶುಭ್ರ ವಸ್ತ್ರವನ್ನು ಹೊದ್ದುಕೊಂಡಿರಬೇಕು. ಇಂತಹ ಶಿಷ್ಯನನ್ನು ಗುರುವು ಗೋವಿನ ಬಾಲದ ನೀರಿನಿಂದಲೂ, ಖಿಖೋಲ್ಕ ಹೃದಯದಿಂದ ಕಲಶೋದಕದಿಂದಲೂ ಅಭಿ ಷೇಕಮಾಡಬೇಕು. ಅನಂತರ ಶಿಷ್ಯನು ಗುರುವಿಗೆ ವತ್ಸಸಹಿತವಾದ ಗೋವನ್ನು ದಾನಮಾಡಬೇಕು.

೭೯-೮೩. ಆ ಗೋವು ಸುಂದರವಾದ ಆಕಾರವುಳ್ಳದ್ದಾಗಿ ಸಾಧುವಾಗಿರ ಬೇಕು. ಅದನ್ನು ಸುವರ್ಣ, ವಸ್ತ್ರ, ಪುಷ್ಪ ಇವುಗಳಿಂದ ಅಲಂಕಾರಮಾಡಿ, ಅದನ್ನು ಕಟ್ಟಿಹಾಕುವ ಯಷ್ಟಿ (ಗೂಟ) ಸಮೇತವಾಗಿ ಗುರುವಿಗೆ ದಾನಮಾಡಬೇಕು.

ಪ್ರವೇಶ್ಯ ಯಸ್ಯಾಃ ಪುರತಃ ಸ್ಥಾಪಯೇತ್ಸುಸಮಾಹಿತಃ ।
ಕಾಯಿಕಂ ವಾಚಿಕಂ ಚೈವ ಮಾನಸಂ ಚ ಹರೇದ್ಗುರುಃ ॥ ೮೦ ॥

ಪಾಪಂ ಹಿ ತ್ರಿವಿಧಂ ತಸ್ಯ ಖಖೋಲ್ಕಹೃದಯಾದಿಭಿಃ ।
ಪುಷ್ಪೈರಂಜಲಿಮಾಪೂರ್ಯ ಜಾನುಭ್ಯಾಂ ಧರಣೀಂ ಗತಃ ॥ ೮೧ ॥

ಖಖೋಲ್ಕಮಿತಿ ಮಂತ್ರೇಣ ಕಮಲೇ ಪ್ರಕ್ಷಿಪೇತ್ತದಾ ।
ಪದ್ಮಸ್ಯ ಯಸ್ಮಿನ್ ದೇವಾಗ್ರೇ ಪ್ರಕ್ಷಿಪ್ತಂ ಕುಸುಮಂ ಪತೇತ್ ॥ ೮೨ ॥

ಸ ತಸ್ಯ ಕುಲದೇವಃ ಸ್ಯಾತ್ತದ್ಯಸ್ಯ ಸ್ವಾರ್ಥಸಾಧಕಃ ।
ಉತ್ಸಾದ್ಯ ಮುಖಬಂಧಂ ತು ದೃಷ್ಟ್ವಾ ಹಂಸಂ ಸಮಂತತಃ ॥ ೮೩ ॥

ಖಖೋಲ್ಕಕುಲದೇವಸ್ಯ ಪ್ರಣಮೇದ್ಭಕ್ತಿತಃ ಕ್ರಮಾತ್ ।
ಪದ್ಮರಾಗೇಣ ಹೇಮ್ನಾ ವಾ ಯುಕ್ತಂ ಸರ್ವಾನ್ನಿವೇಶಯೇತ್ ॥ ೮೪ ॥

---

ಇಂತಹ ಗೋವನ್ನು ಗುರುವು ಸ್ವೀಕರಿಸಿ ದೈಹಿಕವಾದ ಮಾನಸಿಕವಾದ ವಾಚಿಕವಾದ ಪಾಪತ್ರಯಗಳನ್ನು ಹೋಗಲಾಡಿಸಬೇಕು. ಅದಕ್ಕಾಗಿ ಶಿಷ್ಯನು ಬೊಗಸೆಯಲ್ಲಿ ಹೂವನ್ನು ತುಂಬಿಕೊಂಡು ಮೊಳಕಾಲೂರಿ ನೆಲದಮೇಲೆ ಕುಳಿತು ಖಖೋಲ್ಕ ಮೂಲಮಂತ್ರವನ್ನುಚ್ಚರಿಸುತ್ತಾ ಆ ಕಮಲದಮೇಲೆ ಬೊಗಸೆಯಿಂದ ಹಾಕಬೇಕು. ಆ ಪದ್ಮದಲ್ಲಿ ಆವಾಹಿತವಾಗಿರುವ ಯಾವ ದೇವತೆಯ ಮುಂದೆ ಆ ಹೂವು ಬೀಳುವುದೋ ಆ ದೇವರೇ ತನ್ನ ಕುಲದೈವವೆಂದು ತಿಳಿಯಬೇಕು. ಅದರಿಂದಲೇ ತನ್ನ ಇಷ್ಟಾರ್ಥಸಿದ್ಧಿಯಾಗುವುದೆಂದು ಭಾವಿಸಬೇಕು. ಅಲ್ಲಿಂದ ಮುಖಬಂಧವನ್ನು ತೆಗೆದು ಅಂದರೆ ಮೌನಮುದ್ರೆಯನ್ನು ಬಿಟ್ಟು ಹಂಸರೂಪಿಯಾದ ಸೂರ್ಯದೇವನನ್ನು ನೋಡಿ ಖಖೋಲ್ಕ ಎಂಬ ಹಿಂದೆ ಹೇಳಿದ ಮೂಲಮಂತ್ರದಿಂದ ನಮಸ್ಕರಿಸಬೇಕು.

೮೪-೮೫. ಮತ್ತು ಅದೇ ದೇವರನ್ನು ಪದ್ಮರಾಗದಿಂದಲೋ, ಅಥವಾ ಸುವರ್ಣದಿಂದಲೋ, ನಿರ್ಮಾಣಮಾಡಿ ಸದಾ ಪೂಜ್ಯವಸ್ತುವನ್ನಾಗಿ ಭಾವಿಸಿ ಇಟ್ಟುಕೊಳ್ಳ

ಐಶಾನೀಂ ತು ದಿಶಂ ನೀತ್ವಾ ಗುರುಃ ಶಿಷ್ಯಂ ವರಾಸನೇ ।
ಉಪವೇಶ್ಯ ತತೋ ದದ್ಯಾನ್ನೃಪತಿರ್ಯಜನಾನಿ ತು ॥ ೮೫ ॥

ಕುಶಾಗ್ರೇಣ ಸಮಾದಾಯ ಕಲಶೇಭ್ಯೋ ಗುರುರ್ಜಲಂ ।
ಪೂರ್ವಾನನಂ ಖಖೋಲ್ಕಾಗ್ರ್ಯೈಃ ಶಿಷ್ಯಂ ತಮಭಿಷೇಚಯೇತ್ ॥ ೮೬ ॥

ಅಭಿಷೇಕಕಾಲೇ ತಸ್ಯಾಥ ಬ್ರಾಹ್ಮಣಾಸ್ತು ಯಥಾಕ್ರಮಂ ।
ತ್ರಿಷೂಪೇತೇಷು ದೇವೇಷು ತ್ರಿಶಿಕ್ಷಾಂ ಪರಿಪಾಠಯೇತ್ ॥ ೮೭ ॥

ಅಸ್ಯ ವಾಸೋದ್ವಯಮಿತಿ ಉದುತ್ಯಂ ಚ ನಿಧಾಪಯೇತ್ ।
ಆಕೃಷ್ಣೇನೇತಿ ಯಜುಷಾಮುಷ್ಟೌ ವ್ಯಾಹೃತಿಕತ್ರಯಂ ॥ ೮೮ ॥

ಆದಿತ್ಯವ್ರತಸಂಜ್ಞಂ ಚ ಶುಕ್ಲಂ ವಸ್ತ್ರಂ ಚ ಸಾಮಸು ।
ಸಾಮಭಿಶ್ಚಾಭಿಷಿಂಚೇಯುಃ ಸರ್ವೇ ಸಂಯತಮಾನಸಾಃ ॥ ೮೯ ॥

---

ಬೇಕು. ಅನಂತರ ಮತ್ತೆ ಗುರುವು ಆ ಮಂಡಲದ ಈಶಾನ್ಯದಿಕ್ಕಿನಲ್ಲಿ ದರ್ಭಾಸನದಲ್ಲಿ ಕುಳ್ಳಿರಿಸಿ, ರಾಜಯೋಗ್ಯವಾದ ಮಂತ್ರಗಳಿಂದ ಆಶೀರ್ವದಿಸಬೇಕು.

೮೬-೮೭. ಅನಂತರ ಗುರುವು ಕಲಶೋದಕವನ್ನು ಕುಶಾಗ್ರದಿಂದ ತೆಗೆದುಕೊಂಡು, ಪೂರ್ವಾಭಿಮುಖವಾಗಿ ಕುಳಿತಿದ್ದ ಶಿಷ್ಯನನ್ನು ಖಖೋಲ್ಕಾದಿ ಮೂಲ ಮಂತ್ರದಿಂದ ಮೊದಲು ಪ್ರೋಕ್ಷಿಸಬೇಕು. ಅಭಿಷೇಕ ಕಾಲದಲ್ಲಿ ಬ್ರಾಹ್ಮಣರು ವೇದತ್ರಯವನ್ನು ಪಠಿಸುತ್ತಾ ಉಪನಿಷತ್ಪಾರಾಯಣಮಾಡಬೇಕು.

೮೮-೯೦. ಅಸ್ಯವಾಸೋದ್ವಯಂ, ಉದುತ್ಯಮಂತ್ರ, ಆಕೃಷ್ಣೇನ, ಹಾಗೆಯೇ ಯಾಜುಷಿಕವಾದ ವ್ಯಾಹೃತಿತ್ರಯ, ಈ ಮಂತ್ರಗಳಿಂದ ಆಚಾರ್ಯನು ಶಿಷ್ಯನಿಗೆ ಪ್ರೋಕ್ಷಣೆ ಮಾಡಬೇಕು. ಹಾಗೆಯೇ ಸಪ್ತಸಾಮಗಳಿಂದಲೂ ಸಾಮವೇದಿಗಳು ಪ್ರೋಕ್ಷಣೆ ಮಾಡಿದಮೇಲೆ ಶಿಷ್ಯನು ಮತ್ತೆ ಶುಭ್ರವಸ್ತ್ರ ಧಾರಿಯಾಗಿ ಶುದ್ಧಮನಸ್ಸಿನಿಂದ ಅಗ್ನಿಯ ಸಮೀಪದಲ್ಲಿ ಕುಳಿತುಕೊಳ್ಳಬೇಕು. ಅನಂತರ ಗುರುವು ದರ್ಭಸ್ಪರ್ಶ

ತತೋಽಗ್ನಿನಿಕಟಂ ಗತ್ವಾ ಮಂತ್ರೇಣ ಹೃದಯೇನ ತು ।
ಕುಶೇನಾಮೃಜ್ಯ ತಂ ಶಿಷ್ಯಂ ಹೋಮಂ ಕುರ್ಯಾದ್ಗುರುಃ ಸ್ವಯಂ ॥ ೯೦ ॥

ಗರ್ಭಾದಾನಂ ಪುಂಸವನಂ ಸೀಮಂತೋನ್ನಯನಂ ತಥಾ ।
ಜಾತಕರ್ಮ ತಥಾ ನಾಮಕರಣಂ ಚಾಶನಕ್ರಿಯಾಂ ॥ ೯೧ ॥

ಚೂಡೋಪನಯನಂ ಸ್ನಾನಂ ಪಾನೀಯಂ ಚ ಕ್ರತೂನಪಿ ।
ಕುಶೇನಾಂಗಂ ಪರಾಮೃಜ್ಯ ಕುರ್ಯಾಮವಸಥೇ ಹೃದಾ ॥ ೯೨ ॥

ಸಕುಶೇನ ತು ಹಸ್ತೇನ ಛಿತ್ವಾ ಶಿಶ್ಯಶಿಖಾಂ ಗುರುಃ ।
ಘೃತಪ್ಲುತಾಂ ದಹೇದಗ್ನೌ ಮೂರ್ಧಾದಿಕ್ಷಿಪ್ತಕಾರಣಾತ್ ॥ ೯೩ ॥

ಪದಾಮೃಜ್ಯಾಥವಾ ಮೂರ್ಧ್ನಿ ತಥೈವ ಜುಹುಯಾತ್ಕುಶಾನ್ ।
ಪಾಕಸಂಸ್ಥಾಂ ಹವಿಃಸಂಸ್ಥಾನ್ (ಸೋ) ಹೋಮಸಂಸ್ಥಾಂ ಚ
ಕಾರಯೇತ್ ॥ ೯೪ ॥

---

ದಿಂದ ಶಿಷ್ಯನನ್ನು ಸಮೀಪಗತನನ್ನಾಗಿಮಾಡಿಕೊಂಡು ಸ್ವಿಷ್ಟಕೃತ್ತೇ ಮೊದಲಾದ ಹೋಮಗಳಿಂದ ವ್ರತಸಮಾಪ್ತಿಮಾಡಬೇಕು.

೯೦-೯೨. ಅನಂತರ ಗುರುವು ಶಿಷ್ಯನಿಗೆ ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೂಡಾಕರ್ಮ, ಉಪನಯನ, ಸ್ನಾತಕವ್ರತ ಮುಂತಾದ ಕರ್ಮಗಳನ್ನು ಮಂತ್ರಪೂರ್ವಕವಾಗಿ, ದರ್ಭೆಯಿಂದ ಅವಯವಗಳನ್ನು ಸ್ಪರ್ಶಮಾಡಬೇಕು.

೯೩-೯೪. ಅನಂತರ ಗುರುವು ಕುಶಹಸ್ತನಾಗಿ ಮಂತ್ರದಿಂದ ಶಿಷ್ಯನ ಕೇಶ ಚ್ಛೇದಮಾಡಿ ಅದನ್ನು ಘೃತಮಿಶ್ರಣದಿಂದ ಅಗ್ನಿಯಲ್ಲಿ ಹೋಮಮಾಡಬೇಕು. ಹಾಗೆಯೇ ಹವಿಶ್ಶೇಷವಾದ ತುಪ್ಪದಿಂದ ಶಿಷ್ಯನ ದೇಹವನ್ನೆಲ್ಲಾ ಸ್ಪರ್ಶಮಾಡಬೇಕು. ಅನಂತರ ಪಾಕಸಂಸ್ಥಾ, ಹವಿಃಸಂಸ್ಥಾ, ಸೋಮಸಂಸ್ಥೆಗಳನ್ನು ಶಿಷ್ಯನಿಂದ ಮಾಡಿಸ ಬೇಕು.

ಪ್ರಾಗುಕ್ತೇನೈವ ವಿಧಿನಾ ತತಶ್ಶುದ್ಧೇನ ಸರ್ಪಿಷಾ ।
ಶಿಷ್ಯೋ ಹೋಮಂ ಪ್ರಕುರ್ವೀತ ಸ್ರುಕ್ಸ್ರುವಾಭ್ಯಾಂ ಯಥಾಕ್ರಮಂ॥೯೫॥

ಶಿಷ್ಯೋಽಭಿಮುಖಮಾತಿಷ್ಠೇತ್ಸಂಸ್ಪೃಶೇತ್ತು ಗುರುಂ ಕುಶೈಃ ।
ಭುವನಾನಿ ಸಹಾದಿತ್ಯಂ ಯೋಗಂ ಕುರ್ಯಾದ್ಗುರುಃ ಸ್ವಯಂ ॥ ೯೬ ॥

ಶ್ರಾವಯೇನ್ನಿತ್ಯಕೃತ್ಯಾದೌ ತಥಾ ಚ ಶ್ರೌಷಡಿತ್ಯಪಿ ।
ಯಾಗಾಂತೇ ಚ ವಷಟ್ಕಾರಃ ಕಾರ್ಯೋ ಲೋಕಾಭಿತರ್ಪಣೇ ॥ ೯೭ ॥

ಓಂ ಕಾಲಾಗ್ನಿರುದ್ರಾಯ (ಠಃ ಠಃ)
ಓಂ ಕಾಲರುದ್ರೇಭ್ಯಃ ,,
ಓಂ ಭಸ್ಮರುದ್ರೇಭ್ಯಃ ,,
ಓಂ ಶ್ವೇತಾಧಿಪತಯೇ ,,
ಓಂ ಕಾಲರುದ್ರೇಭ್ಯಃ ,,
ಓಂ ಪಿಂಗಲರುದ್ರೇಭ್ಯಃ ,,
ಓಂ ಹಿರಣ್ಯವರ್ಣಾಯ ,,
ಓಂ ಕಾಲಾಯ ,,
ಓಂ ಲೋಹಿತಾಕ್ಷಾಯ ,,
ಓಂ ರಕ್ತಪಿಂಗಲೇಭ್ಯೋ ,,
ಓಂ ಅನಂತಾಯ ,,

---

ಆಮೇಲೆ ಶಿಷ್ಯನು ಹಿಂದೆಹೇಳಿದ ರೀತಿಯಲ್ಲಿ ಮತ್ತೆ ಅಗ್ನಿಯಲ್ಲಿ ಘೃತ ಹೋಮಮಾಡಬೇಕು. ಅನಂತರ ಶಿಷ್ಯನು ಗುರುವನ್ನು ದರ್ಭೆಯಿಂದ ಸ್ಪರ್ಶ ಮಾಡಿಕೊಂಡು ಗುರುವಿಗೆ ಅಭಿಮುಖನಾಗಿ ಕುಳಿತುಕೊಳ್ಳಬೇಕು. ಗುರುವಾದರೋ ಆವಾಹನೆಮಾಡಿದ್ದ ಸೂರ್ಯದೇವನನ್ನು ಯೌಗಿಕವಾಗಿ ಧ್ಯಾನಮಾಡಬೇಕು. ಕೊನೆಯಲ್ಲಿ ನಿತ್ಯಕೃತ್ಯದ ಮತ್ತು ಯಾಗಾಂತ್ಯದಲ್ಲಿ ಉಚ್ಚರಿಸುವ ಶ್ರೌಷಡಿತ್ಯಾದಿ ಮಂತ್ರ ಪುರಶ್ಚರಣೆ ಮಾಡುತ್ತಾ ಲೋಕಕಲ್ಯಾಣವನ್ನು ಕೋರಬೇಕು.

ಓಂ ಪುಂಡರೀಕಾಕ್ಷಾಯ ,,

ಓಂ ಸಹಸ್ರಶೀರ್ಷಾಯ ,,

ಓಂ ಮಹೋಜ್ಜ್ವಲಾಯ ,,

ಓಂ ಸಜ್ಜ್ವಲಾಯ ,,

ಓಂ ಆಶೀನಿಷಾಯ ,,

ಓಂ ಸರ್ವೇಭ್ಯೋನಂತಾಯ ವರುಣೇಭ್ಯೋ

ಓಂ ಅನಿಚಯೇ ,,

ಓಂ ರೌರವಾಯ ,,

ಓಂ ತಾಮಿಸ್ರಾಯ ,,

ಓಂ ತಾಮಸಾಯ ,,

ಓಂ ಅಂಧತಾಮಿಸ್ರಾಯ ,,

ಓಂ ಶೀತಾಯ ,,

ಓಂ ಉಷ್ಣಾಯ ,,

ಓಂ ಸಂತಾಪನಾಯ ,,

ಓಂ ಸುಪ್ರತಾಪನಾಯ ,,

ಓಂ ಸಂಹತಾಯ ,,

ಓಂ ಕಾಕೋಲೂಕಾಯ ,,

ಓಂ ಪದ್ಮಲೋಚನಾಯ ,,

ಓಂ ಸಂಯಮನಾಯ ,,

ಓಂ ಜಂಬುಕಾಯ ,,

ಓಂ ಉಲೂಕಾಯ ,,

ಓಂ ವ್ಯಾಘ್ರಾಯ ,,

ಓಂ ಪೂತಿಮೃತ್ತಿಕಾಯ (ಠಃ ಠಃ)
ಓಂ ಕಾಲಸೂತ್ರಾಯ ,,
ಓಂ ಸೂಚೀಮುಖಾಯ ,,
ಓಂ ಲೋಹಶಂಕವೇ ,,
ಓಂ ಕ್ಷುರಧಾರೋಪಮಾಯ ,,
ಓಂ ಬಿರೀಕಾಯ ,,
ಓಂ ದಂಶಕಾಯ ,,
ಓಂ ತಪ್ತಕುಂಭೋಪಮಾಯ ,,
ಓಂ ಪೂಯಶೋಣಿತಪ್ರವಾಹಾಯ ,,
ಓಂ ಕೂಟಪರ್ವತಾಯ ,,
ಓಂ ತೀಕ್ಷ್ಣಶಲ್ಯಾಯ ,,
ಓಂ ಚಕ್ರಪಿಂಡಾಯ ,,
ಓಂ ತಾರ್ಕ್ಷ್ಯಾಯಸತುಂಡಾಯ ,,
ಓಂ ಮೇದೋಸೃಕ್ಪೂಯ ಪ್ರವಾಹಾಯ ,,
ಓಂ ಕ್ರಕಚಚ್ಛೇದನಾಯ ,,
ಓಂ ಅಸ್ಥಿಭಂಜನಾಯ ,,
ಓಂ ತಪ್ತವಾಲುಕಾಯ ,,
ಓಂ ಪಂಕಲೇಪನಾಯ ,,
ಓಂ ನಿರುಚ್ಛ್ವಾಸಾಯ ,,
ಓಂ ಯಮಲಪರ್ವತಾಯ ,,
ಸ್ವಾಹಾಕಾರ ಮಂತ್ರೇಭ್ಯಃ
ಓಂ ಕೂಟಶಾಲ್ಮಲಯೇ ಠಃ ಠಃ

---

ಮೇಲೆ ಹೇಳಿದ ಮಂತ್ರಗಳೆಲ್ಲಾ ಸ್ವಾಹಾಕಾರಮಂತ್ರಗಳು. (ಶಕ್ತಿಬೀಜಗಳು)

॥ ಬ್ರಹ್ಮೋವಾಚ ॥

ದಶಧಾಭೇದಭಿನ್ನಸ್ಯ ಭೇದೋ ದ್ವಾದಶಧಾ ಪುನಃ ।
ತತ್ರಾಸ್ಯ ತವ ದೇವೇಶ ಪ್ರಸೂತಿರ್ಬಹುವಿಸ್ತರಾ ॥ ೯೮ ॥

ಪ್ರತಿವಿದ್ಯೇಷು ತಂತ್ರೇಷು ಗತಿರುಕ್ತಾ ಪರಾ ತಥಾ ।
ಕೃತ್ಸ್ನೇನ ತಪಸಾ ಸಿದ್ಧಿಃ ಪ್ರಾಪ್ಯತೇ ಬಹುವಿಸ್ತರಾ ॥ ೯೯ ॥

ರಹಸ್ಯಂ ಪರಮಂ ದೇವ ಬ್ರೂಹಿ ತತ್ವಾರ್ಥಸಿದ್ಧಯೇ ।
ಪ್ರತಿಮಂತ್ರಪ್ರಯೋಗಾರ್ಥಂ ಧ್ಯಾನಸಿದ್ಧಂ ಚ ತತ್ತ್ವತಃ ॥ ೧೦೦ ॥

ಅಚಿಂತ್ಯಂ ಪರಮಂ ಗುಹ್ಯಮನುಕ್ತಂ ಯನ್ಮಯಿ ತ್ವಯಾ ।
ಮಂತ್ರಸಿದ್ಧಿರ್ಯತೋ ಯಾವತ್ತಂತ್ರೇಸ್ಮಿನ್ ಪ್ರಥಮೋ ವಿಭೋ ॥ ೧೦೧ ॥

॥ ಭಾಸ್ಕರ ಉವಾಚ ॥

ಪೃಷ್ಟಃ ಪ್ರೋವಾಚ ತಂ ತಸ್ಯ ಸೃಷ್ಟಿಂ ಸದಸದಾತ್ಮಿಕಾಂ ।
ಅಸತಃ ಪ್ರಥಮಂ ಜಜ್ಞೇ ವರ್ಣೋಗ್ರಃ ಷೋಡಶಾತ್ಮಕಃ ॥ ೧೦೨ ॥

---

೯೮-೧೦೦. ಒಂದುಸಾರಿ ಬ್ರಹ್ಮನು ಭಾಸ್ಕರನನ್ನು ಕುರಿತು "ಸ್ವಾಮಿಯೇ, ನಿನ್ನ ಉತ್ಪತ್ತಿಯು ದಶವಿಧವೆಂದೂ ದ್ವಾದಶವಿಧವೆಂದೂ ಹೇಳುವರು. ಅದು ನಮಗೆ ಸ್ಪಷ್ಟವಾಗಿ ತಿಳಿಯುವಂತಿಲ್ಲ. ಅಂತೂ ಪ್ರತಿತಂತ್ರಗಳಲ್ಲಿಯೂ ಉತ್ತಮಗತಿಪ್ರದ ವಾದದ್ದು ಸೂರ್ಯಮಂತ್ರವೆಂದು ಸಕಲರೂ ಹೇಳುವರು. ಆದ್ದರಿಂದ ಯಾವ ವಿಧದಿಂದ ಆಚರಿಸಿದ ತಪಸ್ಸು ನಿನ್ನ ಭಕ್ತರಿಗೆ ಸಂಪೂರ್ಣಸಿದ್ಧಿಯನ್ನು ಕೊಡುವುದೋ ಅದನ್ನು ವಿವರಿಸಿ ರಹಸ್ಯವಿಷಯವನ್ನೂ ನಮಗೆ ತಿಳಿಯಪಡಿಸಬೇಕು.

೧೦೧. ಅಲ್ಲದೆ ಎಲೈ ಸ್ವಾಮಿಯೇ, ಇಲ್ಲಿನವರೆಗೂ ನನಗೆ ಯಾವ ಮಂತ್ರೋಪದೇಶವೂ ತಂತ್ರವಿಸ್ತಾರವೂ ಉಪದಿಷ್ಟವಾಗಿಲ್ಲ. ಆದ್ದರಿಂದ ಈಗ ಈ ರಹಸ್ಯವಾದ ಮಂತ್ರಸಿದ್ಧಿಯನ್ನು ನನಗೆ ವಿವರಿಸಿ ಕಾಪಾಡಬೇಕು" ಎಂದ, ಕೇಳಿಕೊಂಡರು.

೧೦೨-೧೦೩. ಆಗ ಭಾಸ್ಕರನು ಬ್ರಹ್ಮನಿಗೆ ಈ ರೀತಿ ವರ್ಣಸೃಷ್ಟಿಕ್ರಮವನ್ನು ಮೊದಲು ವಿವರಿಸಲಾರಂಭಿಸಿದನು. "ಬ್ರಹ್ಮನೇ, ಸೃಷ್ಟಿಯು ಸತ್,

ಸಪ್ತವಿಂಶತ್ತಥಾ ವರ್ಣಾ ಜಜ್ಞಿರೇ ಕ್ರಮಶಃ ಪರೇ ।
ಉಭಯೇಭ್ಯೋ ವಿನಿರ್ಮಥ್ಯ ವಿಂಶದ್ವರ್ಣಾಶ್ಚ ಸೃಷ್ಟಯೇ ॥ ೧೦೩ ॥

ಆದಿತೋ ಮಥ್ಯಮಾನೇಷು ಪಂಚವಿಂಶದಯೋನಿಜಾಃ ।
ಪರಮೇಷ್ಠ್ಯಾದಯಃ ಸಪ್ತ ಪ್ರಾಣಸ್ಥಾನೇಷು ನಿಃಸೃತಾಃ ॥ ೧೦೪ ॥

ವಕ್ತ್ರತಃ ಪರಮೇಷ್ಠ್ಯತ್ತು ಕಾರಣಂ ದಕ್ಷಿಣೇಕ್ಷಣಾತ್ ।
ಕ್ರಿಯಾ ವಾಮೇಕ್ಷಣಾತ್ತಸ್ಯ ಮಂತ್ರಾತ್ಸದಕ್ಷಿಣಾತ್ಸುತಃ ॥ ೧೦೫ ॥

ವಿಜಸೋ ವಾಮತಶ್ಚಾಸ್ಯ ನಾಸಿಕಾಪ್ರಸವಾವುಭೌ ।
ಪ್ರಸೂತೀ ತಸ್ಯ ಸೃಷ್ಟ್ಯಂಶೌ ನಿಸ್ಸೃತೌ ತೌ ಯಥಾಕ್ರಮಂ ॥ ೧೦೬ ॥

---

ಅಸತ್, ಎಂದು ಎರಡುವಿಧ. ಅದರಲ್ಲಿ ಅಸತ್, ಸೃಷ್ಟಿಯಲ್ಲಿ ಮೊದಲು ಹದಿನಾರು ಸ್ವರೂಪವಾದ ಅಕ್ಷರಗಳು ಹುಟ್ಟಿದುವು. ಅನಂತರ ೨೭ ಅಕ್ಷರಗಳು ಗೋಚರವಾದವು. ಈ ಅಕ್ಷರಗಳ ಸಮುದಾಯದಲ್ಲಿ ಒಟ್ಟು ೨೦ ಅಕ್ಷರಗಳನ್ನು ಸೃಷ್ಟಿಕಾರ್ಯಕ್ಕೆ ವಿನಿಯೋಗಿಸಿಕೊಳ್ಳಲಾಯಿತು.

೧೦೪-೧೦೫. ಮೊದಲನೆಯ ಇಪ್ಪತ್ತೈದುವರ್ಣಗಳ ಮಥನದಿಂದ ಆಯೋನಿಜರಾದ ಬ್ರಹ್ಮರೇ ಮೊದಲಾದ ದೇವಶ್ರೇಷ್ಠರೂ, ಏಳಕ್ಷರಗಳಿಂದ ಸಪ್ತಪ್ರಾಣಸ್ಥಾನಗಳೂ ಉತ್ಪತ್ತಿಯಾದವು. ಬ್ರಹ್ಮನ ಮುಖದಿಂದಲೇ ಆ ಸಪ್ತಪ್ರಾಣಸ್ಥಾನಗಳು ಉತ್ಪತ್ತಿಯಾದವುಗಳೆಂದು ಹೇಳಬೇಕು. ಹಾಗೆಯೇ ಬ್ರಹ್ಮನ ದಕ್ಷಿಣದೃಷ್ಟಿಯಿಂದ ಕಾರಣವೂ, ಎಡದೃಷ್ಟಿಯಿಂದ ಕ್ರಿಯೆಯೂ, ದಕ್ಷಿಣಭಾಗದ ಮಂತ್ರದಿಂದ ಸುತನೂ ಉತ್ಪತ್ತಿಯಾದನು.

೧೦೬-೧೦೭. ಬ್ರಹ್ಮನ ಎರಡು ನಾಸಿಕಾಭಾಗಗಳಿಂದಲೂ ಕ್ರಮವಾಗಿ, ವಿಜಸ್ಸು, ಪ್ರಸೂತಿ ಎಂಬ ಸೃಷ್ಟ್ಯಂಶಗಳು ಉತ್ಪತ್ತಿಯಾದವು. ಅವುಗಳನ್ನು ತಡೆ

ತತಸ್ತೇಷಾಂ ನಿರೋಧಾಯ ಸೃಷ್ಟಿಸಂಹಾರಕಾರಣಂ ।
ಸಂಸ್ಕೃತ್ಯಾದ್ಯಾನಿ ಪಾದಾನಿ ಪ್ರಣವಾಂತಂ ಸಕಾರಣಂ ॥ ೧೦೭ ॥

ಮೂರ್ಧ್ನಿ ಚೈವಂ ತಥಾನ್ಯಸ್ಯ ಯೋನಿಶೇಷಾತ್ತು ಯೋಜಯೇತ್ ।
ಶಿವಯೋರ್ನಿರ್ಮಿತಾ ದೇವೀ ಹೃದಯಾಗ್ರೇ ಪರಂ ತತಃ ।
ಕಾರಣಂ ದಕ್ಷಿಣೇ ಬಾಹೌ ಸ್ಥಾಪ್ಯಾ ಸರ್ವಾ ಕ್ರಿಯಾ ತಥಾ ॥ ೧೦೯ ॥

ಭುವನಾಧಿಪತಿರ್ಯಸ್ಯ ಬೀಜಯೋನಿರಥೋಭಯೋಃ ।
ಲಿಂಗೋಪಾಂತೇ ಪ್ರಸೂತಿಂ ಚ ನ್ಯಸೇತ್ಸೃಷ್ಟಿಂ ತು ಪಾದಯೋಃ ॥೧೧೦ ॥

ಸಂಹಾರಂ ಚಕ್ರುರೂರ್ಧ್ವಸ್ಮಾತ್ ತಾಂ ಸರ್ವಾಂಗಿನೀಂ ತಥಾ ।
ಭೂತಯೋನಿಸ್ಥಿತಾ ತಾಭ್ಯಾಂ ಪ್ರೇರಿತಾ ವಿಶ್ವಸಂಜ್ಞಿತಾಃ ॥ ೧೧೧ ॥

ಜಠರೇ ಸಂಸ್ಥಿತೋ ವಹ್ನಿರ್ಜಗತೋಽಸ್ಯ ಪ್ರಕಾಶಕಃ ।
ಲಿಂಗಸ್ಯಾತಿಶಯಂ ವಕ್ಷ್ಯೇ ದೀರ್ಘವಿಸ್ತರಣಂ ತಥಾ ॥ ೧೧೨ ॥

---

ಯುವುದಕ್ಕಾಗಿ ಸೃಷ್ಟಿಸಂಹಾರ ಇವುಗಳ ಕಾರಣಭೂತನಾಗಿ ಸಂಸ್ಕೃತಿಯೇ ಮೊದಲಾದ ಪಾದಗಳು ಪ್ರಣವಾಂತವಾಗಿ ಉತ್ಪನ್ನವಾದವು.

೧೦೮-೧೧೦. ಈ ಪ್ರಣವವನ್ನು ಮೂರ್ಧಸ್ಥಾನದಲ್ಲಿಟ್ಟು ಉಳಿದ ಅವಯವಗಳನ್ನೆಲ್ಲಾ ಯೋನ್ಯಂಗಗಳಾಗಿ ನಿಯಮಿಸಿ, ಪಾರ್ವತೀಪರಶಿವರಲ್ಲಿ ಪರಶಿವನ ಹೃದಯಸ್ಥಾನದಲ್ಲಿ ಕಾರಣವನ್ನೂ, ದಕ್ಷಿಣಬಾಹುವಿನಲ್ಲಿ ಕ್ರಿಯೆಯನ್ನೂ ನಿಲ್ಲಿಸಿದನು. ಆ ಕ್ರಿಯೆಯೇ ಲೋಕಕ್ಕೆ ಮುಖ್ಯವಾಗಿ ಬೀಜ, ಯೋನಿ ಇವುಗಳಲ್ಲಿ ಅಡಗಿತು. ಅಂಗದ ಅಂತ್ಯಭಾಗದಲ್ಲಿ ಪ್ರಸೂತಿಯನ್ನಿಟ್ಟನು.

೧೧೧-೧೧೨. ಸಂಹಾರವನ್ನು ಎರಡು ಕಾಲುಗಳಲ್ಲಿಯೂ ಇಟ್ಟು ವಿಶ್ವಸಂಜ್ಞಿತವಾದ ಶಕ್ತಿಯನ್ನು ಸರ್ವಾಂಗಗಳಲ್ಲಿಯೂ, ಜಗತ್ಪ್ರಕಾಶಕವಾದ ಅಗ್ನಿಯನ್ನು ಜಠರದಲ್ಲಿಯೂ, ದೀರ್ಘವಿಸ್ತಾರಗುಣಗಳನ್ನು ಅಂಗದಲ್ಲಿಯೂ ಇಟ್ಟನು.

ಷಷ್ಟಿರಥೋತ್ತರಾ ಜ್ಞೇಯಾ ವ್ಯೋಮವ್ಯಾಪ್ಯ ತಥಾ ಸ್ಥಿತಾಃ ।
ಅರ್ಚಿಷೋ ದೇವದೇವಸ್ಯ ವ್ಯೋಮವ್ಯಾಪೀತಿ ಚಾಕ್ಷರಃ ॥ ೧೧೩ ॥

ದಶಕೋಟ್ಯೋಥ ಲೋಕೇಭ್ಯೋ ಮಂತ್ರಾಣಾಂ ಜಜ್ಞಿರೇ ಪ್ರಭೋ ।
ತುಲ್ಯಾಯುತೇ ತು ವಿಜ್ಞೇಯಾ ಶಿವೇನ ಪರಮಾತ್ಮನಾ ॥ ೧೧೪ ॥

ಭುವನೇ ಶಾಂತಯಃ ಕಾರ್ಯಾಃ ಶಿವಯೋನಿಪ್ರಸೂತಿಜಾಃ ।
ಪಾತಾಲದಿಶಿ ವಿನ್ಯಸ್ತಾ ವಾರಯಂತಿ ಸ್ವಶಕ್ತಿತಃ ॥ ೧೧೫ ॥

ಶರೀರಂ ದೇವದೇವಸ್ಯ ಗುಹ್ಯಮೇತಚ್ಛಿವಾತ್ಮಕಂ ।
ಜ್ಞೇಯಂ ಧ್ಯೇಯಂ ತಥಾ ಪೂಜ್ಯಂ ಯೋಜ್ಯಂ ಸ್ಯಾತ್ಪಂಚವಿಂಶಕಂ ॥

ಯೋಜ್ಯಮೇಕರಸಂಕರ್ಮಪ್ರೋಕ್ತಂ ಯೋಗೇ ಮನೀಷಿಭಿಃ ।
ಏತತ್ ಜ್ಞಾತ್ವಾ ಸುಖಾತ್ಸಿದ್ಧಿಂ ಸಂದಿಗ್ಧಾತ್ವನ್ಯಥಾ ಭವೇತ್ ।

---

೧೧೩-೧೧೪. ಆ ಅರುವತ್ತು ಅಕ್ಷರಗಳೇ ವ್ಯೋಮಮಾರ್ಗಗಳು. ದೇವದೇವನಾದ ಪರಬ್ರಹ್ಮನ ಕಿರಣಗಳೇ ಅಂತರಿಕ್ಷದಲ್ಲೆಲ್ಲಾ ವ್ಯಾಪಿಸುವುದು. ಈ ಅಕ್ಷರಗಳಿಂದ ಕೂಡಿದ ಮಂತ್ರಗಳು ಲೋಕದಲ್ಲಿ ಹತ್ತುಕೋಟಿ ಸಂಖ್ಯೆಯಲ್ಲಿರುವುವು. ಆ ಮಂತ್ರಗಳೆಲ್ಲಾ ಮಹಿಮೆಯಲ್ಲಿ ಪರಶಿವನಿಗೆ ಸದೃಶವಾದವುಗಳು.

೧೧೫-೧೧೬. ಲೋಕದಲ್ಲಿ ಸಮಸ್ತ ಶಕ್ತಿ ಗುಣಗಳೂ, ಶಿವಯೋನಿ ಪ್ರಸೂತಿಗಳೇ. ಈ ಶಕ್ತಿಗಳು ತಮ್ಮ ಸಾಮರ್ಥ್ಯದಿಂದ ಪಾತಾಳಲೋಕಗಳಾಗಿದ್ದರೂ ಎಲ್ಲವನ್ನೂ ತಡೆದಿರುತ್ತವೆ. ದೇವದೇವನ ಶರೀರವೇ ಈಶ್ವರಾತ್ಮಕವಾದದ್ದು. ಅದು ಬಹಳ ಗೋಪ್ಯವಾದದ್ದು. ಜ್ಞೇಯವಸ್ತು, ಧ್ಯೇಯವಸ್ತು. ಪೂಜ್ಯವಸ್ತು ಎಂಬುದೆಲ್ಲಾ ಪಂಚವಿಂಶದಕ್ಷರಾತ್ಮಕವಾದ ದೇಹರೂಪಿಯಾದ ಶಂಕರನೇ.

೧೭. ಸೃಷ್ಟಿಗೆ ಮೂಲಭೂತವಾದ ಈ ವಸ್ತುಗಳಿಂದ ಜಗಜ್ಜಾಲವೆಲ್ಲವೂ ಅವರವರ ಕರ್ಮಾನುಗುಣವಾಗಿ ಜನನ ಮರಣಾದಿಗಳನ್ನು ಪಡೆಯುವುದುಂಟು.

ಬೀಜಾರ್ಥಂ ವಪುಷೋ ಹ್ಯೇತತ್ಪ್ರೋಕ್ತಂ ತವ ಪಿತಾಮಹ ॥ ೧೧೭ ॥

ಇತಿ ಶ್ರೀ ಸಾಂಬಪುರಾಣೇ ಪಂಚಪಂಚಾಶತ್ತಮೋಽಧ್ಯಾಯೇ
ತೃತೀಯಂ ಪಟಲಂ.

---

ಇದನ್ನು ತಿಳಿದು, ಸುಖಸಿದ್ಧಿಗಾಗಿ ಪ್ರಯತ್ನಪಡಬೇಕು. ಬ್ರಹ್ಮದೇವನೇ, ಈಗ ದೇಹದ ಮೂಲಭೂತವಾದ ಈ ತತ್ತ್ವವನ್ನು ನಿನಗೆ ಸಂಕ್ಷೇಪವಾಗಿ ತಿಳಿಯಪಡಿಸಿರುವೆನು ಎಂದು ಭಾಸ್ಕರನು ಬ್ರಹ್ಮನಿಗೆ ಸೃಷ್ಟಿತತ್ತ್ವವನ್ನು ಉಪದೇಶಿಸಿದನು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಐವತ್ತೈದನೆಯ ಅಧ್ಯಾಯದಲ್ಲಿ
ತೃತೀಯಪಟಲವು ಪೂರ್ಣವಾದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಷಟ್ಪಂಚಾಶೋಽಧ್ಯಾಯಃ

---

ತತ್ರ ತತ್ವಾನಿ ಬೀಜತತ್ವಂ ವರ್ಣತತ್ತ್ವಂ ಯೋನಿತತ್ತ್ವಂ ಚೇತಿ ॥ ೧ ॥
ನಿಷ್ಕಲಂ ಸಕಲಂ ಸಿದ್ಧಾಶ್ಚತ್ವಾರಃ ಪದಾರ್ಥಾಃ ।
ಸಿದ್ಧಾಃ ಪಂಚವಿಂಶಕಭಾವಾಃ ॥ ೨ ॥
ಅಥಾಸ್ಯ ಹೃದಯಂ ವಕ್ಷ್ಯೇ ಗುಹ್ಯಾದ್ಗುಹ್ಯತರಂ ವಿಭೋಃ ।
ಊರ್ಧ್ವಂ ಚ ಸಪ್ತಸ್ರೋತಾಂಸಿ ನಾಳಂ ದ್ವಾದಶಕಂ ತಥಾ ॥ ೩ ॥

ಪಂಚಕಾ ಕರ್ಣಿಕಾ ತಸ್ಯ ಮಕರಃ ಪಂಚಧಾ ಸ್ಮೃತಃ ।
ಕೇಸರಂ ಷೋಡಶಂ ತಸ್ಯ ಪದ್ಮಂ ದ್ವಾದಶಭಿರ್ದಲೈಃ ॥ ೪ ॥

---

## ಐವತ್ತಾರನೆಯ ಅಧ್ಯಾಯ

೧-೩. ಭಾಸ್ಕರ ಮಂಡಲದಲ್ಲಿ ಬೀಜತತ್ತ್ವ, ವರ್ಣತತ್ತ್ವ, ಯೋನಿತತ್ತ್ವಗಳೆಂದು ಮೂರು ತತ್ತ್ವಗಳಿವೆ. ನಿಷ್ಕಲ, ಸಕಲ, ಸಿದ್ಧಿ, ಪದಾರ್ಥವೆಂಬ ನಾಲ್ಕು ರೂಪಗಳಿವೆ. ಅದರಲ್ಲಿ ಸಿದ್ಧ ವಸ್ತುವು ಇಪ್ಪತ್ತೈದು ಭಾವಗಳನ್ನೊಳಗೊಂಡಿರುವುದು. ಈಗ ಭಾಸ್ಕರ ಯಂತ್ರಾತ್ಮಕವಾದ ಹೃದಯಸ್ವರೂಪವನ್ನು ಅತ್ಯಂತ ಗೂಢರೀತಿಯಲ್ಲಿ ವಿವರಿಸುವೆನು. ಇದು ಬಹಳ ಗೋಪ್ಯವಾಗಿರತಕ್ಕದ್ದು. ಇದಕ್ಕೆ ಮೇಲೆ ಏಳು ಪ್ರವಾಹಗಳೂ, ಹನ್ನೆರಡು ನಾಳಗಳೂ ಇರುವುವು.

೪-೫. ಅದಕ್ಕೆ ಕರ್ಣಿಕೆಯು ಐದು, ಮಕರವೂ ಐದು, (?) ಹದಿನಾರು ಕೇಸರಗಳೂ, ಹನ್ನೆರಡು ದಳಗಳೂ, ಏಳು ಶೃಂಗಗಳೂ, ದ್ವಾದಶಯೋನಿಗಳೂ,

ಸಪ್ತಶೃಂಗಂ ತಥಾಪಾರಂ ಮೇರುಮಂದರಭೂಷಿತಂ ।
ಯೋನಯೋ ದ್ವಾದಶ ಖ್ಯಾತಾಃ ಪ್ರತಿಯಂತ್ರಂ ಪ್ರತಿಷ್ಠಿತಾಃ ॥ ೫ ॥

ಏಕಾಕ್ಷರಪರೋ ದೇವೋ ವರ್ಣೇಭ್ಯೋ ಬೀಜವಾನ್ ಪ್ರಭುಃ ।
ತತ್ತ್ವನಿರ್ಮಥನಾಜ್ಜಜ್ಞೇ ಕಲಾಸಾಧ್ಯರ್ಧಮಾತ್ರಿಕಾ ॥ ೬ ॥

ಬೀಜಬೀಜಾದಮುಂ ಪ್ರಾಹುಃ ಷೋಡಶಾರ್ಧಂ ಚ ಯಃ ಕ್ರಮಾತ್ ।
ಆತ್ಮಾ ಚಾರ್ಧಕಲಾ ತಸ್ಯ ಹೃದಿ ಸ್ಥಿತಸ್ಯ ಸಪ್ತಧಾ ॥ ೭ ॥

ಸಪ್ತಶೃಂಗಕೃತೈಶ್ಚೈವ ಸಪ್ತ ತಸ್ಯ ಕಲಾತ್ಮಕಂ ।
ತತ್ತ್ವವಿದ್ಬೀಜಮೇತಸ್ಮಾನ್ನಾನ್ಯದ್ಬೀಜಮತಃಪರಂ ॥ ೮ ॥

---

ಮೇರುಪರ್ವತ, ಮಂದರಪರ್ವತ ಸ್ಥಾನಗಳೂ ಈ ಯಂತ್ರದಲ್ಲಿ ಪ್ರತಿಷ್ಠಿತಗಳಾಗಿರುವುವು.

೬-೭. ದೇವದೇವನು ಮಾತ್ರ ಸದಾ ಏಕಾಕ್ಷರಪರನೇ. ಸಕಲ ಅಕ್ಷರಗಳಿಗೆ ಮೂಲಭೂತನಾದವನೇ ಈ ಪ್ರಭುವು. ಹಿಂದೆ ಹೇಳಿದ ತತ್ತ್ವತ್ರಯಮಥನದಿಂದ ಅರ್ಧಮಾತ್ರಾ ಕಾಲಸ್ವರೂಪಿಯಾದ ಕಲಾರೂಪನೇ ನಿಜವಾದ ಆತ್ಮನು. ಅದಕ್ಕೆ ಇತರಕಾರಣ ವಸ್ತುಗಳ ಸಂಸರ್ಗವೊದಗಿ ಹದಿನಾರು ಅರ್ಧಮಾತ್ರಾಕಾಲಿಕಗಳಾದ ಹದಿನಾರು ಸ್ವರಗಳು ನಿರ್ಮಿತವಾದವು. ಒಂದಕ್ಷರವನ್ನು ಬಿಟ್ಟು ಉಳಿದ ಅಕ್ಷರಗತವಾದ ಒಂದೊಂದು ಮಾತ್ರೆಯಲ್ಲಿ ಅರ್ಧ ಮಾತ್ರಾಕಾಲವು ಆತ್ಮನಿಗೂ, ಉಳಿದರ್ಧವು ಹೃದಯಕ್ಕೂ ಸಂಬಂಧಿಸಿದುದಾಗಿರುತ್ತದೆ. ಹೀಗೆ ಪರಮಾತ್ಮನಲ್ಲಿ ಏಳು ಕಲೆಗಳು ಧ್ವನಿಸಿದುವು.

೮-೯. ಹಿಂದೆ ಹೇಳಿದ ಸಪ್ತಶೃಂಗಗಳೇ ಸಪ್ತಕಲೆಗಳು. ಅವುಗಳನ್ನೇ ಸಕಲ ಮಂತ್ರಗಳಿಗೂ ಬೀಜವೆನ್ನುವರು. ಆದರಿಂದಲೇ ಸಕಲಮಂತ್ರಗಳೂ ಉದಿಸಿರುವುವು.

**ಆದೌ ಪಂಚದಶಂ ಯತ್ತು ಸಂಜ್ಞಾತ್ಮಾ ತದಯನ್ನ ತತ್ ।**
**ಸ ಬಿಂದುಕಾ ಪ್ಲುತಾ ಜ್ಞೇಯಾ ವಿಸರ್ಗಾಶ್ಚ ಯಥಾಕ್ರಮಂ ॥ ೯ ॥**

**ಓಂಕಾರಾಂತಾ ಅಕಾರಾದ್ಯಾಃ ಪ್ರಥಮೇ ಕೇಸರೇ ಸ್ಥಿತಾಃ ।**
**ಕಕಾರಾದಿಹಕಾರಾಂತಾ ದ್ವಿತೀಯೇ ಕೇಸರೇ ಸ್ಥಿತಾಃ ॥ ೧೦ ॥**

**ಅಕಾರಾದಿಕ್ಷಕಾರಾಂತಾಃ ಪಂಚಾಶದ್ಯಂತ್ರಸಂಖ್ಯಯಾ ।**
**ಏತದ್ಧೃದಯಪದ್ಮಂ ಸ್ಯಾದ್ಬೀಜಯೋನಿಕೃತಂ ವಿಭೋ ॥ ೧೧ ॥**

**ಧ್ಯಾತ್ವೈತತ್ಮುಚ್ಯತೇ ಸರ್ವೈಃ ಬೀಜನಿರ್ದಗ್ಧಕಲ್ಮಶಃ ।**
**ವಿಧಿನಾ ದೀಕ್ಷಿತಶ್ಚಾಸ್ಮಿನ್ ಮಂಡಲೇ ಬೀಜಯೋನಿಜೇ ॥ ೧೨ ॥**

---

ಮೊದಲಿನ ಹದಿನೈದು ಅಕ್ಷರಗಳು ಹ್ರಸ್ವ, ದೀರ್ಘ, ಪ್ಲುತಸಂಜ್ಞೆಯನ್ನೂ, ಅನುಸ್ವಾರ ವಿಸರ್ಗಗಳನ್ನು ಪಡೆಯುವುವು.

೧೦-೧೧. ಅಕಾರಾದಿಯಾಗಿ ಓಂಕಾರಾಂತವಾದ ಅಕ್ಷರಗಳು ಮೊದಲನೆಯ ಕೇಸರದಲ್ಲಿಯೂ, ಕಕಾರಾದಿಯಾಗಿ ಹಕಾರಾಂತದವರೆಗೆ ಎರಡನೆಯ ಕೇಸರ ದಲ್ಲಿಯೂ, ಅಕಾರಾದಿಕ್ಷಕಾರಾಂತವಾದ ೫೦ ಅಕ್ಷರಗಳೂ ಉಳಿದ ಕೇಸರಗಳಲ್ಲಿಯೂ ಅಡಗಿರುವುವು. ಈ ಲಕ್ಷಣವಿಶಿಷ್ಟವಾದ ಯಂತ್ರವನ್ನೇ ಹೃದಯಪದ್ಮವೆಂದು ಹೇಳು ವುದು. ಇದೇ ಸಕಲಮಂತ್ರಕ್ಕೂ ಮೂಲಭೂತವಾದದ್ದು.

೧೨-೧೩. ಈ ಹೃದಯವನ್ನು ಸರಿಯಾಗಿ ಅರಿತವನು ಸಕಲ ಪಾಪಕರ್ಮ ಗಳನ್ನೂ ಕಳೆದುಕೊಂಡವನಾಗಿ ಈ ಮಂಡಲಾರಾಧನೆಗೆ ವಿಧಿವತ್ತಾಗಿ ದೀಕ್ಷೆಯನ್ನು ಪಡೆಯುವನು. ಇದರಲ್ಲಿ ಹೇಳಲ್ಪಟ್ಟಿರುವ ಸಕಲ, ನಿಷ್ಕಲ, ಸಕಲನಿಷ್ಕಲ ರೂಪವಾದ ಎಲ್ಲಾ ದೇವತಾ ಸ್ವರೂಪವೂ ಧ್ಯಾನಕ್ಕೆ ಯೋಗ್ಯವಾದದ್ದೇ. ಇದರಲ್ಲಿ ಕಂಡುಬರುವ ಸಕಲ ವಿಷಯಗಳೂ ಜ್ಞೇಯವಾದವುಗಳೇ. ಇದನ್ನು ಅನುಸಂಧಾನಮಾಡುವವರು ಯೋಗಮಾರ್ಗದಲ್ಲಿ ನಿಷ್ಣಾತರೆನಿಸಿ, ಅದೇ ಮಾರ್ಗಾವಲಂಬನೆಯಿಂದ ಈ ವಿಷಯ

ನಿಷ್ಕಲಂ ಸಕಲಂ ಚೈವ ತಥಾ ಸಕಲನಿಷ್ಕಲೇ ।
ಧ್ಯಾನಂ ಜ್ಞೇಯಂ ಚ ಯೋಗಶ್ಚ ಸರ್ವಮೇತಸ್ಯ ಕೀರ್ತಿತಂ ॥ ೧೩ ॥

ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇಷಟ್ಪಂಚಾ
ಶತ್ತಮೋಽಧ್ಯಾಯೇ ತೃತೀಯಂಪಟಲಂ.

---

ಗಳೆಲ್ಲವನ್ನೂ ಸಾಧಿಸಿ ತನ್ಮೂಲಕ ಸಿದ್ಧಿಯನ್ನು ಪಡೆಯುವರು. ಆದ್ದರಿಂದ ಸಕಲಕ್ಕೂ ಮೂಲಭೂತವಾಗಿರುವ ಈ ಹೃದಯಪದ್ಮದ ಜ್ಞಾನವು ಸಕಲರಿಗೂ ಅತ್ಯವಶ್ಯಕ.

ಇಲ್ಲಿಗೆ ಶ್ರೀ ಸಾಂಬಪುರಾಣದ ಐವತ್ತಾರನೆಯ ಅಧ್ಯಾಯದಲ್ಲಿ
ತೃತೀಯಪಟಲವು ಸಮಾಪ್ತವಾದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಸಪ್ತಪಂಚಾಶತ್ತಮೋಽಧ್ಯಾಯಃ

---

ತತ್ತ್ವಜ್ಞಾನಮಹಂ ವಕ್ಷ್ಯೇ ಬೀಜಾನ್ಯೇತಾನ್ಯತಃ ಪರಂ ।
ಅನಾದಿನಿಧನಂ ಜ್ಞಾನಂ ಗುಹ್ಯಾದ್ಗುಹ್ಯತರಂ ಚ ಯತ್ ॥ ೧ ॥

ಆಸೀದಿದಂ ಸಮಗ್ರಂ ಚ ತತಾನ್ಯೈತದಜಾಯತ । (?)
ತಸ್ಮಾದ್ಧರ್ಮವತೀ ಕಾಮೋ ಜಜ್ಞೇ ವ್ಯಾಹಾರಸಂಪ್ರತಿ ॥ ೨ ॥

ವಿವಕ್ಷಿತಂ ತ್ವಹಂ ಪ್ರೋಷ್ಠಂ ವಿವೃತಂ ನ ಚ ಸಂವೃತಂ ।
ಪ್ರಾದುರಾಸೀದವರ್ಣೋಽಸ್ಮಾತ್ತಸ್ಯ ಸಂಹಾರಮಿಚ್ಛತಃ ॥ ೩ ॥

---

## ಐವತ್ತೇಳನೆಯ ಅಧ್ಯಾಯ

೧-೨. ಇಲ್ಲಿನವರೆಗೂ ಬೀಜವರ್ಣಗಳ ವಿಷಯವನ್ನು ತಿಳಿಸಿ ಇನ್ನು ಮುಂದೆ ತತ್ತ್ವಜ್ಞಾನ ವಿಷಯವನ್ನು ವಿವರಿಸುವೆನು. ಈ ತತ್ತ್ವಗಳು ಆದ್ಯಂತ ರಹಿತ ವಾದವುಗಳು. ಅತ್ಯಂತ ಗೋಪ್ಯವಾದವುಗಳು. ಇವನ್ನು ಸಂಪೂರ್ಣವಾಗಿ ಅರಿಯಲು ಸಾಧ್ಯವಾದರೆ, ಇದರಿಂದ ಒಂದು ಧರ್ಮಜ್ಞಾನವೂ ವ್ಯವಹಾರ ಜ್ಞಾನವೂ ಲಭಿಸು ವುದರಲ್ಲಿ ಅನುಮಾನವಿಲ್ಲ.

೩-೪. ವಿವೃತವಾದ ಓಷ್ಠ ಪ್ರಯತ್ನದಿಂದ ಹುಟ್ಟುವ ಉಕಾರವು ಅವರ್ಣ, ಇವರ್ಣ ಇವುಗಳ ಅನಂತರ ಜನಿಸುವುದು. ಇದು ಜಿಹ್ವಾಪ್ರಯತ್ನದಿಂದ ಹುಟ್ಟುವು

ಸ ತಮುಗಾಚ್ಛ ಜಿಹ್ವಾಯಾಂ ಮಧ್ಯೇ ಪ್ರಕೃತಿಸಂಭವಃ ।
ಇವರ್ಣೋऽವರ್ಣಸಂಹಾರಾತ್ ಉವರ್ಣೋಭೂನ್ಮನಸ್ತತಃ ॥ ೪ ॥

ತದಂತೇ ಬಿಂದುಸಂಭೂತಿಃ ಸರ್ವಾಂತಃಪ್ರಭುಶಾಶ್ವತಃ ।
ವಾಯೋರ್ನಿರ್ಧಾರಣಾತ್ಕಂಠೇ ಹಕಾರಃ ಸವಿಸರ್ಗಕಃ ॥ ೫ ॥

ಅಹಯೋ ಚೋತ್ತರೇ ಜ್ಞೇಯೋ ವರ್ಣಾನಾಂ ಸಂಭವಃ ಸ್ವಯಂ ।
ಅವರ್ಣೋಪರಯೋಗೇಸ್ಯಾದೇಕಾರಸ್ತ್ವನುಲೋಮತಃ ॥ ೬ ॥

ವಿಲೋಮತೋ ಯಕಾರಸ್ಸ್ಯಾತ್ತಥೋಕಾರವಕಾರಯೋಃ ।
ತೃತೀಯಯೋಗತೋ ಜ್ಞೇಯೋ ವ್ಯೋಕಾರಸ್ಯ ತು ಸಿದ್ಧಯೇ ॥ ೭ ॥

ಹ್ರಸ್ವದೀರ್ಘಪ್ಲುತಾ ಹ್ಯೇತೇ ನ ಚೋಕಾರಸಮಾನಜಾಃ ।
ಋಕಾರಕಾರವಲ್ಕಾರಾಃ ಸ್ವರಜಿಹ್ವಾಗ್ರಕಾರಿತಾಃ ॥ ೮ ॥

---

ದೆಂದು ತಿಳಿಯಬೇಕು. ಅ, ಇ, ಉ ವರ್ಣಗಳು ಕ್ರಮವಾಗಿ ಹುಟ್ಟಿ, ಪ್ರಣವವೆನಿಸಿ, ಮನಸ್ತತ್ತ್ವಕ್ಕೆ ಮೂಲ ಭೂತಗಳಾಗಿರುತ್ತವೆ.

೫. ಈ ಅಕಾರಾದಿ ವರ್ಣತ್ರಯಗಳಿಗೆ ಬಿಂದು ಸಂಬಂಧವಾಗುವುದರಿಂದಲೇ ಇವು ಕೆಲವು ಮೂಲಮಂತ್ರಗಳೆನಿಸಿಕೊಳ್ಳುವುವು. ಕಂಠದಲ್ಲಿ ವಾಯುಧಾರಣೆ ಮಾಡುವುದರಿಂದ ಅಕಾರ, ಕವರ್ಗ, ಹಕಾರ, ವಿಸರ್ಗ ಇವುಗಳು ಹುಟ್ಟುವುವು ಎಂದು ತಿಳಿಯಬೇಕು.

೬-೭. ವರ್ಣೋತ್ಪತ್ತಿ ಕ್ರಮವನ್ನು ಉಚ್ಚಾರಣೆಯ ಮಾರ್ಗದಿಂದ ಊಹಿಸಿ ತಿಳಿಯಬೇಕು. ಅವರ್ಣೋಚ್ಚಾರಣೆಗೆ ಸಹಿತವಾಗಿಯೇ ಏಕಾರವೂ, ವಿಲೋಮವಾಗಿ ಯಕಾರವೂ ಹಾಗೆಯೇ ಉಕಾರ ವಕಾರಗಳೂ ಸಂಭವಿಸಿ, ತೃತೀಯಾಕ್ಷರ ಯೋಗದಿಂದ ಅಂದರೆ ವರ್ಣತ್ರಯಾತ್ಮಕವಾಗಿ ವ್ಯೋಕಾರವು ನಿಷ್ಪನ್ನವಾಗಿರುವುದು.

೮-೯. ಓಂಕಾರೋತ್ಪತ್ತಿಯ ಕಾಲದಲ್ಲಿಯೇ ಹ್ರಸ್ವ ದೀರ್ಘಪ್ಲುತಗಳ ಆವಿರ್ಭಾವವಿರಲಿಲ್ಲ. ಋಕಾರದಿಂದ ಅರ್ಕಾರವೂ, ಲಕಾರದಿಂದ ಅಲ್ಕಾರವೂ,

ಇಷ್ಟಾವೀಶತ್ಪ್ರವಿಷ್ಟೌ ಚ ಸಂಹತೌ ಚ ಹನುಂ ಯದಾ ।
ಜಿಹ್ವಾಮಧ್ಯಸ್ಥನಾನಾಭ್ಯಾಂ ಹನ್ವೋರಂತರದರ್ಶನಾತ್ ॥ ೯ ॥

ತಾಲ್ವಾ ವೈಕಾರಸಂಭೂತಿರಕಾರಾದ್ದಗ್ಧಸಿದ್ಧಯೇ ।
ಅಕಾರೈಕಾರಯೋರಾದಿರೀಕಾರಾರ್ಧಂ ಚ ಪೂರ್ವಕಃ ॥ ೧೦ ॥

ಜಿಹ್ವಾಮೂಲೇ ಚ ಹನ್ವೋಃ ಸ್ಯಾತ್ಸ್ಪರ್ಶನಂ ಕಾದಿಕೇ ಗಣೇ ।
ಮಧ್ಯೇ ತಾಲುಂ ಸ್ಪೃಶೇದ್ಯಚ್ಚ ವೇಷ್ಟಯಿತ್ವಾ ತೃತಿಯಕಾಃ ॥ ೧೧ ॥

ಮೂರ್ಧನ್ಯದೇವತಾನಾಂ ಚ ಚತುರ್ಥೇ ಶಿವಮೂಲತಃ ।
ಓಷ್ಠಾಭ್ಯಾಂ ಪಂಚಮಸ್ಯಾಥ ತತ್ವಸ್ಪರ್ಶಃ ಸಬೀಜಕಃ ॥ ೧೨ ॥

ಕರವಂದ್ಯಪಾತ್ರಸ್ಯಾಹೇಕ್ಕೈಕಾವದ್ಭವೇತ್ತತಃ ।
ದಂತಮೂಲೋ, ಲಕಾರಃ ಸ್ಯಾಚ್ಚತುರ್ಥಶ್ಚೋಷ್ಠದಂತಗಃ ॥ ೧೩ ॥

---

ಹೀಗೆ ಸ್ವರಗಳಿಂದ ಕೆಲವು ವ್ಯಂಜನಗಳು ಪ್ರಾದುರ್ಭವಿಸಿದುವು. ವರ್ಣೋತ್ಪತ್ತಿ ಸ್ಥಾನಗಳು ಈ ಪತ್ಪ್ರವಿಷ್ಟಗಳಾದ ಜಿಹ್ವಾಗ್ರಗಳು, ಒಟ್ಟುಗೂಡಿದ ಹನು, (ದವಡೆ) ಜಿಹ್ವಾಮಧ್ಯಭಾಗದಲ್ಲಿ ಸೇರುವ ದಶನಭಾಗಗಳು, ಇವುಗಳಿಂದ ವರ್ಣಗಳು ಉದಯಿಸುವುವು.

೧೦-೧೫. ವರ್ಣೋತ್ಪತ್ತಿಸ್ಥಾನಗಳಿಗೆ ವರ್ಣಯೋನಿಯೆಂದು ವ್ಯವಹಾರ. ಆದ್ಯಂತರಹಿತನೂ, ಅಕ್ಷರಪದವಾಚ್ಯನೂ, ಆದ ಪರಮಾತ್ಮನು ಶಾಶ್ವತವಾದ ವರ್ಣ ಸಮುದಾಯವನ್ನು ಸೃಷ್ಟಿಸಲು, ಅದಕ್ಕೆ ತಕ್ಕ ಉತ್ಪತ್ತಿಸ್ಥಾನಗಳನ್ನು ಪ್ರತಿಯೊಂದು ಮಾನವದೇಹದಲ್ಲಿಯೂ ಕಲ್ಪಿಸಿದನು. ತಾಲು (ಅಂಗುಳು) ಈ ಭಾಗವು ಇಕಾರಕ್ಕೆ ಉತ್ಪತ್ತಿಸ್ಥಾನ. ಆ. ಐ. ಕಾರಗಳಿಗೆ ಮೂಲಭೂತವಾದದ್ದು ಅಕಾರವೇ. ಅದ್ದರಿಂದ ಐಕಾರಕ್ಕೆ ಕಂಠತಾಲುವು ಮೂಲಸ್ಥಾನವಾಯಿತು. ಹಾಗೆಯೇ ಜಿಹ್ವಾಮೂಲ,

ಊಷ್ಮಾಣಶ್ಚ ಗಕಾಸ್ತ್ವಾನ್ಯೈ ಪ್ರಥಮಾ ಮಧ್ಯಮಾಸ್ತಥಾ ।
ನಪುಂಸಕಾಭವಂಶ್ಚೇತೇ ನಾಸಿಕಾಶ್ಚ ಭವಂತಿ ಹಿ ॥ ೧೪ ॥

ಏತೇ ಅನಾದಿನಿಧನಸ್ಯ ಸಿಸೃಕ್ಷೋಶ್ಚಾವ್ಯಯಂ ಮಹತ್ ।
ವಿದ್ಯಾತಂತ್ರವಿವೃದ್ಧ್ಯರ್ಥಮೇಭ್ಯೋ ಯೋನಿಂ ಚಕಾರ ಸಃ ॥ ೧೫ ॥

ಅ ಆ ಇ ಈ ಉ ಊ ಋ ೠ ಌ ೡ
ಏ ಐ ಓ ಔ ಅಂ ಅಃ (ಷೋಡಶಸ್ವರಾಃ)
ಕ ಖ ಗ ಘ ಙ
ಚ ಛ ಜ ಝ ಞ
ಟ ಠ ಡ ಢ ಣ
ತ ಥ ದ ಧ ನ
ಪ ಫ ಬ ಭ ಮ
ಏತೇ ಸ್ಪರ್ಶಾಃ

ಯರಲವಾ ಅಂತಃಸ್ಥಾಃ
ಕ ಖ ಗ ಘ ಏತೆ ಯಮಾಃ
ನಪುಂಸಕಾಶ್ಚ ತೃತೀಯೋಧ್ಯಾಯೋ ಏತತ್ಸಿದ್ಧಂ-
ಇತಿ ಸಾಂಬಪುರಾಣೇ ಸಪ್ತಪಂಚಾಶತ್ತಮೋಽಧ್ಯಾಯ.

---

ದವಡೆ, ಮುಂತಾದ ಸ್ಥಾನಗಳಲ್ಲಿ ಹಲಕೆಲವು ವರ್ಣಗಳು ಉತ್ಪತ್ತಿಯಾಗುವುವು. ಅದರಲ್ಲಿ ಕಕಾರಾದಿಯಾದ ಐದು ವರ್ಗಗಳಲ್ಲಿ ಪ್ರಥಮತೃತೀಯಾಕ್ಷರಗಳು.

ಇವು ಸರ್ವಾವಯವಸ್ಪರ್ಶದಿಂದ ಹುಟ್ಟತಕ್ಕವುಗಳು

ಅಂತಃಸ್ಥಗಳು ಅಂದರೆ ಅರ್ಧವ್ಯಂಜನ, ಅರ್ಧಸ್ವರ ಎಂದು ಹೇಳಲ್ಪಟ್ಟಿರತಕ್ಕವುಗಳು.

ಕ ಖ ಗ ಘ ಈ ಅಕ್ಷರಗಳು ಕಠಿಣವರ್ಣಗಳೆನಿಸಿ ಯಮಸಂಜ್ಞೆಯನ್ನು ಪಡೆದಿರುವುವು.

ಇಲ್ಲಿಗೆ ೫೭ನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಅಷ್ಟಪಂಚಾಶತ್ತಮೋಽಧ್ಯಾಯಃ

---

ಸ್ವರಾವಾದ್ಯೌ ಚತುರ್ಥಾಶ್ಚ ಊಷ್ಮಾ ಚ ಪ್ರಥಮಂ ತಥಾ ।
ಚತ್ವಾರಿಂಶ್ಚೋತ್ತರಂ ಜ್ಞೇಯಾಸ್ತೃತೀಯಾಃ ಸ್ಪರ್ಶಸಂಜ್ಞಕಾಃ ॥ ೧ ॥

ದ್ವಿತೀಯಾಂತಶ್ಚತುಷ್ಕಶ್ಚ ಉತ್ತಮಶ್ಚ ತಥೈವ ತು ।
ಚತುರ್ಥಸ್ತ್ರಯಮೇವ ಸ್ಯಾತ್ ತೃತೀಯೌ ದ್ವೌ ತಥೈವ ಚ ॥ ೨ ॥

ದ್ವಿತೀಯಾದ್ಯಸ್ಯ ಚತ್ವಾರಸ್ತೃತೀಯಸ್ಸ್ಯಾದನುನಾಸಿಕಂ ।
ಪಂಚಮಃ ಪ್ರಥಮಶ್ಚ ಸ್ಯಾತ್ತಥಾ ಸ್ಯಾದನುನಾಸಿಕಂ ॥ ೩ ॥

---

## ಐವತ್ತೆಂಟನೆಯ ಅಧ್ಯಾಯ

೧-೨. ಈಗ ನಲವತ್ತು ಅಕ್ಷರಯೋನಿಗಳು ವಿವರಿಸಲ್ಪಡುತ್ತವೆ. ಅದರಲ್ಲಿ ಮೊದಲಿನ ಎರಡು ಸ್ವರಗಳು, ಮೊದಲನೆಯ ಅಕ್ಷರಯೋನಿ. ಹಾಗೆಯೇ ಕ್ರಮವಾಗಿ, ನಾಲ್ಕು ಊಷ್ಮವರ್ಣಗಳು, ಮುಂದಿನ ನಾಲ್ಕುಸ್ವರಗಳು, ಸ್ಪರ್ಶಸಂಜ್ಞಕವಾದ ಅಕ್ಷರಗಳು, ಪ್ರತಿವರ್ಗದ ಆದಿಯ ಎರಡೆರಡು ಅಕ್ಷರಗಳು, ಅನಂತರ ತೃತಿಯ ಚತುರ್ಥಾಕ್ಷರಗಳು, ಚತುರ್ಥಪಂಚಮವರ್ಗಗಳು, ಅನುನಾಸಿಕ ಸಂಜ್ಞಕವಾದ ಐದನೆಯಅಕ್ಷರ, ಇವು ಒಂದೊಂದು ಅಕ್ಷರಯೋನಿಯೆನಿಸುವುದು.

೩-೪. ಹಾಗೆಯೇ ಪ್ರತಿವರ್ಗದ ದ್ವಿತಿಯಾದಿಯಾಗಿ ಪಂಚಮಾಂತವಾಗಿರುವ ನಾಲ್ಕು ಅಕ್ಷರಗಳೂ, ಅನುನಾಸಿಕವರ್ಣವೂ, ಹೀಗೆ ಎಂಟು ಯೋನಿಗಳೂ, ಅದಕ್ಕೆ

**ಚತುರ್ಥೋ ಹ್ಯಷ್ಟಕಶ್ಚೈವ ಯೋನಿಃ ಸಾ ಹಿ ಸುಸ್ಪಷ್ಟಯೇ ।**
**ಚತ್ವಾರೋಽಸ್ಯಾದ್ವಿವರ್ಣಾಃ ಸ್ಸ್ಯುರ್ದೀಪಿತಾ ಬಿಂದುಭಿಸ್ತ್ರಿಭಿಃ ॥ ೪ ॥**

**ದ್ವೀಪಿನೀ ಬೀಜಿನೀ ಹ್ಯೇಷಾ ಪಾವನೀ ಸ್ವರಸಂತತಿಃ ।**
**ನಿತ್ಯಮೇಷಾನುಜಪ್ತವ್ಯಾ ಪರಂ ನಿರ್ವಾಣಮಿಚ್ಛತಾ ॥ ೫ ॥**

**ಆಹಾವಹವ್ಯೋಹವಾ ಭವೇ ಚಾರಿಣೀ ಪರಮಶಕ್ತಿನಾ ।**
**ತಂತ್ರ ಇತಿ ಸ್ಥಿತೋ ಭೂಮಿ ಮಹಾಭೂತ ॥ ೬ ॥**

**ಇತರೇತರಚುಂಬಚುಂಬ ಏತಾ ।**
**ಸಿದ್ಧಾ ಚತ್ವಾರಿಂಶದಕ್ಷರಯೋನಿಃ ॥ ೭ ॥**

**ಇತಿ ಶ್ರೀ ಸಾಂಬಪುರಾಣೇ ಅಷ್ಟಪಂಚಾಶತ್ತಮೋಽಧ್ಯಾಯಃ.**

---

ಬಂದು ಸೇರುವುದರಿಂದ ಮತ್ತೊಂದು ಯೋನಿಗಳೂ, ವಿಸರ್ಗಗಳು ಸೇರುವುದರಿಂದ ಮತ್ತೆಂಟು ಯೋನಿಗಳೂ ಒಟ್ಟುಸೇರಿ ೪೦ ಅಕ್ಷರಯೋನಿಗಳಾಗುವುವು.

೫-೭. ಈ ಸ್ವರಸಮೂಹವು ಸೃಷ್ಟಿಕಾರ್ಯವನ್ನು ಬೆಳಗಿಸತಕ್ಕವುಗಳು. ಸೃಷ್ಟಿಗೆ ಮೂಲಭೂತವಾಗಿರತಕ್ಕವುಗಳು. ಐಹಿಕಾಮುಷ್ಮಿಕಸುಖಗಳನ್ನು ಅಪೇಕ್ಷಿಸುವವನು ಇದನ್ನು ನಿತ್ಯವೂ ಜಪಮಾಡಬೇಕು. ಆಹ, ಆವಹ, ಊಹವ, ಭವ ಚಾರಿಣೀ, ಪರಮಶಕ್ತಿ, ತಂತ್ರ, ಮಹಾಭೂತ, ಇತರೇತರಚುಂಬ, ಚುಂಬ, ಇವು ಅಕ್ಷರಯೋನಿಯ ಅಭಿಮಾದೇವತೆಗಳು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಐವತ್ತೆಂಟನೆಯ
ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕೋನಷಷ್ಟಿತಮೋಧ್ಯಾಯಃ

---

ಪಂಚವಿಂಶತಿಭಿರ್ನಾಮ ಸಪ್ತಧಾ ಕ್ರಮಶಸ್ತಥಾ ।
ಪ್ರಣವಾದಿತ್ರಿಧಾ ಭಿನ್ನಂ ತಸ್ಮಿನ್ನೇವ ಪದೇ ಉಭೇ ॥ ೧ ॥

ಪ್ರಣವಾದಿರ್ನಮೋಂತಃಸ್ಥಃ ಪ್ರಸವಸ್ಸಪ್ತಮಸ್ತು ಸಃ ।
ಏಷಾಮಾದಿಪದಂ ಯತ್ಸ್ಯಾದ್ದ್ವಿತೀಯಾಂ ಶ್ಚೈವ ಯೋಜಯೇತ್ ॥ ೨ ॥

ತಥಾ ಚಾದಿಪದೈಸ್ತತ್ತ್ವಂ ಪ್ರತಿಲೋಮೋ ವಿಧೀಯತೇ ।

---

## ಐವತ್ತೊಂಬತ್ತನೆಯ ಅಧ್ಯಾಯ

೧-೩. ಹಿಂದೆ ಹೇಳಿದ ೨೪ ಅಕ್ಷರಭೇದಗಳಲ್ಲಿ ಪ್ರಣವವೂ ಬಂದು ಸೇರಿದರೆ ಆಗ ಇಪ್ಪತ್ತೈದು ಯೋನಿಗಳಾಗುವುವು. ಅದರಲ್ಲಿ ಏಳು ಏಳು ಯೋನಿಗಳು ಒಂದೊಂದು ಗುಂಪಿನಂತೆ ಮೂರು ಗುಂಪುಗಳೂ, ಉಳಿದ ನಾಲ್ಕುಯೋನಿಗಳು ಎರಡು ಪದಗಳಾಗಿಯೂ ವಿಂಗಡಿಸಲ್ಪಡುತ್ತವೆ. ಅದರಲ್ಲಿ ಮೊದಲನೆಯ ಏಳುಅಕ್ಷರ ಯೋನಿಗಳಿಗೆ ಪ್ರಣವವು ಆದಿಯಲ್ಲಿಯೂ, ನಮಶ್ಶಬ್ದವು ಅಂತ್ಯದಲ್ಲಿಯೂ ಸೇರಿರಬಹುದು. ಇದನ್ನೇ ಆದಿಪದವೆನ್ನುವರು. ಈ ಆದಿಪದಕ್ಕೆ ದ್ವಿತೀಯವಾದ ಸಪ್ತ ಯೋನಿಗಳನ್ನು ಸೇರಿಸಿ ಉಚ್ಚರಿಸಬೇಕು, ಅನಂತರ ಈ ಯೋನಿಗಳನ್ನೇ ಪ್ರತಿ

ಯೋನಿಮುಖ್ಯಾನಿ ಯಾನಿ ಸ್ಸ್ಯುಃ ಸರ್ವಸೃಷ್ಟಿಪ್ರವೃತ್ತಯೇ ॥ ೩ ॥

ಇತಿ ಶ್ರೀ ಸಾಂಬಪುರಾಣೇ ಏಕೋನಷಷ್ಟಿತಮೋಽಧ್ಯಾಯೇ ಜ್ಞಾನೋತ್ತರೇ ಬೀಜಸ್ವರಪ್ರಸವೇ ಷಷ್ಠಂಪಟಲಂ ಸಮಾಪ್ತಂ.

---

ಲೋಮವಾಗಿ ಉಚ್ಚರಿಸುವುದರಿಂದ ಮೂರನೆಯ ಏಳು ಯೋನಿಗಳು ಹುಟ್ಟುವುವು. ಹೀಗೆ ಒಟ್ಟು ೨೫ ಅಕ್ಷರಯೋನಿಗಳು ಸರ್ವಸೃಷ್ಟಿಪ್ರವೃತ್ತಿಗೆ ಮೂಲಕಾರಣಗಳಾಗಿರುತ್ತವೆ.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಐವತ್ತೊಂಬತ್ತನೆಯ ಅಧ್ಯಾಯದಲ್ಲಿ ಜ್ಞಾನೋತ್ತರಖಂಡದ ಬೀಜಸ್ವರಪ್ರಸವವನ್ನು ತಿಳಿಸುವ ಆರನೆಯ ಪಟವು ಸಮಾಪ್ತವಾದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಷಷ್ಟಿತಮೋಧ್ಯಾಯಃ

---

ಧ್ಯಾತವ್ಯ ಏಷ ಯತ್ನಾದ್ಯಃ ಸೇವತೇಽಹ್ಯಖಿಲಂ ಜಗತ್ ।
ಆಹಾವಹೋಽಹವಾಭವೇಽಚಾರಿಣೇ ಪರಮಶಕ್ತಿರಾತ್ಮಾತಂತ್ರ ಇತಿ ಸ್ಥಿತೇ ॥

ಓಂ ಅಂ ಓಂ ಡಂ ಓಂ ವ್ಯೋಮವ್ಯಾಪಿನೇ
ಅನುಷಂಗೇಣ ಸಪ್ತಾನಾಂ ಯಥಾಸಂಖ್ಯೇನ ಸಂಪುಟಃ ।
ಪಾದಾಂತಸ್ಥಬೀಜಾಖ್ಯಾಯೋಽನಯಃ ।
ಓಂ ಅಂ ವ್ಯೋಮವ್ಯಾಪಿನೇ ಓಂ ಇಂ ಆಂ ವ್ಯೋಮ
ಓಂ ಆಂ ಈಂ ಉಂ ವ್ಯಾಪಿನೇವ್ಯೋಮ
ಓಂ ಇಂ ಅಂ ಓಂ ಆಂ ಈಂ ಅಂ
ವ್ಯೋಮವ್ಯಾಪಿನೇ ಭೂತಿರಿತರ ಚುಂಬಚುಂಬ ।
ವರ್ಣಾಯಾಃ ಪ್ರಭೃತಿಸ್ಯಾನ್ಮಯೋಕ್ತಾ ವಿಸ್ತರತಃ ॥ ೨ ॥

---

## ಅರುವತ್ತನೆಯ ಅಧ್ಯಾಯ

೧. ಈಗ ಮುಂದೆಹೇಳುವ ಆಹ, ಆವಹ, ಉವಹ, ಊವಹ, ಅಭವ, ಚಾರಿಣೇ, ಪರಮಶಕ್ತಿ, ಎಂಬ ಮಹಾತಂತ್ರಗಳ ವಿಷಯವನ್ನು ಚೆನ್ನಾಗಿ ಅನುಸಂಧಾನಮಾಡಬೇಕು. ಇದನ್ನು ಸಕಲ ಪ್ರಪಂಚವೇ ಅನುಸರಿಸುವುದು.

೨. ಮೇಲೆ ಹೇಳಿದ ಬೀಜಾಕ್ಷರಗಳೂ ಆಯಾ ಶಕ್ತಿದೇವತೆಗಳನ್ನೂ ಧ್ಯಾನ ಮಾಡುವ ಕ್ರಮವನ್ನು ತಿಳಿಸುತ್ತವೆ.

ಕಾಲಾತ್ಮನಃ ಪ್ರಸೂತಿಂ ತೇ ಮಂತ್ರರಾಜಸ್ಯ ।
ಮುಕ್ತ್ಯರ್ಥಂ ವಕ್ಷ್ಯಂತೇsಥೋ ಯಥಾಶಾಸ್ತ್ರವಿನಿಶ್ಚಯಃ ।
ಚಕ್ರಂ ತ್ರಿನಾಭ್ಯಂ ತತ್ಸರ್ವಂ ಸಂವತ್ಸರಮಿತಿಪ್ರಭುಃ ॥ ೩ ॥

ದ್ವಾದಶಾರಂ ತು ತನ್ಮಾಸೌ ಪ್ರತ್ಯಯಶ್ಚಾರ್ಧಮಾಸಿಕೇಃ ।
ತ್ರೀಣಿ ಷಷ್ಟಿಶತಾನ್ಯಾಹುರಹೋರಾತ್ರಾಣಿ ಸಂಕರಃ ॥ ೪ ॥

ಕಲಾಮುಹೂರ್ತಾ ದಂಡಾಶ್ಚ ನಿಮಿಷಾಸ್ತು ಪ್ರತಿಷ್ಠಿತಾಃ ।
ತದ್ವರ್ಧನ್ಯಾ ತಿವಿಶ್ವಾತ್ಮಾ ವ್ಯಂಜಯಚ್ಛಬ್ದದೇಹಿನಾಂ ॥ ೫ ॥

ಸಪ್ತಕೇಃ ಪಂಚಭಿರ್ಯುಕ್ತೈಃ ಪರಿತೋ ಬಿಂದುಭಿರ್ಯುತಃ ।
ಪುನಃ ಷೋಡಶಭಿರ್ನದ್ಯಾ ತ್ರಿನಾಭೀತ್ಯುಚ್ಯತೇ ಬುಧೈಃ ॥ ೬ ॥

ದ್ವಿತೀಯಂ ಸಪ್ತಭಿಃ ಪ್ರೋಕ್ತಂ ಪರಂ ಯಚ್ಚ ಪ್ರಭಾಷತೇ ।
ನಾಭಿಗರ್ಭೇ ಸ್ಥಿತಂ ಸಪ್ತಯೋನಿಂ ವಿಷ್ಟಭ್ಯ ಸೂಚಿಕಾಂ ॥ ೭ ॥

---

೩. ಈಗ ಮಂತ್ರರಾಜನೆನಿಸಿದ ಕಾಲಾತ್ಮನ ಪ್ರಸೂತಿವಿಷಯಕವಾದ ಶಾಸ್ತ್ರ ವಿನಿಶ್ಚಯವನ್ನು ಈಗ ಸಂಕ್ಷೇಪವಾಗಿ ಹೇಳುವೆನು. ಕಾಲಚಕ್ರವು ತ್ರಿನಾಭಿ ಯುಳ್ಳದ್ದು. ಅದಕ್ಕೆ ಸಂವತ್ಸರವೇ ಪ್ರಭುವು.

೪-೬. ಈ ಕಾಲಚಕ್ರಕ್ಕೆ ದ್ವಾದಶಕೋಣಗಳೇ ಮಾಸಗಳು. ಚತುರ್ವಿಂಶತಿ ಪ್ರತ್ಯಯಗಳೇ ಪಕ್ಷಗಳು. ಮುನ್ನೂರಅರುವತ್ತುಮೂರು ಮನೆಗಳೇ ಅಹೋರಾತ್ರ ಗಳು. ಕಲಾ, ಮುಹೂರ್ತಾ, ನಿಮಿಷ ಇವೆಲ್ಲವೂ ದಂಡಾತ್ಮನಾಪರಿಣತವಾಗಿರುವುವು. ಶಬ್ದದೇಹಿಗಳಲ್ಲಿ ಕಂಡುಬರುವ ಸಪ್ತಸ್ವರಗಳೂ, ಪಂಚಪ್ರಾಣಗಳೂ ಬಿಂದು ರೂಪವಾಗಿ ತೋರುವುವು. ಮಧ್ಯೆ ಇರುವ ಷೋಡಶ ಬಿಂದುಗಳಿಗೆ ತ್ರಿನಾಭಿ ಎಂಬ ಹೆಸರಿರುವುದು.

೭-೮. ದ್ವಿತೀಯನಾಭಿಯಲ್ಲಿ ಏಳು ಬಿಂದುಗಳೂ, ನಾಭಿ ಗರ್ಭದಲ್ಲಿ ಸಪ್ತ

ತ್ರಿಶತಂ ನವಭಿಃ ಷಟ್ಕಂ ವರ್ಣಾಸ್ತೇ ಸ್ವರಕೇ ಸ್ಥಿತಾಃ ।
ಗ್ರಹನಕ್ಷತ್ರಗರ್ಭಾಂ ತಾಂ ಯೋನಿಂ ವಿಷ್ಟಭ್ಯ ಪೂರ್ವಿಕಾಂ ॥ ೮ ॥

ತ್ರಿಶತಂ ನವತಿತ್ರೀಣಿ ಗಣನಾ ಕೀರ್ತ್ಯತೇಧುನಾ ।
ಅರೇಷು ಶಬ್ದಾಃ ಪರ್ಯಾಪ್ತಾಸ್ತೇಷು ವಿಂಶತ್ಪ್ರತಿಷ್ಠಿತಾಃ ॥ ೯ ॥

ಚತುರ್ವಿಂಶತಿಸಂಖ್ಯಾಕಾ ವರ್ಧಯಂಸ್ತೇಷು ಚಾರ್ಪಿತಾಃ ।
ಭೇದಾಃ ಷೋಡಶಸ್ಪ್ರಾಪ್ತ್ಯೈಷಾಂ ದ್ವಿಧಾ ಯೋನಿಶ್ಚ ಮಧ್ಯಮಾ ॥ ೧೦ ॥

ತ್ರಿಂಶದ್ವೇ ಷಟ್ ಚ ಯಾಃ ಪ್ರೋಕ್ತಾಃ ಪಂಚಾನಾಂ ದ್ವಿಗುಣಾಪದ್ಯೈಃ ।
ವಿದ್ಯೇಶ್ವರಪ್ರಸೂತ್ಯರ್ಥಂ ಲಕ್ಷಮಧ್ಯೇ ಭಜೇತ ಸಾ ॥ ೧೧ ॥
ಕಾರಿಕಾಪರಶುಶಕ್ತ್ಯರೇತೇ ಸಪ್ತಹೃದಯೇ ಸಿದ್ಧಾಃ ।

ಓಂ ಅಂ ಈಂ ಊಂ ವ್ಯೋಮವ್ಯಾಪಿನೇ ।
ಓಂ ಏತೇ ಪಂಚವಿದ್ಯೇಶ್ವರಪ್ರಸ್ತಾವೇ ಸಿದ್ಧಾಃ ।

---

ಯೋನಿಗಳೂ, ಅದರಲ್ಲಿ ೩೯೬ ವರ್ಣಗಳೂ, ಸ್ವರಗಳೂ, ಸಕಲಗ್ರಹಗಳೂ, ನಕ್ಷತ್ರಗಳೂ ಅಡಗಿರುವುವು.

೯-೧೦. ಈ ಚಕ್ರದಲ್ಲಿ ಕಂಡುಬರುವ ೩೯೩ ಅರಗಳಲ್ಲಿ (ಕೋಣಗಳಲ್ಲಿ) ನಿಖಿಲ ಅಕ್ಷರಗಳೂ ಅಡಗಿರುವುವು. ಅವುಗಳಲ್ಲಿ ೨೪ ತತ್ವಗಳನ್ನೂ ಇಪ್ಪತ್ತುಬಾರಿ ವೃದ್ಧಿಹೊಂದುವಂತೆ ಮಾಡಿ ನಿರೂಪಿಸಬೇಕು. ಹೀಗೆ ಮಧ್ಯಯೋನಿಯು ಹದಿನಾರು ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ.

೧೧. ಇನ್ನು ವಿದ್ಯೇಶ್ವರೋತ್ಪತ್ತಿಗಾಗಿ, ಸಕಲಶಕ್ತಿ ವಿದ್ಯಾಪ್ರಾಪ್ತಿಗಾಗಿ, ಈ ಕೋಣಗಳಲ್ಲಿ ೩೦- ೨- ೬. ಈ ಅಕ್ಷರಗಳನ್ನು ದ್ವಿಗುಣಿತವಾಗಿ ಲಕ್ಷಸಂಖ್ಯೆಯಲ್ಲಿ ಕಾರಿಕಾ, ಪರಶು, ಶಕ್ತ್ಯಾತ್ಮಕಗಳೆಂದು ಭಾವಿಸಿ ಮುಂದೆ ಹೇಳಿದಂತೆ ಉಚ್ಚರಿಸಬೇಕು.

ಈ ಐದು ಬೀಜಾಕ್ಷರಗಳು ವಿದ್ಯೇಶ್ವರ ಪ್ರಸ್ತಾವದಲ್ಲಿ ಪ್ರಸಿದ್ಧವಾದವುಗಳು.

ಅ ಆ ಇ ಈ ಉ ಊ ಋ ೠ

ಌ ೡ ಏ ಐ ಓ ಔ ಅಂ ಅಃ

ಕ ಖ ಗ ಘ ಙ

ಚ ಛ ಜ ಝ ಞ

ಟ ಠ ಡ ಢ ಣ

ತ ಥ ದ ಧ ನ

ಪ ಫ ಬ ಭ ಮ

ಯ ರ ಲ ವ ಶ ಷ ಸ ಹ ಅಕಾರಾಸಿತಾಃ

ಸ್ಪರ್ಶಜ್ಞಾನೇ ಸಿದ್ಧಾಃ ತ್ರಯಸ್ತ್ರಿಂಶತ್ ।

ಆಹವಪ್ರತಿಮಧ್ಯೇ ಆಸನಂ ಬೋದ್ಧವ್ಯಂ

ಏಷಾ ಪ್ರಥಿಪ್ರಥಮಾ ಸಿದ್ಧಾ

ಓಂ ಓಂ ಓಂ ಓಂ ದ್ವಾದಶೇಷ್ವಪಿ ಬೋದ್ಧ

ವ್ಯಃ ಕೇವಲಂ ವರ್ಣಭೇದಃ

ಪೃಥಗೇಷಾ ಮೇಷಾ ಭವತಿ

ಅತಃ ಪ್ರಸಿದ್ಧಃ ಪ್ರಕೃತಕಾರಣಾತ್

---

ಈ ಹದಿನಾರು ಅಕ್ಷರಗಳು ತತ್ತ್ವಜ್ಞಾನಕ್ಕೆ ಸಿದ್ಧವಾದವುಗಳು.

ಕಕಾರಾದಿ ಮೂವತ್ತುಮೂರು ಅಕ್ಷರಗಳೂ ಸ್ಪರ್ಶಜ್ಞಾನದಿಂದ ಸಿದ್ಧವಾದವುಗಳು.

ಪ್ರಥಿಪ್ರಥಮೆಯಲ್ಲಿ ಆಹವ ತತ್ತ್ವದ ಮಧ್ಯದಲ್ಲಿ ಆಸನಸ್ಥಾನವನ್ನು ಅರಿಯಬೇಕು. ಆದಿದ್ವಾದಶಾಕ್ಷರಗಳಲ್ಲಿಯೂ, ಪ್ರಣವಮಂತ್ರವನ್ನು ನಾಲ್ಕುಸಾರಿ ಉಚ್ಚರಿಸಿ ಹೇಳುವುದೇ ಈ ಪ್ರಥಮಪ್ರಥಿಸಿದ್ಧವಾದುದು. ವರ್ಣಭೇದದಿಂದ ಮಾತ್ರವೇ ಈ ಮಂತ್ರಭೇದವು ತೋರಿಬರುತ್ತಿರುವುದು. ಆದರೂ ಪೂರ್ವೋಕ್ತಮಂತ್ರಕೂ ಇದಕ್ಕೂ ಮಹಿಮಾದಿಗಳಲ್ಲಿ ವ್ಯತ್ಯಾಸವಿರುತ್ತದೆ.

**ಇತಿ ಶ್ರೀ ಸಾಂಬಪುರಾಣೇ ಷಷ್ಟಿತಮೋಽಧ್ಯಾಯೇ ಜ್ಞಾನೋತ್ತರೇ ಸೋಮಸೂತ್ರೇ ಸಪ್ತಮಂ ಪಟಲಂ.**

---

ಇಲ್ಲಿಗೆ ಶ್ರೀ ಸಾಂಬಪುರಾಣದ ಆರುವತ್ತನೆಯ ಅಧ್ಯಾಯದಲ್ಲಿ
ಜ್ಞಾನೋತ್ತರಭಾಗದ ಸೋಮಸೂತ್ರದಲ್ಲಿ
ಏಳನೆಯಪಟವು ಸಮಾಪ್ತವಾದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕಷಷ್ಟಿತಮೋಧ್ಯಾಯಃ

---

ತ್ರಿನಾಭ್ಯನಂತಸಂಭೂತಂ ಬೀಜಿನಂ ಪ್ರಥಮಂ ಪದಂ ।
ಪ್ರತಿಮಧ್ಯೇಷು ಸರ್ವೇಷು ಸ್ಥಿತಂ ಚಾಪರಮಂ ಪದಂ ॥ ೧ ॥

ಸಂಪೃಕ್ತೌ ವಾಯವ್ಯೇಶಾನ್ಯಾವೋಂಕಾರೇಣ ಪ್ರದೀಪಿತೌ ।
ಅಕಾರಾಂತೋ ಮಕಾರಃ ಸ್ಯಾದ್ದಿಶಿ ಸರ್ವತ್ರ ನಿಷ್ಠಿತಃ ॥ ೨ ॥

(?) ಪೂರ್ವವಚ್ಚ್ಛವದೀರ್ಘಾಂತೋ ನೈಋತಿಂ ದಿಶಮಾಸ್ಥಿತಃ ।
ಇಕಾರಾಂತಃ ಪಕಾರೋಽಥ ವಾಯವೀಂ ದಿಶಮಾಶ್ರಿತಃ ॥ ೩ ॥

ಏಕಾರಾಂತೋ ನಕಾರಃಸ್ಯಾದೈಶಾನ್ಯಾಧಿಷ್ಠಿತೋಬಹಿಃ ।
ಆದ್ಯೋ ವೈ ದಕ್ಷಿಣಸ್ತಸ್ಯ ದ್ವಿತೀಯಸ್ತಸ್ಯ ದಕ್ಷಿಣಃ ॥ ೪ ॥

---

## ಅರವತ್ತೊಂದನೆಯ ಅಧ್ಯಾಯ

೧-೨. ತ್ರಿನಾಭಿಗಳಲ್ಲಿ ಮೊದಲನೆಯ ಪದವೇ ಬೀಜಮಂತ್ರಾತ್ಮಕವಾದದ್ದು· ಅದರಲ್ಲಿ ಮಧ್ಯನಾಭಿಯಲ್ಲಿಯೇ ಸಕಲ ಬೀಜಾಕ್ಷರಗಳಿಗೂ ಸ್ಥಾನವಿರುವುದು. ವಾಯುವ್ಯ ಈಶಾನ್ಯ ಕೋಣಗಳಲ್ಲಿ ಓಂಕಾರವೂ, ಉಳಿದ ದಿಕ್ಕುಗಳಲ್ಲಿ ಅಕಾರಾಂತವಾದ ಮಕಾರವೂ ಇರುವುದು.

೩-೪. ನೈರುತ್ಯಭಾಗದಲ್ಲಿ ಅವಶಬ್ದವನ್ನೂ ದೀರ್ಘಾಂತವಾಗಿಯೂ. ವಾಯುವ್ಯದಲ್ಲಿ ಇಕಾರ ಪಕಾರಗಳನ್ನೂ, ಎರಡನೆಯ ಪ್ರಾಕಾರಗಳಲ್ಲಿಯೂ ಊಕಾರ, ರೇಫಗಳನ್ನ ಮೂರನೆಯ ಪ್ರಾಕಾರದಲ್ಲಿಯೂ ರಚಿಸಬೇಕು. (?)

ಪುನರಷ್ಟೌ ಸ್ಥಿತಾ ಬಾಹ್ಯಾನ್ಯಕರಸ್ತು ದ್ವಿತೀಯಕೇ ।
ಊಕಾರೋ ವಾ ತಥಾ ರೇಫಸ್ತೃತೀಯಂ ಪದಮಾಶ್ರಿತಃ ॥ ೫ ॥

ಅಕಾರಾದ್ದೀಪಿತಶ್ಚೈವ ಪಕಾರೋನ್ಯೈಃಸ್ಪೃತೇ ಪದೇ ।
ತಸ್ಯೋತ್ತರೇ ಪಕಾರಸ್ಸ್ಯಾದ್ದ್ವಿತೀಯಂ ಪದ್ಮಮಾಶ್ರಿತಃ ॥ ೬ ॥

ಬಿಂದುರೇವಮಧಃ ಪೂರ್ವಪಕ್ಷಂ ಚ ಪೂರಯೇಚ್ಛುಭಂ ।
ಪೂರ್ವಪಕ್ಷೋ ಯಥಾ ಹ್ಯೇಷ ತದ್ವದೇವೋತ್ತರೋ ಭವೇತ್ ॥ ೭ ॥
ಭೇದಸ್ತ್ವಕ್ಷರಯೋರ್ನ ಸ್ಯಾತ್ ಅಕ್ಷರೇ ತಸ್ಯ ನಿಶ್ಚಯಃ । ॥ ೮ ॥

ಅಕಚಟ ತಪಯಶವರ್ಗಾಃ
ಆವಹ ಆಧಸ್ತಾದ್ವ್ಯೋಮ ಅಯ ಮುಪರಿಷ್ಟಾತ್ ।
ಓಂ ಅವಯ ಅಮ
ಅವಯ ಇಮ
ತನಸಚಯ ಅಮ
ಉವಯ
ಅಮಯಜರ ಆಯ
ಅಯ ಆಸಅರವ ಆ ವಯ
ಷೋಡಶತ್ವಂ ವ್ಯೋಮ ವ್ಯಾಪಿನೇ
ವ್ಯೋಮ ವ್ಯೋಮರೂಪಾಯ
ಸರ್ವವ್ಯಾಪಿ ಪೂರ್ವಪಕ್ಷಃ ಸಿದ್ಧಃ ಪ್ರಥಮಾ ಪ್ರಥಿ

ಏನಸಾ ವಾಸ್ತು ವಿಜ್ಞೇಯಾ ಮಧ್ಯಮಸ್ಯ ವಿದಿಕ್ ಸ್ಥಿತಾಃ ।
ಇಕಾರಾಂತೋಯಶೌಚಾಪಿ ತಜ್ಜಾರಪುರುಷಃ ಸ್ಮೃತಾ ॥ ೯ ॥

---

೫-೮. ದ್ವಿತೀಯ ತೃತೀಯ ಪದಗಳಲ್ಲಿ ಮೇಲೆ ಹೇಳಿದಂತೆ ಅಕ್ಷರವಿನ್ಯಾಸ ಮಾಡಬೇಕು. ಇದರಲ್ಲಿ ಪೂರ್ವಪಕ್ಷವೇ ಬಿಂದು. ಉತ್ತರಪಕ್ಷವೇ ಅಕ್ಷರಗಳು. ಈ ಪಕ್ಷದ್ವಯಗಳಿಗೆ ಪರಸ್ಪರ ಭೇದವಾವುದೂ ಇಲ್ಲ.

೯-೧೦. ಮೇಲೆ ಹೇಳಿದ ಮಂತ್ರಾಕ್ಷರಗಳನ್ನು ಅಲ್ಲಿ ಭಾವಿಸಬೇಕು. ಅದರಲ್ಲಿ ಇಕಾರಾಂತವಾಗಿರುವ ಅಕ್ಷರಗಳು ಅಶುಚಿಯಾದ ಅವಸ್ಥೆಯಲ್ಲಿ ಜಾರಪುರುಷ ಎಂಬ ಅರ್ಥವನ್ನು ಕೊಡುವುವು. ಅನಂತರ ಐಕಾರ, ಆದಿಸ್ವರಗಳು, ನಕಾರ, ಇವು

ಐಕಾರೋಥ ಸ್ವರಶ್ಚಾದ್ಯೌ ನಕಾರೋ ಬಿಂದುದೀಪಿತಃ ।
ದೀರ್ಘಾಂತಃ ಪ್ರಥಮಸ್ತಸ್ಯ ಪಶ್ಚಾದ್ಯಶ್ಚಾಯತಶ್ಚನಃ ॥ ೧೦ ॥

ಥಕಾರಶ್ಚ ಯಕಾರಸ್ಸ್ಯಾತ್ಪ್ರಕೃತಃ ಸ್ವರ ಏವ ಚ ।
ತಕಾರ ಆಯತಶ್ಚೈವ ವಿಸರ್ಗಸ್ಸರ್ವತೋ ಮತಃ ॥ ೧೧ ॥

ಯಹವಾ ಅಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಭಾಷಾ ಐನ ಇಶಾಂ ಭವಂ ಅಯ
ಅ ಆ ಐ ಆಥ ಆಯ ಅ ಆ ನ ಷೋಡಶೋವಿಸರ್ಗಃ
ವ್ಯಾಪಿನೇ ಶಿವಾಯ ಅನಂತಾಯ ಅನಾಥಾಯ ಅನಾಥೋ ಮಧುಮಾಸಃ
ಪ್ರಥಮೋರಸಿದ್ಧಾ ದ್ವಿತೀಯಾ ಪ್ರಧಿಃ
ರೇಫಾಂತಸ್ಥಃ ಪ್ರಕೃತ್ಯಂತಸ್ತಕಾರೋ ದೀರ್ಘಸಂಯುತಃ
ಪಶ್ಚಾತ್ಸ್ಯಾತ್ ಹ್ರಸ್ವ ಊಕಾರೋ
ವಕಾರಶ್ಚ ತಥಾ ಮತಃ ॥ ೧೨ ॥

---

ಬಿಂದುವಿನಿಂದ ಕೂಡಿಯೂ, ದೀರ್ಘಾಂತವಾಗಿಯೂ ಪ್ರಥಮ ಪ್ರಧಿಯಲ್ಲಿ ಸೇರುವುವು. ಪಶ್ಚಾತ್ ವಿಭಾಗದಲ್ಲಿ ಇವೆಲ್ಲವೂ ದೀರ್ಘಾಂತಗಳಾಗಿಯೇ ಇರುವುವು.

೧೧-೧೨. ದ್ವಿತೀಯ ಪ್ರಧಿಯಲ್ಲಿ ಥಕಾರಯಕಾರಗಳು ಪ್ರಕೃತ ಸ್ವರಗಳು. ನಕಾರ, ಆಯಗಳು ವಿಸರ್ಗಾಂತಗಳು. ಮೇಲೆಹೇಳಿದ ಹದಿನಾರು ಅಕ್ಷರಗಳೂ ವಿಸರ್ಗಯುತಗಳಾಗಿ ವ್ಯಾಪಿ, ಶಿವ, ಅನಂತ, ಅನಾಥ, ಮಧುಮಾಸ ಮುಂತಾದ ದೇವತೆಗಳ ಅರ್ಥಗಳನ್ನು ಕೊಡುವುವು. ಇದನ್ನು ದ್ವಿತೀಯ ಪ್ರಧಿಯಲ್ಲಿ ಬರೆಯಬೇಕು. ಇನ್ನು ತೃತೀಯ ಪ್ರಧಿಗೆ ರೇಫಾಂತಸ್ಥವಾದ ತಕಾರವು ದೀರ್ಘವಾಗಿ ಹ್ರಸ್ವ, ಉಕಾರ, ವಕಾರ, ಅಂ ಇತ್ಯಾದ್ಯಕ್ಷರಗಳು ಸೇರುತ್ತವೆ.

ಯಾದ್ಯಶಾಂತಾಃ ಶಾಶ್ವತಸ್ಸ್ಯರ್ಯಶ್ಚೈವೋಂಕಾರದೀಪಿತಃ ।
ಗಯಶಃ ಸಸ್ವವಿದ್ವಂತ ಈಕಾರಾಂತೋ ದ್ವಿತೀಯಕಃ ॥ ೧೩ ॥

ಅಕಟಚತಪಯಶಾಂತಾಃ ಸರ್ವದ್ವಿತೀಯೇನ
ಚಾಹವಾದ್ಯಾ ಅಧಸ್ತಾದ್ಯೋಕ್ತ್ವಮು ಅಯುವಮುಪ
ರಿಷ್ಟಾತ್ ಐಪರಆತಅಯುಉಧರ ಆನ
ಅಯುಃ ಆಶಃ ಲಶವ ಆತ ಅಯು ಉಯು
ಅಗ ಇಯು ಅಠ ಅಸವಮಾ ಷೋಡಶ
ಸ್ಥಿತಾಯ ಧ್ರುವಾಯ ಶಾಶ್ವತಾಯ ಯೋಗಪೀ
ಠಾಯ ಸಾಸಿದ್ಧಾತೃತೀಯಾಪ್ರಧಿಃ
ಸ್ವಾಧ್ಯಸ್ಥಾಃ ಸ್ಯಾತ್ಪ್ರಕೃತ್ಯಂತ ಆಪಸ್ತಸ್ಯ ತಥಾ
ಯತಃ ಯಂ ನಿತ್ಯಂ ಯೋಗಿನೇ ಚೈ ತ್ವೇ
ವಿಜ್ಞೇಯಾಳ್ಸುರ್ಯಥೋಕ್ತವತ್ ॥ ೧೪ ॥

ಆದ್ಯಾಯತೋ ಯಕಾರಃ ಸ್ಯಾನ್ಮಾಹತಾಶ್ಚ ಸ್ವರೇಣವಃ ।
ಅಂತರಂ ಚ ನಮಸ್ಕಾರೋ ವಿಸರ್ಗಶ್ಚಾಂತ್ಯತಃ ಪದೇ ॥ ೧೫ ॥

---

೧೩-೧೪. ತೃತೀಯ ಪ್ರಧಿಯಲ್ಲಿ ಮೇಲೆ ಹೇಳಿದ ಅಕಚಟಕಾದಿ ಅಕ್ಷರಗಳೂ, ಬರುತ್ತವೆ. ಅದು ಧ್ರುವ, ಶಾಶ್ವತ, ಯೋಗಪೀಠ ಮುಂತಾದುವುಗಳಿಂದ ಸಿದ್ಧವಾದ ಪ್ರಧಿಯೆನಿಸಿರುವುದು. ಇದರಲ್ಲಿ ಜಲಾದಿಯಾಗಿ ಪ್ರಕೃತ್ಯಂತವಾದ ಎಲ್ಲಾ ದೇವತೆಗಳೂ ಆವಾಹಿತಗಳಾಗುವುವು.

೧೫. ಆಕಾರಾದಿಯಾಗಿ ಯಕಾರಾಂತವಾದ ಅಕ್ಷರಗಳು ಸ್ವರಸಹಿತವಾಗಿ ಮಧ್ಯೆ ನಮಶ್ಶಬ್ದವನ್ನೂ, ಅಂತ್ಯದಲ್ಲಿ ವಿಸರ್ಗವನ್ನೂ ಪಡೆದಿರುವುವು. ಇಲ್ಲಿ· ಅನುಸ್ವಾರಾಂತಗಳು ಪೂರ್ವಪಕ್ಷಗಳಾಗಿಯೂ, ವಿಸರ್ಗಾಂತಗಳು ಉತ್ತರ ಪಕ್ಷಗಳಾ

ವಿದ್ವಂತಃ ಪೂರ್ವಪಕ್ಷೋನ್ನಂ ವಿಸರ್ಗಶ್ಚೋತ್ತರಾಧ್ರುವಃ ।
ವಸಂತ ಏಷ ವಿಜ್ಞೇಯಃ ಅಗ್ರೇ ಗ್ರೀಷ್ಮಾದಯಃ ಶುಭಾಃ ॥ ೧೬ ॥
ಹವ್ರೋ ಆಹವಾ ಅಧಸ್ತಾದ್ವ್ಯೋಮ ಅಯನುಪರಿಷ್ಟಾತ್ ।
ಇಶಯಃ ಆತ ಅಯ ಇನ ತಪ ಅನು ಉಪಜ್ಞಾ ಮಮ ।
ಆಷಯ ಆಸಾ ಅರ ಚ ಅರ ಅಯುಷೋಡಶೋ ವಿಸರ್ಗಃ ।
ಸ್ಥಿತಾಯ ಪರಿತ್ಯಾಗಿನೇ ಧ್ಯಾನಹಾರಾಯ ।
ಓಂ ನಮಃ ಸಿದ್ಧಾಃ ಚತುರ್ಥೀಪ್ರಧಿಃ ದ್ವಿತೀಯಾಂತಃ ।
ಮಾಧವೋ ಮಾಸಃ (ವಸಂತರ್ತುಃ)

ವಿಸರ್ಗವಾಸ್ತುಮಃ ಶುಕ್ಲೇ ಪ್ರಕೃತ್ಯಂತಃ ಶಾವಯುತಃ ।
ಸ್ವರವಂತೌ ಯಶೌ ಜ್ಞೇಯೌ ರೇಫಾದ್ಯಂತೌ ಪಯೌ ಸ್ಮೃತೌ

ಭಕಾರಾಂತೋ ವಕಾಶಸ್ತು ಪ್ರಸತಾ ಸರ್ವದೈವ ಹಿ ।
ಯಶ್ಚೇಜ್ಞಾನಸ್ತಥಾನ್ಯಶ್ಚ ಸ್ಪಷ್ಟೋ ದಿಷ್ಟಸ್ಸ ಬಿಂದುಕಃ ॥ ೧೭ ॥

---

ಗಿಯೂ ಇರುತ್ತವೆ. ಇದೇ ವಸಂತರ್ತುವಿನ ಅಭಿಮಾನದೇವತೆ. ಮುಂದೆ ಗ್ರೀಷ್ಮಾದಿ ಋತುಗಳು ಬರುವುವು. ಈ ಚತುರ್ಥೀ ಪ್ರಧಿಯಲ್ಲಿ ಮೇಲೆ ಹೇಳಿದ ಬೀಜಾಕ್ಷರಗಳು ಬಂದು ಸೇರುವುವು.

೧೬-೧೮. ಇನ್ನು ಪಂಚಮೀಪ್ರಧಿಯಲ್ಲಿ ವಿಸರ್ಗಸಹಿತವಾಗಿ ಪ್ರಕೃತ್ಯಂತವಾದ ಶ, ವ ಎಂಬ ಅಕ್ಷರಗಳೂ, ಯಶವರ್ಗಗಳೂ ರೇಫಾದ್ಯಂತಗಳಾದ ಪ,ಯಕಾರಗಳೂ, ಭಕಾರಾಂತಗಳಾದ ವಕಾರವೂ ಬಿಂದುವಿಶಿಷ್ಟಗಳಾಗಿರುವ ಅಕ್ಷರಗಳೂ ಅಲ್ಲಲ್ಲಿ ಕೂಡಿಬರುತ್ತವೆ. ಮತ್ತು ಮೇಲೆಹೇಳಿದ ಅ, ಕ, ಚ, ಟಾದಿ ಬೀಜಾಕ್ಷರಗಳೂ, ಸರ್ವಪ್ರಭುವಾದ ಈಶಾನನ ನಮಸ್ಕಾರವೂ ಬರುತ್ತದೆ. ಆರನೆಯ ಪ್ರಧಿಯಲ್ಲಿ

ಅಕಚಟತಪಯಶಾ ಭವೇಗಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಅಮ ಇಷ ಆವ ಅಪ ಅಮ ಅರ ಅಪ ರಅಂ ।
ಭ ಅ ಐ ವ ಇ ಶ ಆ ಯ ಅ ಯ ಇ ಆ ಸ ಅಗ
ಇಷೋಡಶತ್ವಂ ಓಂ ನಮೋನಮಃ ಸರ್ವಪ್ರಭವೇ ।
ಈಶಾನಾಯ ಅಸಿದ್ಧಾಪಂಚಮೀಪ್ರಧಿಃ ।
ಉಕಾರೋ ದೀಪಿತೋ ಮಃ ಸ್ಯಾದ್ರೇಫಾದಿಂದ್ರಾ ।
ಯುಧೋ ಧನುಃ ಸ್ವರವಂತೌ ಯತೌ ತೇನ ।
ಯುಯುಕ್ತ್ಯನುತಥಾ ಭವೇತ್ ॥ ೧೮ ॥

ಸ್ವರವಂತೌ ಪಚೌ ಕಾದಿ ರೇಫಾಂತಶ್ಚ ಯಥಾ ಯುತಃ ।
ಪಶ್ಚಾತ್ಖದ್ಯೋತವಿಜ್ಞೇಯೋ ಹೃದಯಶ್ಚ ಯಥೋದಿತಃ ॥ ೧೯ ॥

ಭವೇದಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಯಮ ಆದ ದಥನ ಅಯಃ ಅತತ ಉಪಡಃ ಅಸಃ ।
ಆವ ಆತತರಅಯ ಅಉಧಅ ರಖುಗ ।
ಅದಃ ಷೋಡಶೋ ವಿಸರ್ಗಃ ।
ಮೂರ್ಧಾಯ ತತ್ಪುರುಷಾಯ ವ್ಯಕ್ತಾಯ ಅಘೋರಹೃದಯಾಯ ಚ ।
ಅತಸ್ತೃತೀಯೋ ರಃ ಶುಕ್ರೋ ಮಾಸಃ ಸಿದ್ಧಾಷಷ್ಠೀ ಪ್ರಧಿಃ ।

---

ಉಕಾರವು ದೀಪಿತವಾಗಿಯೂ ಮಕಾರವು ಇಂದ್ರಾಯುಧವಾಗಿಯೂ, ಯ, ತಕಾರಗಳು ಸ್ವರಯುಕ್ತಗಳಾಗಿಯೂ ಇರುತ್ತವೆ.

೧೯. ಪ, ಚ ಅಕ್ಷರಗಳು ಸ್ವರಸಹಿತಗಳಾಗಿಯೂ, ರೇಫಾಂತಗಳಾಗಿಯೂ ಖದ್ಯೋತ ಹೃದಯವೆನಿಸಿಯೂ ಇರುವುದು. ಅಧೋಭಾಗದಲ್ಲಿ ವ್ಯೋಮವೂ, ಮೇಲ್ಭಾಗದಲ್ಲಿ ಯಮ ಇತ್ಯಾದಿ ಹದಿನಾರು ವಿಸರ್ಗಾಂತಗಳಾದ ಅಕ್ಷರಗಳೂ ಇರುವುವು. ಮೂರ್ಧಾಯ, ತತ್ಪುರುಷಾಯ, ವ್ಯಕ್ತಾಯ, ಅಘೋರ ಹೃದಯಾಯ ಎಂಬ ಮಂತ್ರಗಳೇ ನಮಸ್ಕಾರಕ್ಕೆ ಉಕ್ತವಾದವುಗಳು. ಇದು ಜ್ಯೇಷ್ಠಮಾಸಾಭಿಮಾನಿಯು.

ಅಸೌ ಯಯ ಯತೋಽನ್ಯಶ್ಚ ಹ್ರಸ್ವೋಽಪಶ್ಚಾಯತೋ ಯತಃ ।
ಮದವಾಮಧ್ಯೇತ್ಯೈಕಾರಾದ್ಗುಕಾರೇಣೈವ ದೀಪಿತಾಃ ॥ ೨೦ ॥

ಆದೀರ್ಘಶ್ಚೈವ ದೀರ್ಘಸ್ಸ್ಯಾತ್ ಸ್ವರವಂತೌ ಯಶೌ ತತಃ ।
ದಕಾರಾದಿರ್ಯತುಶ್ಚ ಸ್ಯಾದ್ದೀರ್ಘೋ ಯಸ್ತುಃ ಸ್ವರೇಣ ಚ ॥ ೨೧ ॥

ಉಕಾರವಾನ್ಮಕಾರಸ್ಸ್ಯಾತ್ ರೇಫಾದಿಸ್ತನ್ಮನೋನ್ನತಃ ।
ಯದ್ದೀಹಾಂತೇ ಚ ಬಿಂದುಃ ಸ್ಯಾತ್ಪಕ್ಷೇ ಶುಕ್ಲೇ ತು ಪೂಜಿತಃ ॥ ೨೨ ॥

ಕಚಟತಪಯಶಾಃ ಚಾರಿಣಿ ಅಧಸ್ತಾದ್ಯೋಽಮ ಆಯಮುಪರಿಷ್ಟಾತ್ ।
ಆಯ ಆಯ ಆಚ ಅಮಯ ಪದ ಅವವಲೂ ಆ ಇಯ ।
ಅಯಅಸಉದಯ ಆಯ ಉತ ಉಮ ಅರತಃ ।
ಪಾಯಾವಾಮದೇವಗುಹ್ಯಾಯ ಸದ್ಯೋಜಾತಾಯ ಮೂರ್ತಯೇ ।

॥ ಅಸಿದ್ಧಾ ಸಪ್ತಮೀ ಪ್ರಧಿಃ ॥

ಐಕಾರಾಂತೋ ಯಕಾರಃ ಸ್ಯಾದಕ್ಷರಂ ಪರಮಂ ಪದಂ ।
ನಕಾರೋ ಮೌನಮಶ್ಚಸ್ಯಾತ್ತತೋಗಾಮ್ಯಾದುಕಾರವಾನ್ ॥ ೨೩ ॥

---

೨೦. ಇದು ಯಯ, ಯತ ಇವುಗಳಿಂದ ಭಿನ್ನವಾಗಿ ಹ್ರಸ್ವಾದಿಗಳಿಂದ ಕೂಡಿರುವುದು. ಐಕಾರದಿಂದ ಮದವೂ, ಗುಕಾರದಿಂದ ದೀಪಕವೂ ಆಗಿರುವುದು.

೨೧-೨೪. ಇನ್ನು ಏಳನೆಯ ಪ್ರಧಿಯಲ್ಲಿ ಯ, ಶಕಾರಗಳು ಸ್ವರಯುಕ್ತಗಳಾಗಿ ಹ್ರಸ್ವವಾಗಿಯೂ, ದೀರ್ಘವಾಗಿಯೂ, ದಕಾರಾದಿಯಾಗಿ ತಕಾರಾಂತಗಳಾಗಿರುವುವು. ಉಕಾರ, ಮಕಾರಗಳು ರೇಫಾದಿಯಾಗಿದ್ದು ಬಿಂದುವಿಶಿಷ್ಟಗಳಾಗಿರುವುವು ಮತ್ತು ಕಚಟಪಾದಿ ಬೀಜಾಕ್ಷರಗಳೂ ಅಲ್ಲಿ ವಾಮದೇವ. ಗುಹ್ಯ

ಹೀದ್ಯಾಯತಶ್ಚ ಯಸ್ತಸ್ಮಾದಿಕಾರಾಂತಸ್ತಥೈವ ವತ್ ।
ಅವೇದ್ವಿದ್ಧಿ ಪುನರ್ಯಶ್ಚ ಗತಕಾಂತಸ್ಸ ಉತ್ತಮಃ ॥ ೨೪ ॥

ಪಕಾರಾಂತೌ ಸರೇಫೌದ್ವಾ ತದಂತೇ ಸ್ವರ ಏವ ಚ ।
ತಾವೇತೌ ಗ್ರೈಷ್ಮಿಕೌ ಮಾಸೌ ನಮೋಂತಃ ಸಂಪ್ರವಕ್ಷ್ಯತೇ ॥ ೨೫ ॥

ಚಾರಿಣಿ ಅಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಐಷ ಓಂ ಜ ಅನ ಓಂ ಜ ಮಅನ ಅಮಜ ಗಮಾಹಯ ।
ಹತಃಗಮಾಹಯಃ ಓಂ ಜಯಸ್ತತ್ತರಃ ಆಷೋಡಶೋ ವಿಸರ್ಗಃ ।
ಓಂ ಯಃ ಓಂ ನಮೋನಮೋ ನಮಃ ।
ಗುಹ್ಯಾತಿಗುಹ್ಯಾಯ ಗೋಪ್ತ್ರೇನ ಶಾಚತುರ್ಥೋಚಃ ।
ಶುಚಿರ್ಮಾಸೋ ಗ್ರೈಷ್ಮಋತುಃ ಸಿದ್ಧಾ ಅಷ್ಟಮೀಪ್ರಧಿಃ ।
ಹಕಾರಾಂತೋ ನಕಾರಸ್ಸ್ಯಾತ್ ವಸ್ತುತ ಆಯುತಸ್ಸ್ವರಃ ।।
ಸ್ವರವಂತೌ ಯಶೌ ತಶ್ಚ ರೇಫಾದೀರೋಯುತಶ್ಚ ಯಃ ॥ ೨೬ ॥

---

ಸದ್ಯೋಜಾತಾದಿ ದೇವತಾ ಸ್ವರೂಪಗಳಾಗಿರುವುವು. ಹೀಕಾರಾದಿಯಾಗಿ ಈಕಾರಾಂತ ವಾಗಿರುವ ಇನ್ನು ಎಂಟನೆಯ ಪ್ರಧಿಯು ವಿವರಿಸಲ್ಪಡುವುದು.

೨೫-೨೬. ಪಕಾರಾಂತವಾಗಿ ರೇಫಸಹಿತಗಳಾಗಿರುವ ಪರ ಎಂಬ ಎರಡು ಅಕ್ಷರಗಳು ಗ್ರೀಷ್ಮಋತುವಿನ ಅಭಿಮಾನಾಕ್ಷರಗಳು. ಇವು ನಮಶ್ಶಬ್ದಾಂತಗಳಾಗಿರ ಬೇಕು. ಇನ್ನು ಅಧೋಭಾಗದಲ್ಲಿ ವ್ಯೋಮ ಮಂತ್ರವೂ, ಮೇಲ್ಭಾಗದಲ್ಲಿ ಓಂಕಾರಾದಿ ಬೀಜಾಕ್ಷರಗಳೂ, ವಿಸರ್ಗ ಮತ್ತು ನಮೋಂತಗಳಾಗಿರುವುವು. ಗುಹ್ಯ, ಅತಿಗುಹ್ಯ, ಗೋಪ್ತೃ ದೇವತಾತ್ಮಕಗಳಾಗಿ, ಗ್ರೀಷ್ಮಋತುವಿನ ಅಭಿಮಾನವರ್ಗದಲ್ಲಿ ಸೇರಿರು ವುದೇ ಈ ಎಂಟನೆಯ ಪ್ರಧಿ. ಹಕಾರಾಂತವಾಗಿ ನಕಾರಾದಿಯಾಗಿರುವ ಸ್ವರಸಹಿತ ಗಳಾದ ಯ, ಶಕಾರಗಳೇ ಈ ಪ್ರಧಿಯ ಮೂಲ ಮಂತ್ರಗಳು.

ಗೋದೀರ್ಘಾರ್ಧಃ ಪ್ರಕೃತ್ಯಂತಃ ಕಕಾರಸ್ತುಚ್ಚ ದೀರ್ಘವಾನ್ ।
ಯಕಾರಃ ಸ್ವರವಾನ್ ಜಾದಿರ್ಯಶ್ಚೈವೋಕಾರದೀಪಿತಃ ॥ ೨೭ ॥

ಹಕಾರಾಂತಸ್ತಥಾಕಾರೋ ರೇಫಊಕಾರವಾಂಸ್ತತಃ ।
ಬಿಂದುರತ್ಯಪದೋ ಜ್ಞೇಯೋ ನಭಸ್ಯಃ ಪೂರ್ವಪಕ್ಷಕೃತ್ ॥ ೨೮ ॥

ಅಕಚಟತಪಾ ಆತ್ಮತಂತ್ರೇ ।
ಅಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಹೇನ ಅಥಅರೀಅಪಅಸಾರವಉಪಅಗಹೇಧ ।
ಸಕಆತಔಪಉಜಯಹೇತಉತನಿಧನಾಯ ।
ಸರ್ವಗೋಧಾಕೃತೌಕಷ್ಟೋತಿ ರೂಪಸಿದ್ಧಾನವಮೀ ।
ಪ್ರಧಿಃ ಷೋಡಶರ್ಚಪರೋ ದೀರ್ಘಃ ಪಕಾರಃ ।
ಸ್ಯಾತ್ಪರಾಶ್ಚಯೇ ಸ್ವರೋ ದೀಪಿತಃ ।
ಆದ್ಯಶ್ಚ ಚೇನ್ಯಾನ್ಯಾಸ್ಯಶ್ಚಶುಶ್ಚೈಕಾರೇಣ ದೀಪಿತಃ ॥ ೨೯ ॥

ವ್ಯಾಘಾತೋ ವೈ ನಮಸ್ತ್ವೇಷ ಯಥಾವಲ್ಲಕ್ಷಣಾನ್ವಿತಃ ।
ನಮಶ್ಚೈವೋಚ್ಯತೇ ಭೂಯೋ ಯಥಾ ವರ್ಣೋ ಯಥಾಕ್ರಮಂ ॥೩೦॥

---

೨೭-೨೯. ಗೋದೀರ್ಘಾದಿಯಾಗಿ ಪ್ರಕೃತ್ಯಂತವಾಗಿ ಕಕಾರವು ದೀರ್ಘವಾಗಿರುತ್ತದೆ. ಯ, ಜ, ಓಕಾರಗಳು ಇಲ್ಲಿ ದೀಪಕಗಳು. ಹಕಾರಾಂತವಾಗಿ ಊಕಾರಾದಿಯಾಗಿ ಬಿಂದುಘಟಿತ ರೇಫವೇ ಇಲ್ಲಿನ ಮೂಲಮಂತ್ರವು. ಇದು ಭಾದ್ರಪದ ಮಾಸಾಭಿಮಾನಿಯಾದದ್ದು. ಇದರಲ್ಲಿ ಹಿಂದೆ ಹೇಳಿದಂತಹ ಅಕ, ಚಟ ಪಾದಿಯಾದ ಬೀಜಾಕ್ಷರಗಳು ಸೇರಿಬರುತ್ತವೆ. ಇದನ್ನ ನವಮಪ್ರಧೀ ಎನ್ನುವರು.

೩೦-೩೧. ವ್ಯಾಘಾತವೆಂಬುದೇ ದಶಮಪ್ರಧಿಗೆ ಮುಖ್ಯದೇವತೆ. ಇದರಲ್ಲಿರುವ ವರ್ಣಗಳನ್ನೆಲ್ಲಾ ನಮಶ್ಯಬ್ದಾಂತವಾಗಿ ಉಚ್ಚರಿಸುವುದು ಶ್ರೇಷ್ಠವಾದದ್ದು. ಆತ್ಮತಂತ್ರವೆಂಬುದು ಅಧೋಭಾಗದ ಮುಖ್ಯಮಂತ್ರ. ಮೇಲ್ಭಾಗದಲ್ಲಿ ಮೇಲೆಹೇಳಿದಂತಹ

ಆತ್ಮತಂತ್ರಅಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಆಯ ಅಯಅಯಅರಅಪ ಅಯಂತರ ಅಪಅಪಯ ।
ಅತಅನಏವವಿಸರ್ಗಃ ಷೋಡಶಃ ।
ಅಜಾಯ ಪರಮೇಶ್ವರಪರಾಯ ಅಚೇತನ ಅಪಂಚಮೋ ।
ನಭೋಮಾಸಃ ಸಿದ್ಧಾದಶಮೀ ಪ್ರಥಿಃ ।
ಸ್ವರ ಏವಾಸ್ತು ತವನವ್ಯೋಮ್ನಿ ಸ್ಯಾತ್ಸಾನುನಾಸಿಕಃ ।
ಪುನಸ್ಸತ್ಯಶ್ಚ ದೀರ್ಘಶ್ಚ ಪಶ್ಚಾತ್ಸ್ಯಾದಿಂ ನಕಾರವಾನ್ ॥ ೩೧ ॥

ಅಯಮೇವ ಮಥಾಪ್ರಮೇಯಸ್ವರೇಫಉಕಾರಾದಿ ದೀಪಿಕಃ ।
ಪೂರ್ವವಚ್ಚ ಯಕಾರಃ ಸ್ಯಾತ್ತತ್ಸರ್ವಂ ಪುನರೇವ ತು ।
ಅಕಚಟತಪಯಶಾಂತಾ ಇತಿ ಸ್ಥಿತೇ ।
ಅಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಅವಅನಉವಯಇಷನಅವಯಇಯನ ಅವಯ ।
ಇಯನಅಧರಷೋಡಶೋ ವಿಸರ್ಗಃ ।
ತೇನ ವ್ಯೋಮ್ನಿ ಅವ್ಯೋಮ್ನಿ ಅಊರೂಪಿನ್ ।
ಅರೂಪಂ ಸಿದ್ಧಾ ಏಕಾದಶೀ ಪ್ರಥಿಃ ।

---

ಆಯ, ಆಯಾದಿ ಬೀಜಮಂತ್ರಗಳನ್ನು ಉಲ್ಲೇಖಿಸಬೇಕು. ಈ ಹತ್ತನೆಯಪ್ರಥಿಗೆ ಶ್ರಾವಣಮಾಸವೇ ಪ್ರಧಾನವಾಗಿ ಉತ್ತಮವಾಗಿರುವುದು. ಅನುನಾಸಿಕ ಸಹಿತವಾದ ಸ್ವರವೇ ಇಲ್ಲಿ ವ್ಯೋಮ ಸಂಜ್ಞೆಯು.

೩೨-೩೩. ಏಕಾದಶ ಪ್ರಥಿಯಲ್ಲಿ ರೇಫ, ಉಕಾರಗಳೇ ದೀಪಕಗಳು. ಉಳಿದ ಸ್ವರಾದಿಗಳೆಲ್ಲಾ ಹಿಂದಿನಂತೆಯೇ ಅಕಚಟತಪಯ ಶಾಂತವಾದ ಇದರಲ್ಲಿ ವ್ಯೋಮವೇ ಮೇಲುಭಾಗವೂ ಅವ ಅನಾದಿಗಳು ವಿಸರ್ಗಾಂತಗಳಾಗಿರುವುವು. ವ್ಯೋಮ

ಷರೋಽಪಿಸ್ಯಶ್ಚ ರೇಫಾಂತಃ ಸ್ಥ ಶ್ಚ ಸ್ಯಾತ್ಸ್ವರವಾಂಸ್ತತಃ ।
ಮಕಾರಃ ಪ್ರಥಮಾಶ್ಚೇತ್ಸ್ಯಸ್ತೇಜಶ್ಚ ವಿವಿಸರ್ಗವಾನ್ ॥ ೩೩ ॥

ಯೋ ಯೋಽಂತಸ್ಥಃ ಪ್ರಕೃತ್ಯಂತೋ ವಿಸರ್ಗಶ್ಚ ಪುನಶ್ಚತೌ ।
ನಭಸ್ಯ ಏಷ ವ್ಯಾಖ್ಯಾತೋ ವರ್ಷಾಖ್ಯಶ್ಚ ಋತುಸ್ತ್ವಯಂ ।
ಇನಸ್ತ್ವಿವೋ ಅಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಇಯನ ಅಪರ ಅಥ ಅಮ ಏತ ಅಯ ಐತ ಅಪದ್ರತಃ ।
ಷೋಡಶೋ ವಿಸರ್ಗಃ ಯಿನಃ ಪ್ರಥಮಃ ತೇಜಃ ।
ಓಂ ಜ್ಯೋತಿಃ ಓಂ ಷಷ್ಠೋ ವಃ ನಭಸ್ಯೋ ಮಾಸಃ ।
ವರ್ಷಾಖ್ಯ ಋತುಃ
ಸಿದ್ಧಾ ದ್ವಾದಶೀಪ್ರಥಿಃ ।
ಇಷ ಆದಿ ಗಕಾರಃ ಸ್ಯಾದ್ವ್ಯೋಯೋಚ್ಚ ತದನಂತರಂ ।
ಅಶ್ಚ ಲೋ ಲಗ್ನ ಐಕಾರಂ ಆದ್ಯಃ ಸ್ಯಾತ್ತದನಂತರಂ ॥ ೩೪ ॥

---

ಅವ್ಯೋಮಗಳಲ್ಲಿ ಅ, ಉ, ಊ ರೂಪಿಗಳು. ರೇಫಾಂತವಾದ ಸ್ಥ ಎಂಬಕ್ಷರವೇ ಸ್ವರಸಹಿತಗಳಾದ ಮಕಾರಗಳು. ವಿಸರ್ಗಘಟಿತವಾದದ್ದೂ ಇದೇ.

೩೪. ಹನ್ನೆರಡನೆಯ ಪ್ರಥಿಯಲ್ಲಿ ಅಂತಃಸ್ಥವಾದ ವರ್ಣಗಳು ಪ್ರಕೃತ್ಯಂತವಾಗಿಯೂ, ವಿಸರ್ಗಘಟಿತವಾಗಿಯೂ ಇರುವುವು. ಶ್ರಾವಣಮಾಸ ವರ್ಷಋತುವು ಇನದೇವತೆ ಇಲ್ಲಿ ಪ್ರಧಾನವಾದವುಗಳು. ಅಧೋಭಾಗದಲ್ಲಿ ವ್ಯೋಮವೂ, ಇಯಾದಿ ಬೀಜಾಕ್ಷರಗಳು ಊರ್ಧ್ವಭಾಗದಲ್ಲಿಯೂ ನಿರೂಪಿತಗಳಾಗಿವೆ.

ಓಂ ಜ್ಯೋತಿಃ ಎಂದು ಮೇಲೆ ಹೇಳುವುದೇ ನಭಸ್ಯ ಮಾಸಪ್ರಧಾನವಾದ ಮಂತ್ರವು. ಇಷಾದಿಯಾದ ಗಕಾರವು ಐಕಾರವು ಕ್ರಮವಾಗಿ ಬರುತ್ತಿರುವುವು.

ಧುಕಾರಶ್ಚ ಯ ಆದ್ಯಶ್ಚ ಭಸ್ಮೇಶಾದ್ಯಸ್ತಥೈವ ಚ ।
ಅಕಾರಾದ್ದೀಪಿತೋ ನಃ ಸ್ಯಾತ್ ಅಶ್ಚೈಕಾರೇಣ ದೀಪಿತಃ ।
ಕಚಟತಪಯಶಾಭೂತಿರಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಅದುರಃ ಅಯಮಅನಅಗನಅಭವಅಮಅಆ ।
ಭಯಸಮಅಆನಷಐಷೋಡಶತತ್ತ್ವಅರೂಪ ।
ಅನಗ್ನೇ ಅಧೂಪ ಅಭಸ್ಮ ಅನಾದಿಯಂ ಸಿದ್ಧಾ ತ್ರಯೋದಶೀಪ್ರಧಿಃ ।
ದೀರ್ಘಾ ನಕಾರಾಶ್ಚತ್ವಾರೋ ಧೂಕಾರಾಶ್ಚ ತಥೈವ ಚ ।
ಊಕಾರಾಂತಸಮೋ ಜ್ಞೇಯಃ ಸೋಕ್ಷರೋ ಭಯದೀಪಿತಃ ॥ ೩೬ ॥

ಪುನರ್ವಿಸರ್ಗರಹಿತೋ ರಸ್ತ್ವೋ ವಸುವಿಸರ್ಗವಾನ್ ।
ಅಕ್ಷರಶ್ಚೋಥ ವಕ್ತ್ರಾಂತೋ ವಿಸರ್ಗೇಣ ವಿಭೂಷಿತಃ ॥ ೩೭ ॥

ಭೂರಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಆನಅನಊಧ ಊಧ ಓಂ ಓಂ ರಭ ಉಭ ।
ಓಂ ಆವಸಃ ಷೋಡಶಃ ।
ನಾನಾನಾನಾಧೂಧೂಧೂಧೂ ಓಂ ಭೂಃ ಭುವಃ ಓಂ ।

---

೩೫-೩೬. ಈ ಹದಿಮೂರನೆಯ ಧುಕಾರವು ಭಸ್ಮೇಶಾದಿಯಾಗಿ ಬರುವುದು. ಅಕಾರವು ದೀಪಕವಾಗಿರುವುದು. ಕಚಟತಪಯಶಗಳು ವಿಭೂತಿಗಳು. ವ್ಯೋಮವು ಅಧೋಭಾಗದಲ್ಲಿಯೂ, ಅಯಮಾದ್ಯಕ್ಷರಗಳು ಮೇಲ್ಭಾಗದಲ್ಲಿಯೂ ಇರುವುವು ಅನಗ್ನಿ, ಅಧೂಪ, ಅಭಸ್ಮ, ಅನಾದಿಯು. ಇವು ತ್ರಯೋದಶಪ್ರಧಿಗೆ ಮುಖ್ಯಾಭಿಮಾನಿ ದೇವತೆಗಳು. ದೀರ್ಘವಾದ ನಕಾರ ಚತುಷ್ಟಯಗಳೂ, ಧೂಕಾರವೂ, ಊಕಾರವೂ ಭಯದೀಪಕಗಳು.

೩೭-೩೮. ಹದಿನಾಲ್ಕನೆಯ ಪ್ರಧಿಯಲ್ಲಿ ವಿಸರ್ಗರಹಿತಗಳಾದ ರ, ಸು ಎಂಬ ಅಕ್ಷರಗಳೂ, ಅಷ್ಟವಿಸರ್ಗಗಳೂ ಶೋಥವಕ್ತ್ರಾಂತಗಳಾದ ಅಕ್ಷರಗಳು ವಿಸರ್ಗಸಹಿತ

ಸ್ವಃ ಆಸಪ್ತಮೋರಸಃ ಇಷೋಮಾಸಃ ।
ಸಿದ್ಧಾ ಚತುರ್ದಶೀಪ್ರಥಿಃ ।
ಊರ್ಜಸ್ಯೋಽರ್ಕ ಆದಿ ಸ್ಯಾನ್ನದ್ರೇಕ್ಕಾರೇಣದೀಪಿತಃ ।
ಸ್ವರವಂತೌ ಘಸೌ ಭೂಯೋ ನಿಘಾ ನಃ ಪರಿಕೀರ್ತಿತಃ ॥ ೩೮ ॥

ಓಕಾರಾಂತೋ ನಕಾರಸ್ಸ್ಯಾದ್ಭಾದಿಭೌ ವಸ್ವರಾನ್ವಿತಃ ।
ಪ್ರಕೃತ್ಯಾ ಸೋಮಕಾರಶ್ಚ ಶಕಾರೋ ಬಿಂದುರೇವ ಚ ॥ ೩೯ ॥

ಅಕಚಟತಪಯಶಾಃ ಮಹೀರಧಸ್ಸ್ಯಾದ್ವ್ಯೋಮ ಅಯಮುಪರಿಷ್ಟಾತ್ ।
ಆಇನಅಧಃಅಮಇನಅಧಅನಇನಅಧಃ ।
ಓಂನಅದಭಅವಇಶಅವಃ ಅಸಷೋಡಶ ।
ತತ್ವಂ ಅನಿಧನನಿಧಾನೋದ್ಭವಶಿವಶಃ ।
ಸಿದ್ಧಾ ಪಂಚದಶೀ ಪ್ರಥಿಃ
ರೇಫಪೂರ್ವೋದಕಾರಸ್ಯಾತ್ಪರೋ ಸ್ವರೇಣ ಮಾಸವಃ ।
ಆದಿರ್ಮಧ್ಯಾಹ್ನಕಾರೇಣ ಮಕಾರಶ್ಚ ಸ್ವರಾನ್ವಿತಃ ॥ ೪೦ ॥

---

ಗಳಾಗಿಯೂ, ಅಧೋಭಾಗದಲ್ಲಿ ಭೂಮಿಯೂ, ಉಪರಿಭಾಗದಲ್ಲಿ ಆನ, ಆನ ಮುಂತಾದ ಬೀಜಾಕ್ಷರಗಳೂ ಬರುವುವು. ಇದರಲ್ಲಿ ಕಾರ್ತಿಕಮಾಸ ಪ್ರಧಾನವಾಗಿರುವುದು.

೩೯-೪೦. ಹದಿನೈದನೆಯ ಪ್ರಥಿಯಲ್ಲಿ ಓಕಾರಾಂತವಾದ ನಕಾರವು ಭಾದಿಯಾದ ಭೌಕಾರಾದಿಗಳು, ಸೋಮಕಾರವು ಪ್ರಕೃತಿಯಾಗಿಯೂ, ಬಿಂದುಸಹಿತವಾದ ಶಕಾರವೂ, ಅಕಚಟತಪಯಶಾಂತವಾದ ಭೂಮಿಯು ಅಧೋಭಾಗದಲ್ಲಿಯೂ, ವ್ಯೋಮವು ಊರ್ಧ್ವಭಾಗದಲ್ಲಿಯೂ. ಆಇನಾದಿಗಳು ಬೀಜಾಕ್ಷರಗಳಾಗಿಯೂ ಇರುತ್ತವೆ. ರೇಫಪೂರ್ವಕವಾದ ಅಕಾರವು ಪರಸ್ಪರಸಹಿತವಾಗಿ ಆದಿ ಮಧ್ಯಸ್ಥಳಗಳಲ್ಲಿ ಹಕಾರವೂ ಸ್ವರಾನ್ವಿತವಾಗಿರುವುದು.

ಪಕಾರಾದೀಪಿತೋಹಶ್ಚ ಸಾಕ್ಷಾದ್ದೀರ್ಘೈರವಾತತೇಃ ।
ಹಕಾರ ಅಪತೋದಸ್ಯಾದೇಕಾರೇಣ ತು ದೀಪಿತಃ ॥ ೪೧ ॥

ವಃ ಸ್ವಃ ಸ್ಯಾತ್ಸ್ವರವಾನ್ ರಶ್ಚ ದಕಾರೋಭಯತಸ್ತಥಾ ।
ಅಂತವತೀಶರೇಖಾ ಲಕ್ಷಣತಶ್ಚ ಶರದೃತುಃ ॥ ೪೨ ॥

ಮಹಾಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಅರಚಅಪಅರಅಮಅತಮನಸಅಸವಅರ ।
ಅಮಆಹಯತಅವಅಸಆದ್ಯಃ ಷೋಡ ।
ಶೋ ವಿಸರ್ಗಃ ಪೂರ್ವಾಪರ ಆತ್ಮನೇ ಮಹೇ ।
ಶ್ವರಮಹಾದೇವ ಸಮಾಃ ಅಷ್ಟನೋದೀರಃ ।
ಊರ್ಜೋಮಾಸಃ ಶರದೃತುಃ ।
ಅಸಿದ್ಧಾ ಷೋಡಶೀ ಪ್ರಥಿಃ ।
ಐಕಾರಾಂತಃ ಸಹೇವಃ ಸ್ಯಾತ್ತರಾದಿಸ್ತುಭಾಂತವಃ ।
ನಮೌ ದೀರ್ಘಾ ಹಕಾರಃ ಸ್ಯಾದೇಕಾರೇಣ ತು ತತ್ಸಹ ॥ ೪೩ ॥

---

೪೧-೪೩. ಈಗ ಹದಿನಾರನೆಯ ಪ್ರಥಿಯಲ್ಲಿ ಪಕಾರವು ದೀಪಕವಾದದ್ದು. ಹಕಾರ ಏಕಾರಗಳೂ ದೀಪಕಗಳು. ಸ್ವಃ ವೆ ಎಂಬುವೇ ಸ್ವರಪ್ರಚೋದಕಗಳು ರ, ದ ಎರಡೆರಡು ರೇಫಗಳು ಉಭಯತ್ರ ಇರುತ್ತವೆ. ಈಶರೇಖಾಲಕ್ಷಣ, ಶರದೃತುಪ್ರಧಾನ, ಅಧೋವ್ಯೋಮ, ಅರಚಾದಿ ಬೀಜಾಕ್ಷರಗಳು, ಉಪರಿಭಾಗದಲ್ಲಿರತಕ್ಕವುಗಳು. ಐಕಾಕಾಂತವಾಗಿ ಭಾಂತವಾಗಿರುವ ತರಾದಿಗಳೂ, ನಮಶ್ಚಬ್ದಾಂತವಾಗಿ ದೀರ್ಘವಾಗಿರುವ ಹಕಾರ ಏಕಾರಗಳೂ, ಇಲ್ಲಿ ಮುಖ್ಯ ಮಂತ್ರಗಳೆನಿಸುವುವು. ಕಾರ್ತಿಕಮಾಸ, ಶರದೃತುವಿಗೆ ಇಲ್ಲಿ ಪ್ರಾಧಾನ್ಯ.

ಸ್ವರವಾನ್ ವೈ ಜಕಾರೋ ದ್ವಯಶೋಕಾರೇಣ ದೀಪಿತಃ ।
ಗಆಯತಃ ಪ್ರಕೃಶ್ಮಾವಯಕಾರಸ್ತ್ವಚ್ಚಪೂರ್ವವತ್ ॥ ೪೪ ॥

ವಮುವ್ಯಾ ಮಾಧುಕಾರೇಣ ದೀಪಿತಾ ತು ಸಬಿಂದುಕಾ ।
ವಿದ್ವಂತಃ ಶುಕ್ಲಪಕ್ಷಃ ಸ್ಯಾದ್ಯ್ವ್ಯೋಮಂತಃ ಸ್ಯಾದಿರುಚ್ಯತೇ ॥ ೪೫ ॥

ಭೂವ್ಯಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಐವಅಸರಅನಅಮಆಹಐತಅಜಆಯಆಗ ।
ಇವಅವಲುಮಷೋಡಶತತ್ತ್ವಂ ಚೇಶ್ವರಂ ।
ಹಾತೇಜಾವಾಯೋಗಾಧಿಪತಯೋ ಮುಂಚ ।
ಮಾಂಚ ಅಸಿದ್ಧಾ ಸಪ್ತದಶೀಪ್ರಧಿಃ ।
ಚಕಾರಾದಿರ್ಮಸುಕ್ಲೇಥ ಸ್ಯಾದ್ರಾಂತೋ ।
ಯೋಮಧೌ ತತಃ ।
ಪುನರೇತೇ ಶಕಾರಾಪ್ತೋ ದೀರ್ಘಾ ಭೂಯಉವಚ ತಾ ॥ ೪೬ ॥

ಸ್ವರವಂತಾ ಚ ಭ್ರಾ ದ್ವಿಸ್ತ್ರಾ ವಿಸರ್ಗಶ್ಚಾಂತಿಮೋ ಪದೇ ।
ಸಹ ಐಷ ಸಮಾಖ್ಯಾತ ಸ್ಸಹಸ್ಯಃ ಸೂಯಸಂತತಃ ॥ ೪೭ ॥

---

೪೪-೪೬. ಹದಿನೇಳನೆಯ ಪ್ರಧಿಯಲ್ಲಿ ಜಕಾರವು ಉಕಾರವೂ ಸ್ವರಯುಕ್ತಗಳಾಗಿ ದೀಪಕಗಳು. ಪ್ರಕೃತ್ಯವಯವಗಳೆಲ್ಲಾ ಹಿಂದಿನಂತೆಯೇ. ವಮ ತ್ಯಾಕಾರಗಳು ಮಾ, ಧು, ಕಾರದಿಂದ ದೀಪಿತವಾಗಿ ಬಿಂದುಸಹಿತವಾಗಿರುವುದು. ವಿದ್ ಅಂತವಾಗಿ ಶುಕ್ಲಪಕ್ಷ ಪ್ರಧಾನವಾಗಿರುವುದು. ಭೂಮಿಯೇ ಅಧೋಭಾಗವಾಗಿಯೂ, ಐವಾದಿ ಬೀಜಾಕ್ಷರಗಳು ಉಪರಿಷ್ಟಾದ್ಭಾಗದಲ್ಲಿಯೂ ಇರುವುವು. ಚಕಾರಾದಿಯಾದ ರಾಂತವಾದ ಮಧುಮಾಸವೇ ಇಲ್ಲಿ ಪ್ರಧಾನವಾದುದು.

೪೭-೪೮. ಭಕಾರವೇ ಸ್ವರಸಹಿತವಾಗಿ ವಿಸರ್ಗಾಂತವಾಗಿ ನಿಲ್ಲುವುದು. ಭೂವ್ಯಧಸ್ತಾದ್ಭಾಗವಲ್ಲಿಯೂ, ಉಪರಿಷ್ಟಾತ್ ಅವ್ವಾದಿಮೇಲೆ ಹೇಳಲ್ಪಟ್ಟ ಬೀಜಾ

ಭೂಮ್ಯಧಸ್ತಾದ್ವ್ಯೋಮ ಅಯಮುಪರಿಷ್ಟಾತ್ ।
ಅವಅಪರಅಮಅಲಅಪರಅಲಅಪಅಥಅಶಅರಚ ಅಮಅರ
ಅವಷೋಡಶವಿಸರ್ಗಃ ।
ವಃ ಪ್ರಥಮಃ ಓಂ ಸರ್ವಃ ಓಂ ಭವಃ ಓಂ ಅನವನೋನಃ ।
ಸಹೋಮಾಸಃ ಸಿದ್ಧಾಷ್ಟಾದಶೀ ಪ್ರಥಿಃ ।
ಭಂ ಆದಿರ್ವಓಕಾರಾಂತೋ ದಾದಿರ್ಭಃ ಸ್ಯಾತ್ಸ್ವರೇಣವಃ ।
ಶಕಾರೋವಶ್ಚ ರೇಫಾಂತೋ ದ್ವಿರಕಾರಾಂತೋಂತತಸ್ತಥಾ ॥ ೪೮ ॥

ಉಕಾರವಾನ್ ಸಶ್ವಷೋಢ ರೇಫಾಂತಃ ಪಾದ ।
ಶ್ರೌತತಃ ರೇಫಾದ್ದೀರ್ಘಃ ಸದೀರ್ಘಾಂತಃ ।
ಶುಕ್ಲೋಯಂ ಬಿಂದುದೀಪಿತಃ । ॥ ೪೯ ॥

ಕಚಟತಪಯಶಾ ಇತರೇತರ ವ್ಯೋಮ ಅಯಮುಪರಿಷ್ಟಾತ್ ।
ಭ ಓಂ ಥ ಅದವಅರಅಸಅರವಊಭಅತಉಸ ಅಶ್ವಅಪರ ಅದಅಸ ।
ಆರವಅಸಷೋಡಶತ್ವಂ ಭವೋದ್ಭವ ಸರ್ವಭೂತ ಸುಖಪ್ರದ ।

ಸರ್ವಸಾಧ್ಯ ಸಿದ್ಧಃ—
ಏಕೋನವಿಂಶತಿಃ ಪ್ರಥಿಃ ।

---

ಕ್ಷರಗಳೂ ಇರುವುವು. ಪುಷ್ಯಮಾಸವೇ ಇಲ್ಲಿ ಪ್ರಧಾನವಾದ ಮಾಸ, ಇವು ಹದಿನೆಂಟನೆಯ ಪ್ರಥಿಗೆ ಸಂಬಂಧಪಡುವುವು. ಭಂ ಎಂಬುದೇ ಆದಿಯಾಗಿ ಓಕಾರಾಂತವಾಗಿ ದಕಾರಾದಿಯಾಗಿಯೂ, ಶಕಾರ, ವಕಾರ ರೇಫಾಂತವಾಗಿಯೂ ರೇಫದ್ವಯ ಘಟಿತವಾಗಿಯೂ ನಡೆಯುವುದು.

೪೯-೫೦. ಊಕಾರ ಶ್ವ, ಷ ರೇಫ ದ, ಶ, ಎಂಬ ಅಕ್ಷರಗಳೂ ದೀರ್ಘಾಂತವಾದ ರೇಫ ಇವು ಇಲ್ಲಿಯ ಮೂಲಾಧಾರಗಳು. ಶುಕ್ಲಪಕ್ಷ ಬಿಂದುವೇ ದೀಪಕ. ಕಚಟಾದಿಗಳು ವ್ಯೋಮಪರ್ಯಂತವಾಗಿ ಅಧೋಭಾಗದಲ್ಲಿಯೂ ಭ ಓಂಕಾರಾದಿಯಾದ ಬೀಜಾಕ್ಷರಗಳು ಊರ್ಧ್ವಭಾಗದಲ್ಲಿಯೂ ಇರುವುವು. ಇದೇ ಹತ್ತೊಂಬತ್ತನೆಯ ಪ್ರಥಿ

ಚರೇದ್ವ್ರತಂ ಸುಸಿದ್ಧ್ಯರ್ಥಂ ಯಥಾವಕ್ಷ್ಯಾಮಿ ತಂತ್ರಜಂ ।
ಪ್ರಾಣಾಯಾಮಸಹಸ್ರಂ ತು ಬೀಜತತ್ತ್ವೇನ ಧಾರಯೇತ್ ॥ ೫೦ ॥

ಪಂಚಾಗ್ನಿಭಿಶ್ಚಿವ್ಯೈರಂಗ್ಯೈಸ್ಸ್ಯಾದ್ವ್ಯತೋನಿಲಭಕ್ಷಣಃ ।
ತ್ರ್ಯಹಂ ತ್ರ್ಯಹಂ ತ್ರಿಕಂ ವ್ಯಸ್ತಂ ಜಪೇತ್ತ್ಯಾಪೇ ಜಲೇ ಕ್ರಮಾತ್ ॥ ೫೧ ॥

ಗುರ್ವಾಜ್ಞಯಾ ಭಸ್ಮಸುಪ್ತ್ಯಾಂತಥರ್ಮಾಹಂ ಪದಮಸ್ತಕೇ ।
ಭುಂಜೀತಾಥೋಚಿತಂ ಭಕ್ಷ್ಯಂ ಯೋಗಸ್ಯಾಸ್ಯ ಸದಾ ವಿಧಿಃ ॥ ೫೨ ॥

ಚರಿತ್ವಾ ತದ್ವ್ರತಂ ಪುಣ್ಯಂ ಮುಚ್ಯತೇ ಸರ್ವಪಾತಕೈಃ ।
ಪೂಜ್ಯತೇ ಸರ್ವಸಿದ್ಧ್ಯೈಶ್ಚ ಜ್ಞಾನಂ ಚಾಸ್ಯ ಪ್ರವರ್ತತೇ ॥ ೫೩ ॥

ಯೇ ಭವಂತಿ ಹಿ ವೈ ದೋಷಾಃ ಸಧನೇ ದಿವ್ಯಮಾನುಷಾಃ ।
ಶರೀರಜಾಸ್ತಥಾರಾಗಾ ನಶ್ಯಂತಿ ತೇನ ವೈ ಧ್ರುವಂ ॥ ೫೪ ॥

---

ಯೆಂಬುದು. ಇಲ್ಲಿನವರೆಗೂ ಹೇಳಿದ ಈ ತಂತ್ರಜವಾದ ವ್ರತವನ್ನು ಪ್ರಾಣಾಯಾಮ ಸಹಸ್ರಯುತವಾಗಿ ಬೀಜತತ್ತ್ವದಿಂದ ಭಕ್ತಿಪೂರ್ವಕವಾಗಿ ಆಚರಿಸಬೇಕು.

೫೧-೫೨. ಈ ವಿಧವಾದ ತಂತ್ರವನ್ನು ಪಂಚಾಗ್ನಿಮಧ್ಯದಲ್ಲಿ ನಿಂತು ಅನಿಲಾ ಹಾರಿಯಾಗಿಯೋ, ಅಥವಾ ಮೂರುದಿನ ಪೂರ್ತಿ ಜಲಮಧ್ಯದಲ್ಲಿ ನಿಂತೋ, ಅಥವಾ ಗುರುವಿನ ಆಜ್ಞೆಯಂತೆ ಭಸ್ಮಶಾಯಿಯಾಗಿಯೋ, ತಲಕೆಳಗಾಗಿ ನಿಂತೋ, ವ್ರತ ವನ್ನು ಮುಂದುವರಿಸಬೇಕು.

೫೩-೫೪. ಈ ವ್ರತವನ್ನು ಆಚರಿಸಿದವರು ಸರ್ವಪಾಪಗಳಿಂದಲೂ ಮುಕ್ತ ರಾಗಿ, ಸಕಲಸಿದ್ಧಿಗಳನ್ನೂ ಪಡೆಯುವರು. ಅಲ್ಲದೆ ದೈವಿಕವಾದ, ಮಾನುಷಿಕ ವಾದ, ಶಾರೀರಕವಾದ ಎಲ್ಲಾ ವ್ಯಾಧಿಗಳೂ ಇದರಿಂದ ನಿವಾರಿತಗಳಾಗುವುವು.

ಭೂತವ್ರತಾತಂ ಸಿದ್ಧ್ಯರ್ಥಂ ಏಕಾಂತೇ ತು ಮನೋರಮೇ ।
ಆತ್ಮತುಲ್ಯಸಹಾಯಸ್ಸ್ಯಾ ದ್ವೀಜನಿರ್ದಗ್ಧಕಲ್ಮಷಃ ॥ ೫೫ ॥

ಏಕಾದಶಾನಿಜವ್ಯಾಧಿ ಚೋರ್ದ್ಧ್ವ್ಯಾಂಗುಷ್ಠಮಸ್ತಕೇ ।
ಲಲಾಟೇ ತೇನ ಸಂಪೀಡ್ಯ ಸರ್ವವಿಘ್ನಾನ್ನಿವಾರಯೇತ್ ॥ ೫೬ ॥

ಆಹಾರಾರ್ಥಂ ಚ ಸರ್ವೇಷಾಂ ಚರೇತ್ಸಮ್ಯಗ್ಯಥಾಕ್ರಮಂ ।
ವಾರುಣೇ ಸಲಿಲಾಹಾರಂ ಶುಕ್ತ್ಯಜಾಕ್ಷೀರಪ್ರೋಪಿ ವಾ ॥ ೫೭ ॥

ಶಕ್ತಸ್ಯ ಜಪತಸ್ತಸ್ಯ ವಿಘ್ನಾನ್ಯೇತಾನಿ ಲಕ್ಷಯೇತ್ ।
ಮೇಘಾನಾಂ ಸ್ತನಿತಂ ವಿದ್ಯುದ್ವೃಷ್ಟಿಕ್ಷೋಭಶ್ಚ ಸಾಗರೇ ॥ ೫೮ ॥

ಮತ್ಸ್ಯಾದಯಶ್ಚ ದೃಶ್ಯಂತೇ ವ್ರತೇ ವಾರುಣಸಂಜ್ಞಿತೇ । ॥ ೫೯ ॥

---

೫೫-೫೬. ಈ ವಿಧವಾದ ಭೂತವ್ರತಸಿದ್ಧಿಗಾಗಿ ಏಕಾಂತದಲ್ಲಿ ಕುಳಿತು ಅಸಹಾಯಕನಾಗಿ ಚಿತ್ತಶುದ್ಧಿಯಿಂದ ಬೀಜಮಂತ್ರವನ್ನು ಉಚ್ಚರಿಸುತ್ತಾ, ಸಕಲ ಪಾಪಗಳನ್ನು ಕಳೆದುಕೊಳ್ಳಬೇಕು. ಅಂಗುಷ್ಠದಿಂದ ಮಸ್ತಕಪರ್ಯಂತವಾಗಿ ಹುಟ್ಟುವ ಹನ್ನೊಂದು ವಿಧವಾದ ವ್ಯಾಧಿಗಳನ್ನು ಈ ಮಂತ್ರಪುರಶ್ಚರಣೆಯಿಂದ ಸುಖವಾಗಿ ಕಳೆದುಕೊಳ್ಳಬಹುದು. ಸಕಲವಿಘ್ನಗಳೂ ಇದರಿಂದ ನಿವಾರಣೆಯಾಗುವುವು.

೫೭-೫೯. ಈ ವ್ರತಾನುಷ್ಠಾನಕಾಲದಲ್ಲಿ ವ್ರತಿಯು ಆಹಾರಾರ್ಥವಾಗಿ ಎಲ್ಲಿ ಬೇಕಾದರೂ ಸಂಚರಿಸಬಹುದು. ವಾರುಣವ್ರತದಲ್ಲಿ ಮಾತ್ರ ಸದಾ ಜಲವನ್ನೇ ಭಕ್ಷಿಸಬೇಕು. ಅಥವಾ ಶುಕ್ತಿಕ್ಷೀರ (?) ಆಡಿನಹಾಲು ಇವುಗಳನ್ನು ಕುಡಿಯಬಹುದು. ಆದರೆ ಶಕ್ತನಾಗಿರುವವನಿಗೆ ಈ ಆಹಾರಗಳು ವಿಘ್ನಗಳೆನಿಸಬಹುದು. ಇದರ ಆಚರಣೆಯಿಂದ, ಅಂತರಿಕ್ಷದಲ್ಲಿ ಗುಡುಗು, ಸಿಡಿಲು, ಮಿಂಚು, ಸಮುದ್ರಗಳಲ್ಲಿ ಅಲ್ಲೋಲಕಲ್ಲೋಲತೆ ಇವುಉಂಟಾಗುವುವು. ಮೀನುಗಳು ಸಹ ಅಂತರಿಕ್ಷದಿಂದ ಬೀಳುವ ಸೂಚನೆಗಳು ಕಂಡುಬರುತ್ತವೆ. ಆಗ್ನೇಯವ್ರತಾಚರಣೆಯಲ್ಲಿ ಕಪಿಲವರ್ಣದ ಹಸುವಿನ ತುಪ್ಪವನ್ನು ಆಹಾರವನ್ನಾಗಿ ತೆಗೆದುಕೊಳ್ಳಬೇಕು.

ಸರ್ವಮಾದೀಪ್ಯತೇ ತಸ್ಯ ಶುಕ್ಲಾರ್ಧೇ ಚ ರಥೋದಕಂ ।
ವಾಯವ್ಯೇಽನಿಲಭಕ್ಷಃ ಸ್ಯಾಚ್ಛ್ವೇತಾಜಾಕ್ಷೀರಭುಗ್ಯಥಾ ॥ ೬೦ ॥

ವಿಘ್ನಂ ಪಾತ್ರಾಶನೇಃ ಪಾತೋ ವಾತಶ್ಚೋಭಶ್ಚ ದಾರುಣಃ ।
ಅಶೋಕಂ ಗೋರಸಂ ಪೀತ್ವಾ ವ್ರತಮೇತತ್ಸಮಾಚರೇತ್ ॥ ೬೧ ॥

ವಿಘ್ನಂ ಸರ್ಗಸ್ಯ ಸಂಪಾತೋ ಜ್ಯೋತಿಷಾಂ ಪತನಂ ತಥಾ ।
ಭೂತಾನಾಮಿಹ ಸರ್ವೇಷಾಮಶಕ್ತಿಶ್ಚರಿತುಂ ವ್ರತೀ ॥ ೬೨ ॥

ಭೂತಯೋನಿವ್ರತಂ ಕುರ್ಯಾದೇಷಾ ಮನ್ಯತಮೇನ ತು ।
ವ್ರತೇನ ಮಾಸಂ ಸಿದ್ಧಾಯಾಮಸ್ಯಾಂ ಸಿದ್ಧಾ ಭವಂತಿ ತೇ ॥ ೬೩ ॥

ಹನ್ಯಾದೇತೇನ ವೈ ರೋಗಾನ್ ದಿವ್ಯಾನ್ ಭೌಮಾನ್ ಸ್ವದೇಹಜಾನ್ ।
ಏತದೇವ ವ್ರತಂ ಕುರ್ಯಾಚ್ಛಾಂತಿಕರ್ಮಣಿ ಮಂತ್ರವಿತ್ ॥ ೬೪ ॥

---

೬೦-೬೧. ಈ ಆಗ್ನೇಯವ್ರತಾಚರಣೆಯಿಂದ ಆತನಿಗೆ ಸರ್ವವೂ ಅಗ್ನಿಯಂತೆ ಕಾಣುವುದು. ವಾಯವ್ಯವ್ರತದಲ್ಲಿ ವಾಯುಭಕ್ಷಕನಾಗಿಯೇ ಇರಬೇಕು. ಅಥವಾ ಬಿಳಿ ಆಡಿನ ಹಾಲನ್ನು ಕುಡಿಯಬಹುದು. ಇದರಲ್ಲಿ ಅಡ್ಡಿಯಾಗಿ, ಬಿರುಗಾಳಿ, ಅಶನಿಪಾತ ಇಂತಹವುಗಳು ಒದಗಬಹುದು. ಇದರಲ್ಲಿ ಅಶೋಕವರ್ಣದ (ಮಾಸಲು ಕೆಂಪು) ಹಸುವಿನ ಹಾಲನ್ನು ಕುಡಿದು ವ್ರತಸಮಾಪ್ತಿಮಾಡಬಹುದು.

೬೨-೬೩. ಈ ವ್ರತಕ್ಕೆ ಅಡ್ಡಿಯಾಗಿ, ನಕ್ಷತ್ರಗಳಪತನ, ಪಂಚಭೂತಗಳಿಂದ ಒದಗುವ ದೇಹದ ಅಶಕ್ತತೆ ಇವು ಉಂಟಾಗುವುವು. ಈ ವ್ರತಾಚರಣೆಯ ಅನಂತರ ಭೂತಯೋನಿ ವ್ರತವನ್ನು ಮಾಡಬೇಕು. ಈ ವ್ರತವು ನಿರ್ವಿಘ್ನವಾಗಿ ಸಿದ್ಧಿಸಿದರೆ ಆಗ ವ್ರತಿಯು ಸಿದ್ಧಪುರುಷನಾಗುವನು.

೬೪-೬೫. ಇದರಿಂದ ಮನುಷ್ಯನು ಸಕಲ ವಿಧವಾದ ರೋಗಾದಿಗಳನ್ನೂ ಕಳೆದುಕೊಳ್ಳಬಹುದು. ಈ ವ್ರತಾಚರಣಾನಂತರದಲ್ಲಿ ಶಾಂತಿಕರ್ಮಗಳಿಂದ ಶುದ್ಧಿ

**ವ್ರತಂ ವೈವಸ್ವತಂ ಕುರ್ವನ್ ಶಾಕಾಹಾರೋ ಭವೇನ್ನರಃ ।**
**ಸಾಧ್ಯಾನ್ ಋಷೀನ್ ವಸೂಂಶ್ಚೈವ ಪಶ್ಯೇತ್ಸರ್ವಾನಶೇಷತಃ ॥ ೬೫ ॥**

**ವಿಘ್ನಪ್ರಶಮನಂ ಪ್ರೋಕ್ತಂ ಸರ್ವಮಂತ್ರವಿಧಿಸ್ತ್ವಯಂ ।**
**ಮಧ್ಯೇ ಧ್ಯಾಯಂಜಪೇನ್ಮಂತ್ರಂ ತತ್ತ್ವಸ್ಯ ಹೃದಯಸ್ಯ ಚ ॥ ೬೬ ॥**

**ದೃಢಾಸನಃ ಸ್ಥಿರಮನಾ ಜಿತವಾಯುರ್ಜಿತೇಂದ್ರಿಯಃ ।**
**ಮುಖ್ಯಾಂ ಸಿದ್ಧಿಮವಾಪ್ನೋತಿ ತತ್ತ್ವಾಜಪ್ರಸೂತಿಜಾಂ ॥ ೬೭ ॥**

**ಇತಿ ಶ್ರೀ ಸಾಂಬಪುರಾಣೇ ಏಕಷಷ್ಟಿತಮೋಽಧ್ಯಾಯೇ ಜ್ಞಾನೋತ್ತರೇ ಶರೀರಸಾಧನಂ ಅಷ್ಟಮಂ ಪಟಲಂ.**

---

ಮಾಡಿಕೊಳ್ಳಬೇಕು. ಈ ವೈವಸ್ವತವ್ರತಾಚರಣೆಯ ಕಾಲದಲ್ಲೆಲ್ಲಾ ಶಾಕಾಹಾರಿ (ಸಸ್ಯಾಹಾರಿ) ಯಾಗಿಯೇ ಇರಬೇಕು. ಇದರಿಂದ ಸಿದ್ಧಪುರುಷನು ಸಕಲ ದೇವತೆಗಳನ್ನೂ, ಋಷಿಗಳನ್ನೂ ವಸುಗಳನ್ನೂ, ಸುಲಭವಾಗಿ ನೋಡಬಹುದು.

೬೬-೬೭. ಈ ವಿಧವಾದ ವ್ರತಾಚರಣೆಯ ಕಾಲದಲ್ಲಿ ಒದಗುವ ವಿಘ್ನಶಮನಾರ್ಥವಾಗಿ, ಭಾಸ್ಕರತತ್ತ್ವ, ಭಾಸ್ಕರಹೃದಯ, ಇವುಗಳನ್ನು ಜಪಿಸುತ್ತಿರಬೇಕು. ಹಾಗೆ ವಿಘ್ನಗಳು ಒದಗಿದರೂ, ದೃಢಾಸನನಾಗಿ, ಸಿದ್ಧಮನಸ್ಸಿನಿಂದ ಕುಳಿತು ವ್ರತವನ್ನು ಮುಂದುವರಿಸಿದರೆ ಆಗ ಸಂಪೂರ್ಣಸಿದ್ಧಿಯು ಒದಗಿ ಸಿದ್ಧಪುರುಷನೆನಿಸಿಕೊಳ್ಳುವನು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಶರೀರಸಾಧನವೆಂಬ ಜ್ಞಾನೋತ್ತರ ಖಂಡದಲ್ಲಿ ಅರುವತ್ತೊಂದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ದ್ವಿಷಷ್ಟಿತಮೋಽಧ್ಯಾಯಃ

---

ಸಿದ್ಧಯೇ ಸರ್ವಕಾರ್ಯಾಣಾಂ ವಿಧಾನಮಭಿಧೀಯತೇ ।
ಸಂಪುಟಾನಾಂ ಯಥಾ ತತ್ತ್ವಂ ಕರ್ಮಣಾಂ ಸಿದ್ಧಯೇಽಪಿ ಚ ॥ ೧ ॥

ಸಕಲೀಕೃತ್ಯ ದೇಹಂ ಸ್ವಂ ಪ್ರಾಣಾಯಾಮಶ್ಚ ಯೋಜಯೇತ್ ।
ಶಿವಾಖ್ಯಾಂ ಪರಮಾಖ್ಯಾಂ ಚ ಯೋನಿಂ ಹೃನ್ನಾಭಿತಸ್ತಥಾ ॥ ೨ ॥

ವಾಯುರಗ್ನೇರಥಸ್ತಾಚ್ಚ ಸಂಹರನ್ ಸಹ ಪಾತಕೈಃ ।
ಅಂತರೇ ಪ್ರಾಣಮಾಯಚ್ಛೇತ್ಸದ್ಯಃ ಸಿದ್ಧ್ಯತಿ ಯೋಗವಿತ್ ॥ ೩ ॥

---

## ಅರವತ್ತೆರಡನೆಯ ಅಧ್ಯಾಯ

೧-೨. ಇನ್ನು ಮುಂದೆ ಸರ್ವಸಿದ್ಧಿಪ್ರದವಾದ ಕೆಲವು ಕಾರ್ಯಗಳಲ್ಲಿ ಸಂಪುಟಗಳ ಸ್ವರೂಪವನ್ನು ವಿವರಿಸುವೆನು. ತನ್ನ ದೇಹವನ್ನೇ ಕಲಾತ್ಮಕವಾದ ಒಂದು ಮಂಡಲದಂತೆ ಭಾವಿಸಿ ಅದರಲ್ಲಿ ಶಿವತತ್ತ್ವವನ್ನೂ ಪರಮತತ್ತ್ವವನ್ನೂ ಅನುಸಂಧಾನ ಮಾಡುತ್ತಾ ತನ್ನ ಹೃನ್ನಾಭಿಯನ್ನೇ ಅಕ್ಷರಯೋನಿಯನ್ನಾಗಿ ಭಾವಿಸಿಕೊಂಡು ವಿಧಿವತ್ತಾಗಿ ಪ್ರಾಣಾಯಾಮ ಮಾಡಬೇಕು.

೩-೪. ಹೀಗೆ ವಾಯು, ಅಗ್ನಿ ಇವುಗಳನ್ನು ಹೃದಯಾಂತರಾಳದಲ್ಲಿಯೇ ನೆಲೆಯಾಗಿ ನಿಲ್ಲಿಸೋಣದರಿಂದ ನಿಜವಾದ ಪ್ರಾಣಧಾರಣೆಯಾಗಿ ತನ್ಮೂಲಕ ಸಕಲ ಸಿದ್ಧಿಗಳೂ ಕೈಗೂಡುವುವು. ಬ್ರಹ್ಮತತ್ತ್ವಾಭ್ಯಾಸದಿಂದ ಚಿತ್ತಶುದ್ಧಿಯೊದಗಿ ಜ್ಞಾನಿ

ಬ್ರಹ್ಮತತ್ತ್ವಸ್ತ್ರಿಭಿಶ್ಶೋಧ್ಯಾಸದ್ಯತೇ ನ ಶುಭಂ ಭವೇತ್ ।
ಪರಸ್ಯಾಪಿ ದಹೇನ್ಮಂತ್ರೀ ಗ್ರಾಮಂ ನಗರಮೇವ ಚ ॥ ೪ ॥

ಗೃಹಂ ಚಾಪಿ ದುರಾಧರ್ಷಂ ಭೂತಂ ಚಾಪಿ ಮಹಾಬಲಂ ।
ನಿಹಂತಿ ವೈ ಪ್ರಯುಕ್ತಸ್ಸನ್ ಕ್ಷಣಾದಗ್ನಿರಿವೇಂಧನಂ ॥ ೫ ॥

ವ್ಯಾಧಿಂ ಚಾಪಿ ದುರಾಬಾಧಾಂ ತನೂತ್ಥಾಂ ದೈವಿಕಾಂ ತಥಾ ।
ನಿಹಂತಿ ತತ್ರ ತೂರ್ಣಂ ಚ ದಿವಾಕರವ್ರತೀ ನರಃ ॥ ೬ ॥

ಬೀಜಯೋನಿರ್ಭವೇನ್ಮಧ್ಯೇ ಪೃಥಿವ್ಯಾಶ್ಚಾರುಣಸ್ಯ ಚ ।
ಪೂರ್ವವದ್ಧ್ಯಾನಯೋಗಃ ಸ್ಯಾತ್ಪ್ರಾಣಯೋಗಸ್ತಥೈವ ಚ ॥ ೭ ॥

ತೇಷಾಮಧ್ಯಯನೇ ಚೈವ ಯೇ ಪೂರ್ವಂ ಚೈವ ಸಾಧಿತಾಃ ।
ಶಾಂತಿಂ ಚೈತಾಂ ಪ್ರಯುಂಜೀತ ಕೃತಕೃತ್ಯೋ ಭವೇತ್ತದಾ ॥ ೮ ॥

---

ಯಾಗುವನು. ಮಂತ್ರಾನುಸಂಧಾನದಿಂದ ಉಪಾಸಕನೆನಿಸಿದವನು ಅವನೇ ಶತ್ರುಗಳ ನಗರಾದಿಗಳನ್ನು ಕ್ಷಣಕಾಲದಲ್ಲಿ ನಾಶಮಾಡುವ ಶಕ್ತಿಯುಳ್ಳವನಾಗುವನು.

೫-೭. ಉಪಾಸಕನು, ವಶವಾಗದಿರುವ ಗೃಹವನ್ನೂ, ಬಲಿಷ್ಠವಾದ ಭೂತಾದಿಗಳನ್ನೂ ವಶಮಾಡಿಕೊಳ್ಳುವನು. ದುಷ್ಟವ್ಯಾಧಿಯನ್ನೂ, ದೈಹಿಕವಾದ ಮತ್ತು ದೈವಿಕವಾದ ಇತರ ಬಾಧೆಗಳನ್ನೂ, ಅಗ್ನಿಯು ಸೌದೆಯನ್ನು ದಹಿಸುವಂತೆ ದಹಿಸಬಲ್ಲನು.

೭-೮. ಹಿಂದೆ ಹೇಳಿದಂತೆ ಪೃಥಿವೀ ಮತ್ತು ಅರುಣನ ಬೀಜಯೋನಿಗಳನ್ನು ಧ್ಯಾನಯೋಗದಿಂದಲೂ ಪ್ರಾಣಯೋಗದಿಂದಲೂ ಅಧ್ಯಯನದಿಂದಲೂ ಸಾಧಿಸಿದವನು ಹಿಂದೆ ಹೇಳಿದ ಸಕಲ ಸಿದ್ಧಿಗಳನ್ನೂ ಪಡೆಯುವನು. ಆದರೆ ಆತನು ಇಷ್ಟಾರ್ಥಸಿದ್ಧಿಯಾದಮೇಲೆ ಶಾಂತಿಕರ್ಮಾದಿಗಳಿಂದ ಶುದ್ಧನಾಗಬೇಕು.

ದ್ರವ್ಯಾಪಹರಣೇ ವಾಪಿ ನ್ಯಾಸನಿದ್ಯಾತನೇಪಿ ವಾ ।
ನಾಶನೇ ಚೈವ ದೇವಾನಾಂ ಗ್ರಹೋತ್ಪಾದನಕರ್ಮಣಿ ॥ ೯ ॥

ಕುರ್ವನ್ನೇತಾನಿ ಯೋಗೀಸ್ಯಾದ್ವಾಯುರಗ್ನಿ ಮಿವೇಂಧನಂ ।
ಪರಸ್ಥಾನಾಂ ಚ ಸರ್ವೇಷಾಮುಪಹಾರಃ ಪ್ರಯುಜ್ಯತೇ ॥ ೧೦ ॥

ಏಷ ಸಂಹರತೇ ಸರ್ವಂ ಯತ್ಕಿಂಚಿಜ್ಜಗತೀಗತಂ ।
ಆರೂಢಃ ಸಂಶಯೋ ಯುಂಜನ್ನಾನ್ಯಥಾ ತು ಕದಾಚನ ॥ ೧೧ ॥

ಸ ತು ಹೋಮಸ್ತಥಾಗ್ನೌ ತು ಯದಾ ರೋಗೇಣ ಯುಜ್ಯತೇ ।
ತತ್ಕ್ಷಣಾದ್ಧಂತಿ ತಾನ್ ಸರ್ವಾನ್ ಸರೋಗಾಂಧಾಂ ತು ಯೋನಿಜಾಂ ॥

ಸ್ಥಾವರಂ ಜಂಗಮಂ ವಾಪಿ ಕೃತ್ರಿಮಂ ಚಾಪಿ ಯದ್ವಿಷಂ ।
ಕ್ಷಣಾನ್ನಾಶಯತಿ ಹ್ಯೇಷಃ ಯದಿ ಸಮ್ಯಕ್ಪ್ರಯುಜ್ಯತೇ ॥ ೧೩ ॥

---

೯-೧೦. ಈ ವಾಯುಬೀಜಾಕ್ಷರ ಮಂತ್ರಸಿದ್ಧಿಯಿಂದ ಪರದ್ರವ್ಯಾಪಹಾರ ನ್ಯಾಸವಾಗಿಟ್ಟಿರುವ ಹಣದಗಂಟನ್ನು ಪುನಃ ಹೊಂದುವುದೂ ದೈವಸ್ವತ್ತನ್ನು ನಾಶ ಪಡಿಸುವುದು, ಗ್ರಹೋತ್ಪಾದನಕಾರ್ಯಗಳನ್ನು ನಡೆಸುವುದು, ಪರಗತವಾದ ಸಕಲ ವಸ್ತುಗಳನ್ನೂ ಅಪಹರಿಸುವುದು, ಈ ಎಲ್ಲಾ ಕಾರ್ಯಗಳೂ ಸುಲಭವಾಗಿ ನೆರವೇರು ವುವು. ಇಂತಹ ಕರ್ಮಗಳನ್ನು ಮಾಡುವವರನ್ನು ನಿಗ್ರಹಿಸುವ ಶಕ್ತಿಯೂ ಆತನಿಗಿರುವುದು.

೧೧-೧೨. ಈ ಉಪಾಸನಾಕ್ರಮವು ಜಗತ್ತಿನಲ್ಲಿ ಅಡಗಿರುವ ಸಕಲ ಪ್ರಾಣಿ ಗಳನ್ನೂ ಎಲ್ಲಿದ್ದರೂ ಅಲ್ಲಿಯೇ ಧ್ವಂಸಮಾಡಿಬಿಡುವುದು. ಆದರೆ ಈ ಅಭ್ಯಾಸವು ಮಾತ್ರ ಸಂಶಯವಿಲ್ಲದೆ ಸರಿಯಾಗಿ ನಡೆದಿರಬೇಕು. ಮೇಲೆ ಹೇಳಿದ ಕ್ರಮದಿಂದ ಹೋಮಾದಿಗಳನ್ನು ನಡೆಸಿದುದೇ ಆದರೆ ಒಡನೆಯೇ ದೇಹಜನ್ಯವಾದ ಸಕಲ ರೋಗ ಗಳೂ ತಾವಾಗಿಯೇ ನಾಶವಾಗುವುವು.

೧೩-೧೪. ಈ ವಿಧಿಯಿಂದ ಸ್ಥಾವರಜಂಗಮ ವಸ್ತುಗಳ ದೆಸೆಯಿಂದ ಒದ ಗುವ ಸಕಲ ಕಷ್ಟಗಳೂ ವಿಷಾದಿಗಳ ಬಾಧೆಯೂ, ಕ್ಷಣಕಾಲದಲ್ಲಿ ನಾಶವಾಗುವುವು.

ಸಂಕ್ರಮೇಣ ತಥಾ ವ್ಯಾಧಿರ್ವಿಪರೀತೇನ ಯೋಜಿತಃ ।
ಚಿಕಿತ್ಸಾ ಮಂತ್ರಪೂರ್ವೇಣ ಕ್ರೀಡಾರ್ಥಮನುಯೋಜಯೇತ್ ॥ ೧೪ ॥

ಧ್ಯಾಯೇತ್ತು ವಾರುಣೇ ವಾಯುಂ ಶಾಂತ್ಯರ್ಥಂ ಶಿವಸಂಪುಟೇ ।
ವೃಷ್ಟಿಂ ಕಾರಯತೇಹ್ಯೇಷ ಭೂತಿಯೋನಿಸವೀಜಕಃ ॥ ೧೫ ॥

ಷಡ್ವಿಧಂ ಚ ಸೃಜತ್ಯಸ್ಯ ಭೂತಸಂಹಾರಿಣಸ್ತತಃ ।
ವಾಯುನಾ ವೇಷ್ಟಯೇತ್ಸರ್ವಂ ಸ್ತಂಭಿತಂ ಸ್ಯಾಜ್ಜಗನ್ಮಹತ್ ॥ ೧೬ ॥

ಅಶ್ವಾನಾಂ ತು ಜಪೇನ್ಮಂತ್ರಂ ಯೋಗಿನಾಂ ಚ ಗತಿಂ ತಥಾ ।
ನಿರುಂಧ್ಯಾದ್ವ್ಯದ್ಯದೀಕ್ಷೇತ ವ್ರಣವ್ಯಾಧಿವಿಷಂ ಚ ಯತ್ ॥ ೧೭ ॥

ಧ್ಯಾಯಂಶ್ಚ ಹೋಮಯೇನ್ನಿತ್ಯಂ ಯುಕ್ತೋ ಮಂತ್ರಾರ್ಚನೇ ನರಃ ।
ಉದ್ಘಾಟನೇ ಚ ಸಂಹಾರೇ ಯೋಜ್ಯಶ್ಚಾಪಿ ದಶಾತ್ಮಕೇಃ ॥ ೧೮ ॥

---

ಕೇವಲ ಅಂಟುರೂಪದಿಂದ ಹರಡಿದ್ದ ವ್ಯಾಧಿಯನ್ನು ಕೇವಲ ಮಂತ್ರಪುರಶ್ಚರಣೆಯಿಂದಲೇ ನಾಶಮಾಡಿಕೊಳ್ಳಬಹುದು.

೧೫-೧೬. ವಾರುಣಪ್ರಯೋಗಾನಂತರ ವಾಯುಮಂತ್ರಪುರಶ್ಚರಣೆಯನ್ನು ಶಿವಸಂಪುಟಾತ್ಮಕವಾಗಿ ಶಾಂತ್ಯರ್ಥವಾಗಿ ಜಪಿಸಬೇಕು. ಭೂತಯೋನಿ ಮಂತ್ರ ಜಪದಿಂದ ವೃಷ್ಟಿಯುಂಟಾಗುವುದು. ಅಲ್ಲದೆ ಸಕಲ ಭೂತಗಳನ್ನೂ ವಾಯುಮಂತ್ರ ಪುರಶ್ಚರಣೆಯಿಂದ ಏಕದಾ ಸ್ತಂಭನ ಮಾಡಿಬಿಡಬಹುದು.

೧೭-೧೮. ಸರಿಯಾಗಿ ಈ ಮಂತ್ರಸಿದ್ಧಿಯನ್ನು ಪಡೆದವರು ಅಶ್ವಗತಿ, ಯೋಗಿಗಳ ನಡಗೆ, ಇನ್ನೂ ವ್ರಣಾದಿಪೀಡಾವ್ಯಾಧಿಗಳು ಇವುಗಳನ್ನು ತಡೆಗಟ್ಟಬಹುದು. ಅಲ್ಲದೆ ವಿಧಿವತ್ತಾಗಿ ಇದನ್ನು ಧ್ಯಾನಮಾಡಿ ಅಗ್ನಿಯಲ್ಲಿ ಹೋಮಮಾಡಿದವರು, ಸಕಲ ವಸ್ತುಗಳ ಉದ್ಘಾಟನ, ಉಪಸಂಹಾರ ಇವುಗಳನ್ನು ನಡೆಸುವರು, ಪರಮಪುಟಗಳಲ್ಲಿ ಆಯಾ ದ್ರವ್ಯಗಳನ್ನೂ ಆಯಾ ಮಂತ್ರಗಳ ಪುರಶ್ಚರಣೆಯಿಂದ ನಿಲ್ಲಿಸುವುದಾದರೆ

**ಸರ್ವತ್ರ ವೇಷ್ಟನಂ ಕೃತ್ವಾ ತತಃ ಶಾಂತಿಂ ಪ್ರಯೋಜಯೇತ್ ।**
**ಪರಮಪುಟಮಧ್ಯೇ ತು ದ್ರವ್ಯಮಂತ್ರೇಣ ಯೋಜಯೇತ್ ।**
**ಅಸಂದೇಹೇನ ಸಿದ್ಧ್ಯೇತ ಬುದ್ಧ್ವಾ ಮಂತ್ರವಿಭಾಗಶಃ ॥ ೧೯ ॥**

**ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇ ದ್ವಿಷಷ್ಟಿತಮೋಽಧ್ಯಾಯೇ**
**ನವಮಂ ಪಟಲಂ.**

---

ಅದೇ ದ್ರವ್ಯಗಳು ಎಲ್ಲಿದ್ದರೂ ಸ್ತಂಭನವಾಗಿಬಿಡುವುವು. ಇದು ನಿಜ. ಇದಕ್ಕೆ ಮೂಲಭೂತವಾಗಿ ಮೊದಲು ಆಯಾ ಮಂತ್ರಸಿದ್ಧಿಗಳನ್ನೂ ಹೋಮಾದಿ ಸಕಲ ವಿಧಿಗಳನ್ನೂ ಚೆನ್ನಾಗಿ ಗುರುಮುಖದಿಂದ ಅರಿತು ಇದನ್ನು ಅನುಷ್ಠಿಸಬೇಕು. ಹೀಗೆ ಸ್ತಂಭನಾದಿ ಕ್ರಿಯೆಗಳಿಂದ ಸಿದ್ಧಿಯನ್ನು ಪಡೆದಮೇಲೆ ಶಾಂತ್ಯಾದಿಗಳನ್ನಾಚರಿಸಿ ತಾನು ಪರಿಶುದ್ಧನಾಗಬೇಕು.

ಇಲ್ಲಿಗೆ ಶ್ರೀ ಸೂರ್ಯಪ್ರಶಂಸಾ ಬೋಧಕವಾದ ಸಾಂಬಪುರಾಣದಲ್ಲಿ
ಜ್ಞಾನೋತ್ತರಖಂಡದಲ್ಲಿರುವ ಅರುವತ್ತೆರಡನೆಯ
ಅಧ್ಯಾಯವು ಸಮಾಪ್ತವಾದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ತ್ರಿಷಷ್ಟಿತಮೋಽಧ್ಯಾಯಃ

---

ಸಾಧಕಸ್ಯೇಹ ಯುಕ್ತಸ್ಯ ವ್ಯಾಧಿರ್ಭವತಿ ದಾರುಣಃ ।
ಉಪಸರ್ಗಃ ಸಮಂ ತಸ್ಯ ಚಿಕಿತ್ಸಾಸ್ಯ ನ ದುಷ್ಯತಿ ॥ ೧ ॥

ಧಾತುರೇಕೋ ಗ್ರಹೋ ವಾಪಿ ಕೋಽಪ್ಯತ್ರಾಧ್ಯಾಸಿತೋಽಪಿ ವಾ ।
ಸ್ಮೃತ್ವಾ ಯೋ ಮನಸಾ ಪಾಪೋ ಮಂತ್ರಕೈರ್ನ ಪ್ರಶಾಮ್ಯತಿ ॥ ೨ ॥

ಕ್ಷೇತ್ರಾಚ್ಚಾಂಡಾಲಸೇನಾಯಾಶ್ಚಾಗ್ನಿಹೋತ್ರಗೃಹಾತ್ತಥಾ ।
ತಸ್ಮಾದಪಂಚತತ್ಪೂರ್ಣಂ ಮಾಸವೃದ್ಧ್ಯೈ ಪ್ರಕಲ್ಪಯೇತ್ ॥ ೩ ॥

---

## ಅರುವತ್ತಮೂರನೆಯ ಅಧ್ಯಾಯ

೧-೨. ಮಂತ್ರಸಾಧಕನಿಗೆ ದಾರುಣವಾದ ವ್ಯಾಧಿಯುಂಟಾದರೆ ಮುಂದೆ ಹೇಳುವಂತೆ ಕೆಲವು ಮಂತ್ರಪೂರ್ವಕವಾದ ಹೋಮಾದಿಚಿಕಿತ್ಸೆಯನ್ನು ನಡೆಸಬೇಕು. ಧಾತುಸಂಬಂಧವಾಗಿಯಾಗಲಿ, ಗ್ರಹಸಂಬಂಧಿಯಾಗಲಿ, ಬರುವ ವ್ಯಾಧಿಯು ಕೇವಲ ಮಂತ್ರಪುರಶ್ಚರಣೆಯಿಂದ ಹೋಗಲಾರದು.

೩-೪. ಚಂಡಾಲನ ಯಾಜಮಾನ್ಯವಿರುವ ಕ್ಷೇತ್ರದಿಂದಲೂ, ಅಗ್ನಿಹೋತ್ರ ಗೃಹದಿಂದಲೂ ಮಾಸವೃದ್ಧಿಯಾಗಿ ಅಂದರೆ ಚೈತ್ರಾದಿಮಾಸದ ಸಂಖ್ಯೆಯುಷ್ಟು ದೂರದೇಶದಲ್ಲಿ ಮುಂದೆಹೇಳುವ ಪೂಜಾಸಾಮಗ್ರಿಗಳನ್ನು ಸಂಪಾದಿಸಿ ಆ ಪ್ರದೇಶ

ಕ್ಷೇತ್ರಾಚ್ಚಂಡಾಲಸೇನಾಚ್ಚ ತಥಾ ದ್ವಿಜಪರಾ ಅಪಿ ।
ಕ್ರಮವೃದ್ಧಂ ಚ ತತ್ಸರ್ವೇ ಬಧ್ನೀಯಾನ್ಮಿಶ್ರಿತಂ ಕ್ರಮಾತ್ ॥ ೪ ॥

ತಿಸ್ರಃ ಪೋಟಲಿಕಾಃ ಕಾರ್ಯಾಸ್ಸೂತಿಕರ್ಪಟಿಕೇನ ಚ ।
ಸಂಮಾರ್ಜನತಟೇ ಚೈವ ಆರಭೇತ ಚರೋಃ ಕ್ರಿಯಾಂ ॥ ೫ ॥

ಅಂತ್ಯಜಾನಾಂ ಗೃಹಸ್ಥೈಶ್ಚ ಶ್ರಪಯೇತ್ತಂಡುಲೈಶ್ಚ ತಾಂ ।
ಧ್ಯಾಯನ್ ವೈ ಪಾತಕಂ ಘೋರಂ ಸಂಪುಟಂ ಯದಿದಾರುಣಂ ॥ ೬ ॥

ಯಾವಚ್ಚ ಶ್ರಪತೇ ವಹ್ನೌ ತಾವದ್ರೋಗಃ ಪ್ರಣಶ್ಯತಿ ।
ಖದಿರೇಥ ತಥಾ ಶೂಲೇ ಚೈಕವೃದ್ಧ್ಯಾ ಕ್ರಮಂ ಗತಾಃ ॥ ೭ ॥

ಬದ್ಧಾಃ ಪೋಟಲಿಕಾಃ ಸರ್ವಾ ಯಥಾಪೂರ್ವಮವಸ್ಥಿತಾಃ ।
ವರುಣೇತ್ವಾಕೃತಿಂ ಕೃತ್ವಾ ಕ್ಷುರಕೃತ್ತಾಂ ತು ಹೋಮಯೇತ್ ॥ ೮ ॥

---

ಕ್ಕಿಂತ ಆ ಮಾಸಸಂಖ್ಯೆಯಷ್ಟು ದೂರವಾಗಿರುವ ಪ್ರದೇಶದಲ್ಲಿ ಈ ಕರ್ಮಾಚರಣೆಯನ್ನು ನಡೆಸಬೇಕು.

೫-೬. ಸೂತಿಕರ್ಪಟಿಕ (ಪ್ರಸವಗೃಹದ ಹರಕಲುಬಟ್ಟೆ) ದಿಂದ ಮೂರು ಪೋಟಲಿಕ (ಬೊಂಬೆ) ಗಳನ್ನು ನಿರ್ಮಾಣಮಾಡಬೇಕು. ಗುಡಿಸುವ ವಸ್ತುವಿನ ಸಮೀಪದಲ್ಲಿ ಹೋಮಕ್ಕಾಗಿ ಅನ್ನ ಮಾಡಬೇಕು. ಆ ಅನ್ನಕ್ಕೆ ಚಂಡಾಲನ ಮನೆಯ ಮತ್ತು ತನ್ನ ಮನೆಯ ಅಕ್ಕಿಗಳೆರಡನ್ನೂ ಬೆರಸಿ, ಇಡಬೇಕು. ಆ ಅಕ್ಕಿಯನ್ನು ಅನ್ನ ಮಾಡುವ ಕಾಲದಲ್ಲಿ ಹಿಂದೆ ಹೇಳಿದ ಸಂಪುಟಾದಿಗಳನ್ನು ಚೆನ್ನಾಗಿ ಧ್ಯಾನಮಾಡಬೇಕು.

೭-೮. ಅದು ಬೇಯುವವರೆಗೂ ಆ ರೀತಿ ಸಂಪುಟೀಕರಣಪೂರ್ವಕವಾಗಿ ಧ್ಯಾನಮಾಡುತ್ತಿದ್ದರೆ ಅದು ಅನ್ನವಾಗುವುದರೊಳಗಾಗಿ ವ್ಯಾಧಿಯು ಶಮನವಾಗುವುದು. ಆಗ ಕಗ್ಗಲಿ ಮತ್ತು ಕಬ್ಬಿಣ ಇವುಗಳಲ್ಲಿ ಒಂದುಭಾಗವು ಹೆಚ್ಚಾಗಿರುವಂತಹ ಮೊಳೆಗಳಿಂದ ಆ ಬೊಂಬೆಗಳನ್ನು ಕಟ್ಟಿ ವರುಣಾಕಾರದಲ್ಲಿ ನಿರ್ಮಿಸಿ ಒಂದನ್ನು ಕತ್ತಿಯಿಂದ ಕತ್ತರಿಸಿ ಹೋಮಮಾಡಬೇಕು.

ರುಧಿರಂ ಚ ವಿಷಂ ತೈಲಮಾಹುತ್ಯಂತೇ ತು ದೀಪನಂ ।
ಅನ್ಯೇ ಪೋಟಲಿಕೇ ದ್ವೇ ತು ಜುಹುಯಾಚ್ಛೂಲಲಕ್ಷಿತೇ ॥ ೯ ॥

ಭಾಗಂ ಬದ್ಧ್ವಾ ತೃತೀಯಂ ತು ಚರೋಃ ಕರ್ಮ ಸಮಾರಭೇತ್ ।
ನಿವೇದ್ಯ ಚ ಬಲಿಂ ತೇನ ಸ್ನಾಯಾದ್ರೋಗಾನ್ನಿಹಂತಿ ಸಃ ॥ ೧೦ ॥

ತತ್ಕ್ಷಣಾಚ್ಛುದ್ಧಿಮಾಪ್ನೋತಿ ಚಂದ್ರವತ್ಪರಿನಿರ್ಮಲಃ ।
ಹತ್ವಾ ರೋಗಸಹಸ್ರಾಣಿ ತತಸ್ಸಾಧ್ಯಾಂಶ್ಚ ಸಾಧಯೇತ್ ॥ ೧೧ ॥

ಶರೀರಾನ್ಮನಸಶ್ಚೈವ ಯೇ ತು ರೋಗಾಸ್ಸುದಾರುಣಾಃ ।
ಘಾತಕಾನ್ ಘಾತಯೇತ್ಸರ್ವಾನ್ ಕೃತಜ್ಞಃ ಸಾಧುಸಂಮತಃ ॥ ೧೨ ॥

ರಾಜಾ ವಿಪ್ರಸ್ತಥಾ ವರ್ಣಾಃ ಸಾಧನಾರ್ಥಂ ಪ್ರತಿಷ್ಠಿತಾಃ ।
ಆಪತ್ಸು ಘಾತಯೇತ್ತೀವ್ರಾ ವಿಧಿನಾ ಘಾತಕಃ ಸ ತು ॥ ೧೩ ॥

---

೯-೧೦. ಹೋಮಾನಂತರದಲ್ಲಿ ರಕ್ತ, ವಿಷ, ಎಣ್ಣೆ ಮೊದಲಾದುವುಗಳಿಂದ ಅಗ್ನಿಯನ್ನು ಉರಿಸಬೇಕು. ಇದೇರೀತಿ ಉಳಿದ ಎರಡು ಬೊಂಬೆಗಳನ್ನು ಮೊಳೆಯಿಂದ ಕೂಡಿಸಿ ಹೋಮಮಾಡಬೇಕು. ಅನಂತರ ಚರುಕರ್ಮದಿಂದ ಹೋಮವನ್ನು ಮುಗಿಸಿ, ನಿವೇದನಾದಿಗಳಿಂದ ಪೂಜಿಸಿ, ಅನಂತರ ಸ್ನಾನಮಾಡಬೇಕು. ಇದರಿಂದ ಸಕಲ ವ್ಯಾಧಿಗಳೂ ನಿವಾರಣೆಯಾಗುವುವು.

೧೧-೧೨. ಹೀಗೆ ಮಾಡುವುದರಿಂದ ಸಾಧಕನು ಸಕಲ ರೋಗಗಳನ್ನೂ ಕಳೆದುಕೊಂಡು, ಚಂದ್ರನಂತೆ ನಿರ್ಮಲದೇಹಿಯೆನಿಸುವನು. ಅನಂತರ ಆತನು ಯಾವ ಇಷ್ಟಾರ್ಥಗಳನ್ನಾದರೂ ಸಾಧಿಸಬಹುದು. ಇಂತಹವರು ಶಾರೀರಕವಾದ ಮತ್ತು ಮಾನಸಿಕವಾದ ಸಕಲ ವ್ಯಾಧಿಗಳನ್ನೂ ಕಳೆದುಕೊಂಡು ಸಾಧುಸಮ್ಮತರಾಗಿ ಸುಖವಾಗಿ ಜೀವನ ನಡೆಸುವರು.

೧೩-೧೪. ಬ್ರಾಹ್ಮಣ ಕ್ಷತ್ರಿಯಾದಿ ಯಾವ ವರ್ಣದವರೇ ಆಗಲಿ, ಈ ಸಾಧನೆಯನ್ನು ಅವಲಂಬಿಸಬಹುದು. ಆದರೆ ತಮ್ಮ ಆಪತ್ಕಾಲದಲ್ಲಿ ಮಾತ್ರ

ವಿನಾಯಕಾ ಹರಂತ್ಯೇತೇ ರೂಪೈಃ ಸಿದ್ಧ್ಯೈಶ್ಚ ಮಂತ್ರಿಣಾಂ ।
ನ ದೋಷೋ ಘಾತನೇ ತೇಷಾಮಿತಿ ರುದ್ರಃ ಪ್ರಭಾಷತೇ ॥ ೧೪ ॥

ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇ ತ್ರಿಷಷ್ಟಿತಮೋಽಧ್ಯಾಯೇ
ದಶಮಂ ಪಟಲಂ ಸಮಾಪ್ತಂ.

---

ಇದನ್ನು ನಡೆಸಬೇಕು. ಮಂತ್ರಿಗಳು (ಮಂತ್ರಜ್ಞರು) ವಿಧಿವತ್ತಾಗಿ ಜನರಿಗೆ ಆಗಾಗ ಬರುವ ಅಡ್ಡಿಆತಂಕಗಳನ್ನು ಪರಿಹರಿಸಲು ಇದನ್ನು ಕೈಕೊಳ್ಳುವುದು ಅಷ್ಟು ಪಾಪಕರವಲ್ಲವೆಂದು ಸಾಕ್ಷಾದ್ರುದ್ರನೇ ಅಪ್ಪಣೆಕೊಡಿಸಿರುವನು. ಎಂದು ನಾರದ ಮಹರ್ಷಿಗಳು ರಾಜನಿಗೆ ವಿವರಿಸಿದರು.

ಇಲ್ಲಿಗೆ ಸಾಂಬಪುರಾಣದಲ್ಲಿ ಅರುವತ್ತುಮೂರನೆಯ
ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಚತುಷ್ಷಷ್ಟಿತಮೋಧ್ಯಾಯಃ

---

ಅಭಿಚಾರವಿಧಿಂ ಶ್ರುತ್ವಾ ಮಂತ್ರಸ್ಸರ್ವಾರ್ತಿನಾಶನಃ ।
ಅಥಶ್ಯೂಲಾನ್ ಗೃಹಾನ್ ಕ್ರೂರಾನ್ ಭೈರವಾಂಶ್ಚ ಮಹಾಬಲಾನ್ ॥ ೧ ॥

ಮಹಾಮಾರೀಕುಲೋದ್ಭೂತಾನುತ್ಸಾದಯತಿ ಮಂತ್ರವಿತ್ ।
ಯಮಜಿಹ್ವಾಂ ಮೃತ್ಯುಭೂತಾಮಘೋರಾಂ ಚಾಪಿ ಯೋಜಯೇತ್ ॥೨॥

ಪ್ರಾಶ್ನಂ ತು ಮಹಾರೌದ್ರಂ ಶತ್ರುಪಕ್ಷಭಯಂ ಕರಂ ।
ಕುರ್ಯಾತ್ತು ಕಂಟಕಂ ಶಾಲಂ ಯಾಮ್ಯಾಂ ದಿಶಮುಪಾಶ್ರಿತಃ ॥ ೩ ॥

---

## ಅರುವತ್ತುನಾಲ್ಕನೆಯ ಅಧ್ಯಾಯ

೧-೨. ಅಭಿಚಾರವಿಧಿಯಿಂದ ಮಂತ್ರವು ಸಾಧಕರ ಸಕಲ ಅನಿಷ್ಟಗಳನ್ನೂ ಪರಿಹರಿಸತಕ್ಕದ್ದಾಗುವುದು. ಇದರಿಂದ ಶೂಲಗಳಿಂದ ತುಂಬಿದ ಗೃಹಸಂಬಂಧವಾದ ಕ್ರೂರಗ್ರಹಗಳನ್ನೂ, ಭೈರವಾದಿ ಮಹಾ ಮಹಾ ದುಷ್ಟದೇವತಾ ಸಮೂಹವನ್ನೂ, ಈ ಮಂತ್ರಜ್ಞನು ಸುಲಭವಾಗಿ ಓಡಿಸಬಲ್ಲನು. ಅಲ್ಲದೆ ಯಮಜಿಹ್ವೆಯೆಂಬ ಮೃತ್ಯುವನ್ನೂ ಸಹ ತನ್ನ ಮಂತ್ರಬಲದಿಂದ ನಿವಾರಿಸಿಕೊಳ್ಳುವನು.

೩-೪. ಇದರಲ್ಲಿ ಪ್ರಾಶ್ನವೆಂಬುದು ಬಹು ಭಯಂಕರವಾದ ಕರ್ಮ. ಇದು ಶತ್ರುಗಳನ್ನು ಸಂಪೂರ್ಣವಾಗಿ ನಿಗ್ರಹಿಸಬಲ್ಲುದು. ಇದನ್ನು ನಡೆಸಬೇಕಾದರೆ

ನೈಋತ್ಯಾಂ ವಾ ಸ್ಮಶಾನೇ ವಾ ತ್ರಿಕೋಣಜ್ಞಾಂತಮಾಲಿಖೇತ್ ।
ಸ್ಮಶಾನೇ ಕೇಶಸಂಛನ್ನೇ ಕಂಟಕೈಸ್ಸರ್ವತೋ ವೃತೇ ॥ ೪ ॥

ದ್ವಾರಂ ಚ ಕಲ್ಪಯೇತ್ತತ್ರ ಕಂಟಕೈಃ ಕಲ್ಪಿತಾರ್ಗಲಂ ।
ಅಂತ್ರಮಾಲಾಸಮಾಯುಕ್ತಂ ಯಾಮ್ಯಾಂ ದಿಶಮುಪಾಶ್ರಿತಂ ॥ ೫ ॥

ಕಪಾಲೈರ್ಬಹುಭಿಶ್ಚೈವ ಪರಿತಃ ಪರಿವೇಷ್ಟಯೇತ್ ।
ಅಗ್ನ್ಯಗಾರಂ ತ್ರಿಕೋಣಂ ಚ ಕಲ್ಪಯೇತ್ತತ್ರಸಾಧಕಃ ॥ ೬ ॥

ರುಧಿರಾಕ್ತೇನ ಸೂತ್ರೇಣ ಪರಿತಃ ಪರಿವೇಷ್ಟಯೇತ್ ।
ಸ್ಮಶಾನಭಸ್ಮನಾ ಸ್ನಾತಃ ಕೃಷ್ಣವಾಸಾ ಜಿತೇಂದ್ರಿಯಃ ॥ ೭ ॥

ರಕ್ತೋಷ್ಣೀಷಧರೋ ಮಂತ್ರೀ ರಕ್ತಯಜ್ಞೋಪವೀತವಾನ್ ।
ಸಂಕ್ರುದ್ಧ್ಯ ಭ್ರುಕುಟೀ ವಕ್ತ್ರೋ ರಕ್ತಚಂದನಶೂಲಧೃಕ್ ॥ ೮ ॥

---

ದಕ್ಷಿಣ ಅಥವಾ ನೈರುತ್ಯದಲ್ಲಿರುವ ಸ್ಮಶಾನಕ್ಕೆಹೋಗಿ ತ್ರಿಕೋಣಾಕಾರವಾದ ಒಂದು ವೇದಿಕೆಯನ್ನು ಮಾಡಿಕೊಂಡು, ಸುತ್ತಲೂ ಕೂದಲು ಮತ್ತು ಮುಳ್ಳುಗಳನ್ನೂ ಹರಡಿಕೊಳ್ಳಬೇಕು.

೫-೭. ಮುಳ್ಳುಗಳಿಂದಲೇ ಬಾಗಿಲು, ಅಗುಳಿ ಇವುಗಳನ್ನು ನಿರ್ಮಿಸಿಕೊಳ್ಳಬೇಕು. ಕರುಳಿನ ಮಾಲೆಗಳನ್ನು ದಕ್ಷಿಣದಿಕ್ಕಿನಲ್ಲಿ ನೇತುಹಾಕಬೇಕು. ಸುತ್ತಲೂ ಹೆಣಗಳ ತಲೆಬುರುಡೆಗಳನ್ನು ಹರಡಿಕೊಳ್ಳಬೇಕು. ಆ ಮಧ್ಯದಲ್ಲಿ ತ್ರಿಕೋಣಾಕಾರವಾಗಿ ಅಗ್ನಿಕುಂಡವನ್ನು ಮಾಡಿಕೊಂಡು, ಅದಕ್ಕೆ ರಕ್ತದಿಂದ ನೆನೆಸಲ್ಪಟ್ಟ ದಾರವನ್ನು ಕಟ್ಟಬೇಕು. ತಾನು ಸ್ಮಶಾನದಲ್ಲಿರುವ ಬೂದಿಯಿಂದ ಸ್ನಾನಮಾಡಿ, (ಬಳಿದುಕೊಂಡು) ಕರಿಯ ವಸ್ತ್ರವನ್ನು ಧರಿಸಿ ಜಿತೇಂದ್ರಿಯನಾಗಿರಬೇಕು.

೮-೯. ಕೆಂಪು ರುಮಾಲನ್ನು ತಲೆಗೆ ಸುತ್ತಿ, ರಕ್ತಮಯವಾದ ಜನಿವಾರವನ್ನು ಹಾಕಿಕೊಂಡು ಹುಬ್ಬುಗಂಟಿಕ್ಕಿ, ಕೆಂಪುಚಂದನ, ಕೆಂಪುಮೊಳೆ, ಕೆಂಪುಹೂವು

ಪುಷ್ಪಂ ಲೋಹಮಯಂ ಚಾಪಿ ಧಾರಯೇಚ್ಛೂಲಮುತ್ತಮಂ ।
ಖದಿರಂ ರುಧಿರಾಕ್ತಂ ವಾ ಧಾರಯೇಚ್ಚಾಭಿಚಾರವಾನ್ ॥ ೯ ॥

ಅಗ್ನ್ಯಗಾರಸ್ಯ ಮಧ್ಯೇ ತು ಪ್ರತಿಮಾಂ ಕಾರಯೇದ್ಬುಧಃ ।
ಶತ್ರೋರ್ಮೂತ್ರಪುರೀಷೇಣ ರುಧಿರೇಣಾಂತ್ರಪಾಂಶುನಾ ॥ ೧೦ ॥

ಪಾದಪಾಂಶು ಸಮಾಲೋಡ್ಯ ಮೃದ್ಭಸ್ಮಾಸಾನಕೀ ತಥಾ ।
ವಲ್ಮೀಕಸಂಭವಾಂ ಚಾಪಿ ಗೃಹೀತ್ವಾ ಶತ್ರುಮಾಲಿಖೇತ್ । ॥ ೧೧ ॥

ಖಾದಿರೈಃ ಕೀಲಕೈಸ್ತಸ್ಯ ಊರ್ಧ್ವಕೇಶಮಧೋಮುಖಂ ।
ಪಾಶೇನ ವೇಷ್ಟಯಿತ್ವಾ ತು ಶತ್ರೋಃ ಪ್ರಾಣಾನ್ನಿಕೃಂತಯೇತ್ ॥ ೧೨ ॥

ಕುರ್ಯಾಚ್ಛೂಲೇನ ಭಿನ್ನಂ ತು ಪಾದಯೋರ್ಮೂರ್ಧ್ನಿ ವಿದ್ವಿಷಂ ।
ಆಯುಸಸ್ಸ್ರುವಮಾದಾಯ ಹೋಮಂ ಕುರ್ಯಾದ್ವಿಚಕ್ಷಣಃ ॥ ೧೩ ॥

---

ಇವುಗಳಿಂದ ಕೂಡಿದ ರಕ್ತಸಿಕ್ತವಾದ ಕಗ್ಗಲಿಯ ಗೂಟ (ಶಂಕು) ವೊಂದನ್ನು ಅಭಿಚಾರಕ್ರಿಯೆ ಮಾಡುವವನು ಹಿಡಿದುಕೊಂಡಿರಬೇಕು.

೧೦-೧೨. ಅನಂತರ ಅಗ್ನಿಕುಂಡದ ಮಧ್ಯಭಾಗದಲ್ಲಿ ಶತ್ರುವಿನ ಮೂತ್ರ ಪುರೀಷಗಳಿಂದಾಗಲಿ, ರಕ್ತದಿಂದಾಗಲಿ, ಅಥವಾ ಆತನು ತಿರುಗಾಡಿದ ಭೂಮಿಯ ಧೂಳಿನಿಂದಾಗಲಿ, ಸೇರಿಸಿದ ಮಣ್ಣಿನಿಂದ ಶತ್ರುವಿನ ಆಕಾರವನ್ನು ಅಲ್ಲಿ ಬರೆಯಬೇಕು. ಅದಕ್ಕೆ ಕಗ್ಗಲಿಯ ಮುಳ್ಳುಗಳನ್ನು ಚುಚ್ಚಿ, ಶತ್ರುವಿನ ಕೂದಲು ಮೇಲಕ್ಕೂ, ಮುಖವು ಕೆಳಕ್ಕೂ ಬರುವಂತೆ ಬೊಂಬೆಗಳನ್ನು ಮಾಡಿ ಪಾಶದಿಂದ ಬಿಗಿದು ಒಡನೆಯೇ ಅದನ್ನು ಕತ್ತರಿಸಬೇಕು.

೧೩-೧೫. ಶೂಲದಿಂದ ಆ ಬಿಂಬದ ಎರಡುಕಾಲುಗಳನ್ನೂ ತಲೆಯಭಾಗವನ್ನೂ ಸೀಳಬೇಕು. ಅನಂತರ ಕಬ್ಬಿಣದ ಸ್ರುವದಿಂದ ಅಗ್ನಿಕುಂಡದಲ್ಲಿ ಹೋಮ ಮಾಡಬೇಕು. ಈ ರೀತಿ ಆಭಿಚಾರಿಕಕ್ರಿಯೆಯು ಇನ್ನೂ ಹತ್ತುರೀತಿಯಲ್ಲಿ ಹೇಳ

ಅಥ ಜೇದ್ದಶಧಾಪ್ರೋಕ್ತಮಭಿಚಾರವಿಧಾವಿಹ ।
ಕೃಷ್ಣಚ್ಛಾಗೋಷ್ಟ್ರಮಾತಂಗಶಲಭಾನಾಂ ಚ ಶೋಣಿತಂ । ॥ ೧೪ ॥

ವಿಷಂ ಚ ಮಲಿನಂ ತೈಲಂ ಚಾತುರ್ವರ್ಣಸ್ಯ ಶೋಣಿತಂ ।
ವಾಮಹಸ್ತೇ ಸ್ರುವಂ ಕೃತ್ವಾ ದಕ್ಷಿಣಾಭಿಮುಖಃ ಸ್ಥಿತಃ ॥ ೧೫ ॥

ತ್ರಿಸಂಧ್ಯಂ ಜುಹುಯಾತ್ಕ್ರುದ್ಧಃ ಫಟ್ಕಾರೇಣೈವ ಮಂತ್ರವಿತ್ ।
ಕಪಾಲತ್ರಯಮಾರೂಢೋ ದ್ವಯೋಃ ಪಾದೌ ನಿವೇಶಯೇತ್ ॥ ೧೬ ॥

ಊರ್ಧ್ವಶುಕ್ಲತರೂಣಾಂ ಚ ಸಮಿದ್ಭಿರ್ಜುಹುಯಾನ್ನರಃ ।
ಖಾದಿರೈರುಧಿರಾಕ್ತೈರ್ವಾ ತಥಾ ನಿಂಬಮಯೈರಪಿ ॥ ೧೭ ॥

ಅನ್ಯೇನ ತು ಯಥೋಕ್ತೇನ ಅವ್ಯಕ್ತಂ ಹೋಮಯೇದ್ಬುಧಃ ।
ಕುರ್ಯಾತ್ಪ್ರಕುಪಿತೋ ಹೋಮಂ ಯಾವತ್ಕ್ರೋಧೋ ನ ನಶ್ಯತಿ ॥ ೧೮ ॥

---

ಲ್ಪಟ್ಟಿವೆ. ಕರಿಯಆಡು, ಒಂಟೆ, ಆನೆ, ಶಲಭ (ಕಪಟದಹಕ್ಕಿ) ಗಳು ಇವುಗಳ ರಕ್ತವನ್ನೂ, ವಿಷವನ್ನೂ, ಮಲಿನವಾದ ಎಣ್ಣೆಯನ್ನೂ, ಅಥವಾ ನಾಲ್ಕುವರ್ಣದವರ (ಅಥವಾ ನಾಲ್ಕು ಬಣ್ಣದ ಪ್ರಾಣಿಗಳ) ರಕ್ತ ಇವುಗಳನ್ನು ಸ್ರುವದಲ್ಲಿಟ್ಟುಕೊಂಡು ದಕ್ಷಿಣಾಭಿಮುಖವಾಗಿ ಸಂತು ಸಂಧ್ಯಾಕಾಲಗಳಲ್ಲಿಯೂ ಫಟ್ಕಾರವನ್ನು ಉಚ್ಚರಿಸುತ್ತಾ ಕೋಪದಿಂದ ಹೋಮ ಮಾಡಬೇಕು.

೧೬-೧೮. ಹೋಮಕಾಲದಲ್ಲಿ ಸಾಧಕನು ಮೂರುತಲೆ ಬುರುಡೆಗಳಲ್ಲಿ ಎರಡರಮೇಲೆ ತನ್ನ ಎರಡು ಕಾಲುಗಳನ್ನಿಟ್ಟು, ಮೇಲೆ ಬೆಳ್ಳಗಿರುವ ಮರಗಳ ಸಮಿತ್ತುಗಳಿಂದಲೂ ಅಥವಾ ರಕ್ತಮಿಶ್ರಿತವಾದ ಕಗ್ಗಲಿ, ಬೇವು ಮುಂತಾದ ಕಹಿಪ್ರಧಾನವಾದ ಸಮಿತ್ತುಗಳಿಂದಲೂ ಹೋಮಮಾಡಬೇಕು. ಹೋಮಕಾಲದಲ್ಲಿ ಅತಿಯಾಗಿ ಕೋಪವನ್ನು ತಾಳಿ ಆ ತನ್ನ ಕೋಪವು ಶಾಂತವಾಗುವವರೆಗೂ ಹೋಮ ಮಾಡುತ್ತಿರಬೇಕು.

ಕಲ್ಪೋಕ್ತಮಭಿಚಾರಂ ತು ಕುರ್ಯಾತ್ಸಿದ್ಧ್ಯರ್ಥಮಾತ್ಮನಃ ।
ಸಿದ್ಧಿಸ್ತ್ರಯೋದಶವಿಧಾ ಅಭಿಚಾರೇಣ ಮಂತ್ರಿಣಾಂ ॥ ೧೯ ॥

ಶತ್ರೋರ್ದೇಶಪರಿತ್ಯಾಗೋ ವ್ಯಾಧಿರರ್ಥವಿನಾಶನಂ ।
ಉನ್ಮತ್ತತಾಂಧತಾ ಚೈವ ತಥಾ ಚೈವಾಂಗಹೀನತಾ ॥ ೨೦ ॥

ವಧೋ ವಂಧೋ ನೃಪಕ್ರೋಧೋऽಕಸ್ಮಾಚ್ಚಾಪಿ ಧನಕ್ಷಯಃ ।
ಪ್ರಯಾತಂ ಯಾಚಿತಂ ಚಾಪಿ ಅರಣ್ಯಂ ಚ ತ್ರಯೋದಶ ॥ ೨೧ ॥

ಅಭಿರ್ನಿಮೀಲಿತೋ ದೀಪ್ತಃ ಪ್ರೋಕ್ಷಿತೋ ವಿಧಿನಾ ಪುನಃ ।
ತತ್ತ್ವೇನಾಪ್ಯಾಯಿತಶ್ಚೈವ ಕಥಂ ಮಂತ್ರೋ ನ ಸಿಧ್ಯತಿ ॥ ೨೨ ॥

ಅಸಿದ್ಧೌ ತು ಪುರೋ ದಂಡಃ ಸ್ವಮಂತ್ರೋತ್ತಾಡನಂ ಭವೇತ್ ।
ಅಭಿವಾರ್ಯ ಪರಂ ಗಚ್ಛೇನ್ ಕರಂ ಹನ್ಯಾತ್ತಥಾಂತಕೇ ॥ ೨೩ ॥

---

೧೯-೨೧. ಮಂತ್ರಜ್ಞರು ಕಲ್ಪೋಕ್ತವಾದ ಅಭಿಚಾರಿಕಕ್ರಿಯೆಯಿಂದ ಹದಿಮೂರು ವಿಧವಾದ ಫಲವನ್ನು ಪಡೆಯುವರು. ಶತ್ರುವು ಸ್ವದೇಶವನ್ನು ಬಿಟ್ಟು ಓಡುವುದು, ಅಥವಾ ಅವನಿಗೆ ರೋಗಪೀಡಾ, ಧನಕ್ಷಯ, ಹುಚ್ಚುಹಿಡಿಯುವುದು ಕುರುಡುಸಂಭವಿಸುವುದು, ಅಂಗಹೀನವಾಗುವುದು, ಮೃತಿಹೊಂದುವುದು, ಬಂಧನಕ್ಕೆ ಸಿಕ್ಕುವುದು, ರಾಜಕೋಪವು ಲಭಿಸುವುದು, ಅಕಸ್ಮಾತ್ತಾಗಿ ಧನಕ್ಷಯುವಾಗುವುದು, ಪ್ರಯಾಣದಲ್ಲಿಯೇ ನಿಲ್ಲುವುದು, ಅರಣ್ಯದಲ್ಲಿ ಅಡಗಿಹೋಗುವುದು, ಭಿಕ್ಷುಕನಾಗುವುದು, ಈ ಹದಿಮೂರು ಸಿದ್ಧಿಗಳನ್ನು ಈ ಪ್ರಯೋಗದಿಂದ ಪಡೆಯಬಹುದು.

೨೨-೨೪. ಶತ್ರುಪ್ರತಿಮೆಯನ್ನು ಹಾಗೆ ಕತ್ತರಿಸಿ ಉರಿಸಿ ವಿಧಿವತ್ತಾಗಿ ಪ್ರೋಕ್ಷಿಸಿ ಮಂತ್ರವನ್ನುಚ್ಚರಿಸುವುದರಿಂದ ನಿಜವಾಗಿಯೂ ಮಂತ್ರಸಿದ್ಧಿಯೊದಗುವುದು. ಒಂದುವೇಳೆ ಹಾಗೂ ಸಿದ್ಧಿಸದಿದ್ದರೆ ಮುಂದೆ ಇಟ್ಟುಕೊಂಡಿರುವ ಕಗ್ಗಲಿಯ ದಂಡವನ್ನು ಹಿಡಿದು ಮಂತ್ರವನ್ನುಚ್ಚರಿಸುತ್ತಾ ತಾಡನಮಾಡಿ, ಅನಂತರ ಆ

ತತೋ ನಿಕೃಂತಪ್ರಾಣೋಸೌ ದೇಹಮುತ್ಸೃಜತಿ ಕ್ಷಣಾತ್ ।
ವಿಧಿನಾ ದ್ರವ್ಯಘಟನೇ ಕ್ರೋಧಾರ್ತಃ ಶತ್ರುಪೀಡಿತಃ ॥ ೨೪ ॥

ಪ್ರತಿಲೋಮೇನ ಯುಂಜೀತ ಘಾತಕೇ ಪ್ರಾಣಸಂಯುತಃ ।
ತತ್ಕ್ಷಣಾದ್ಘಾತಯೇತ್ಸರ್ವಾನ್ ಸೇಂದ್ರಬ್ರಹ್ಮಪುರಸ್ಸರಾನ್ ॥ ೨೫ ॥

ಆಪತ್ಸು ಯೋಜಯೇನ್ಮಂತ್ರೀ ಯದಾ ಸಂಶಯಿತೋ ಭವೇತ್ ।
ಶಾರೀರಾ ಮಾನಸಾಶ್ಚೈವ ಉಪಸರ್ಗಾಸ್ತು ಕೀರ್ತಿತಾಃ ॥ ೨೬ ॥

ಶಾರೀರಾ ವ್ಯಾಧಯೋ ಜ್ಞೇಯಾ ಮಾನಸಾ ಬಹುವಿಸ್ತರಾಃ ।
ಸ್ತ್ರೀಕೃತೈಶ್ಚೈವ ತ್ವಜ್ಜೈಶ್ಚೈವ ಬಂಧುಮಿತ್ರಪುರಃಸರೈಃ ॥ ೨೭ ॥

ಪೀಡ್ಯಂತೇ ಮಂತ್ರಿಣೋಹ್ಯೇತೇ ಚೋಪಸರ್ಗೈಸ್ಸುದಾರುಣೈಃ ।
ಸಿದ್ಧವಾಕ್ಯಮುಪೇತಸ್ತು ಮಂತ್ರಹೋಮಪುರಸ್ಕೃತಃ ॥ ೨೮ ॥

---

ಬಿಂಬದ ಕೈಯನ್ನು ಕತ್ತರಿಸಿಹಾಕಿದೊಡನೆಯೇ ಶತ್ರುವು ತಾನಿರುವ ಸ್ಥಳದಲ್ಲಿಯೇ ಮೃತಿಹೊಂದುವನು.

೨೫-೨೬. ದ್ರವ್ಯಲಾಭದ ವಿಷಯದಲ್ಲಿ ಶತ್ರುವಿನಿಂದ ತೊಂದರೆಯುಂಟಾದಾಗ ಶತ್ರುವು ಮೃತಿಹೊಂದದೆ ಕಷ್ಟದಲ್ಲಿ ಸಿಕ್ಕಿ ನರಳುವಂತೆ ವಿಲೋಮಪ್ರಯತ್ನದಿಂದ ಅಭಿಚಾರಿಕವನ್ನು ನಡೆಸಬಹುದು. ಆ ಮಂತ್ರೋಚ್ಚಾರಣೆಯ ಸಾಮರ್ಥ್ಯದಿಂದ ಇಂದ್ರಬ್ರಹ್ಮಾದಿ ದೇವಶ್ರೇಷ್ಠರನ್ನು ಸಹ ಕಷ್ಟದಲ್ಲಿ ಸಿಕ್ಕಿಸಿಬಿಡಬಹುದು. ಅಲ್ಲದೆ ಶತ್ರುವಿಗೆ ಶಾರೀರಕವಾದ ಅಥವಾ ಮಾನಸಿಕವಾದ ತೊಂದರೆಗಳನ್ನು ಸುಲಭವಾಗಿ ಕೊಡಬಹುದು.

೨೭-೨೮. ವ್ಯಾಧಿಗಳೇ ಶಾರೀರಕವಾದ ತೊಂದರೆಗಳು. ಸ್ತ್ರೀಮೂಲಕವಾಗಲೀ ಬಂಧುವರ್ಗದವರಿಂದಾಗಲೀ ಒದಗುವ ಅನೇಕ ಕ್ಲೇಶಗಳೇ ಮಾನಸಿಕವಾದವುಗಳು. ಮಂತ್ರಜ್ಞರು ಇಂತಹ ತೊಂದರೆಗಳಿಂದ ಶತ್ರುಗಳನ್ನು ಸುಲಭವಾಗಿ ಹಿಂಸಿಸ

ಅಸಂದೇಹಾತ್ತು ಸಿದ್ಧ್ಯಂತಿ ಬುದ್ಧ್ಯಾ ಯೋಗಾಃ ಸುಮಂತ್ರಿಣಃ ।
ಸ್ತ್ರೀಲೋಲಾಸ್ತು ನ ಸಿದ್ಧ್ಯಂತಿ ತಥಾ ಚಾರ್ಥವಿಚಿಂತಕಾಃ ॥ ೨೯ ॥

ಸ್ತ್ರೀಭಾರ್ಯಾ ಶೂದ್ರಭಾರ್ಯಾಯಾಂ ತಥಾನ್ಯಾಸು ಚ ಸಂರತಃ ।
ಕ್ರಿಯಾಲೋಪೀ ಚಾನುರೋಧೀ ವ್ಯಸನೀ ತೃಷ್ಣಯಾ ಹತಃ ॥ ೩೦ ॥
ಅಗ್ರಾಹ್ಯಾ ಮಂತ್ರಿಣೋಹ್ಯೇತೇ ವಿಧಾನೇಹ್ಯುಪಸರ್ಗಿಣಃ ।
ಆಚಾರ್ಯೇ ಚಾತಿಭಕ್ತಶ್ಚ ತಪಸ್ವೀ ಚ ಜಿತೇಂದ್ರಿಯಃ ।
ಘಾತಯೇತ್ಸರ್ವರೋಗಾಂಶ್ಚ ಬುದ್ಧ್ಯಾ ಜ್ಞಾನಂ ಚ ವಿಸ್ತರಂ ॥ ೩೧ ॥

ಇತಿ ಶ್ರೀ ಸಾಂಬಪುರಾಣೇ ಚತುಷ್ಷಷ್ಟಿತಮೋಽಧ್ಯಾಯಃ.

---

ಬಹುದು ಆದರೆ ಮಂತ್ರವಾದಿಯು ಸ್ತ್ರೀಲೋಲನಾಗಿದ್ದರೆ ಅಥವಾ ಧನಾಶಾಪೀಡಿತನಾಗಿದ್ದರೆ ಮಂತ್ರವು ಅಷ್ಟಾಗಿ ಸಿದ್ಧಿಯನ್ನುಂಟುಮಾಡಲಾರದು.

೩೦-೩೧. ವೇಶ್ಯೆ, ಶೂದ್ರಸ್ತ್ರೀ, ಅಥವಾ ಮತ್ತಾವ ಸ್ತ್ರೀಯರಲ್ಲಾದರೂ ಆಸಕ್ತಿಯಿಂದಿದ್ದು ಕ್ರಿಯಾಲೋಪಿಯಾಗಿ, ಸರ್ವದಾ ದುರಾಶಾಪೀಡಿತರಾದವರು ಈ ಮಂತ್ರವಿಧಿಯ ಆಚರಣೆಗೆ ಅನರ್ಹರು. ಯಾವನು ದೈವಭಕ್ತಿಯಿಂದಿದ್ದು ತಪಸ್ವಿಯೂ, ಜಿತೇಂದ್ರಿಯನೂ, ಆಗಿರುವನೋ ಅವನೇ ಈ ವಿಧವಾದ ಮಂತ್ರ ಸಿದ್ಧಿಯನ್ನು ಪಡೆಯಲು ಅರ್ಹನು. ಇಂತಹವನಿಂದಲೇ ಸಮಸ್ತರೋಗಗಳೂ ನಿವಾರಣೆಯಾಗುವುವು. ಅಲ್ಲದೆ ವಾಸ್ತವಿಕವಾದ ತಿಳಿವಳಿಕೆಯನ್ನು ಡೆದುಪ ತನ್ಮೂಲಕ ತಾನೂ ಜ್ಞಾನಿಯಾಗಿ ಲೋಕಕ್ಕೂ ಸಹಾಯಮಾಡುವವನಾಗುವನು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಅರವತ್ತುನಾಲ್ಕನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಪಂಚಷಷ್ಟಿತಮೋಽಧ್ಯಾಯಃ

---

ಅಥ ಭೇದಾನ್ ಪ್ರವಕ್ಷ್ಯಾಮಿ ಚಾಂಗಪ್ರತ್ಯಂಗಯೋಗಜಾನ್ ।
ಉಭಯಸ್ಯಾರ್ಥವಿನ್ಮಂತ್ರೀ ಯೋನ್ಯಾ ಬೀಜೇನ ಘಾತಯೇತ್ ॥ ೧ ॥

ಬೀಜಸ್ಯಾ (?) ಚೋದ್ಭವಸ್ಯಾಥ ವ್ಯಾಥಯೋನ್ಯಾಂತಘಾತಿನಾಂ ।
ಯೋನಿಸ್ಥಂ ಬೀಜಯೋಗೇನ ಸ್ಥಾನಸ್ತಂಭಂ ವಿನಿರ್ದಿಶೇತ್ ॥ ೨ ॥

ನೇತ್ರಯೋಃ ಶ್ರವಣಂ ಪೀತಂ ಮುಖೇ ಸಿಂದೂರವರ್ಣಕಂ ।
ಬಾಹ್ವಂಸಯೋಶ್ಚ ಹರಿತಮುದರೇ ಕೃಷ್ಣ ಏವ ಚ ॥ ೩ ॥

---

## ಅರುವತ್ತೈದನೆಯ ಅಧ್ಯಾಯ

೧-೨. ಈಗ ಅಂಗ, ಪ್ರತ್ಯಂಗ ಯೋಗಗಳಿಂದ ಹುಟ್ಟುವ ಭೇದಗಳನೂ ಹೇಳುವೆನು. ಹಿಂದೆ ಹೇಳಿದ ಯೋನಿಮಂತ್ರಗಳನ್ನೂ, ಬೀಜಮಂತ್ರಗಳನ್ನೂ ಪರಸ್ಪರವಾಗಿ ಉಚ್ಚರಿಸುತ್ತಾ ಬೀಜಯೋಗದಿಂದ ಯೋನಿಸ್ಥವಾಗಿರುವ ಅಕ್ಷರ ಸ್ತಂಬವನ್ನು ಮಾಡಬೇಕು.

೩-೫. ಅನಂತರ ಆಕೃತಿಮಂಡಲದಲ್ಲಿ ಕಣ್ಣು ಕಿವಿಗಳಿಗೆ ಹಳದಿಯಬಣ್ಣವನ್ನೂ ಮುಖಕ್ಕೆ ಸಿಂಧೂರವರ್ಣವನ್ನೂ, ತೋಳು, ಭುಜ, ಇವುಗಳಿಗೆ ಹರಿದ್ವರ್ಣವನ್ನೂ ಜಂಘಪ್ರದೇಶಗಳಿಗೆ ನೀಲವರ್ಣವನ್ನೂ, ಗುದ, ಶಿಶ್ನ, ಈ ಅವಯವಗಳಿಗೆ ವಿಚಿತ್ರ, ವರ್ಣವನ್ನೂ ಬಳಿಯಬೇಕು. ಎರಡುಕಾಲುಗಳಲ್ಲಿಯೂ ಕುಕ್ಕುಟ (ಕೋಳಿ)

ಗುದೇಶಿಶ್ನೇ ವಿಚಿತ್ರಂ ತು ನೀಲಚಿತ್ರಂ ತು ಜಂಘಯೋಃ ।
ಚರಣೇ ಕುಕ್ಕುಟಂ ಯುಂಜ್ಯಾದ್ಬಲೀ ಮಾಲ್ಯಂ ಚ ಸರ್ವತಃ ॥ ೪ ॥

ಸ್ವಸ್ಥಾನೇ ಪೂಜಯೇತ್ತಜ್ಜ್ಞೋ ವಿಪರೀತೇನ ನಾಶಯೇತ್ ।
ನ ನಶ್ಯೇತ ಯದಾ ವ್ಯಾಧಿಃ ಸ್ನೇಹಹಾರೇಣ ಯೋಜಿತಃ ॥ ೫ ॥

ನಿಗ್ರಹಸ್ತಸ್ಯ ವೈ ಕಾರ್ಯಃ ಶಾರೇಣ ಮಂತ್ರಿಣಾ ತದಾ ।
ಕೀಲಯಿತ್ವಾ ತು ವೈ ತಂ ಚ ಯೋನಿಸ್ಥಂ ವರ್ಣಜೈರ್ದೃಢಂ ॥ ೬ ॥

ಬಿಲ್ವಂ ಶಿರಸಿ ವೈ ಪುಷ್ಯಾತ್ಕದರಂ ವಕ್ತ್ರನೇತ್ರಯೋಃ ।
ಶ್ರೋತ್ರೇ ತು ಯಾಶ್ಯಕಂ ಕೀಲಂ ವಿನ್ಯಸೇದಶ್ಮಕಂ ತು ವೈ ॥ ೭ ॥

ಶಾಕಜಂ ವಕ್ಷಸಿ ಪ್ರೋಕ್ತಂ ಬಾದರಂ ಪೃಷ್ಠ ಏವ ಚ ।
ಉದರೇ ಚ ಯಥಾ ಶಿಗ್ರುಂ ಚಂದನಂ ಶಿಶ್ನಜಾನುನೀ ॥ ೮ ॥

---

ವರ್ಣವನ್ನೂ ಸರ್ವತ್ರಬಲಿಯನ್ನೂ ಪುಷ್ಪಮಾಲೆಯನ್ನೂ ಹಾಕಬೇಕು. ಒಂದುವೇಳೆ ಉದ್ದಿಷ್ಟವಾದ ವ್ಯಾಧಿಯು ನಾಶವಾಗದಿದ್ದರೆ ಸರ್ವತ್ರ ಎಣ್ಣೆಯನ್ನು ಬಳಿಯಬೇಕು.

೬–೭. ಆ ವ್ಯಾಧಿನಾಶಕ್ಕಾಗಿ ಯೋನಿಗತವಾದ ವರ್ಣಗಳನ್ನುಚ್ಚರಿಸುತ್ತಾ ಶರದಿಂದ (ಮೊಳೆಯಿಂದ) ಆಯಾಯ ಅವಯವಗಳಲ್ಲಿ ಮುಂದೆಹೇಳುವಂತೆ ಸ್ಥಾಪನೆಮಾಡಬೇಕು. ಶಿರೋಭಾಗಕ್ಕೆ ಬಿಲ್ವವೃಕ್ಷದ ಮೊಳೆಯನ್ನೂ, ಮುಖ ಮತ್ತು ನೇತ್ರಗಳಿಗೆ ಕಗ್ಗಲೀಮೊಳೆಯನ್ನೂ, ಕಿವಿಗಳಿಗೆ ಯಾಸ್ಯಕ (?) ಕೀಲವನ್ನೂ ಕಲ್ಲಿನ ಮೊಳೆಯನ್ನೂ ಬಡಿಯಬೇಕು.

೮–೯. ಎದೆಗೆ ಶಾಕದ (ಕಾಯಿಪಲ್ಯದ) ಮೊಳೆಯನ್ನೂ ಪೃಷ್ಠಭಾಗಕ್ಕೆ ಬದರೀಮೊಳೆಗಳನ್ನೂ, ಉದರಭಾಗಕ್ಕೆ ನುಗ್ಗೀಮೊಳೆಯನ್ನೂ, ಶಿಶ್ನ, ಜಾನು, ಈ

ಸುರದಾರುಮಧಃಕಾಯೇ ವೈತಸಂ ಚರಣೇ ಸ್ಮೃತಂ ।
ಪ್ರತಿಸ್ಥಾನೇ ನ್ಯಸೇತ್ಕೀಲಂ ಸರ್ವಸ್ಥಾನೇಷು ಮಂತ್ರವಿತ್ ॥ ೯ ॥

ಅಥವಾ ಸ್ನಪಯೇದ್ರಕ್ತಮಾಕೃತಿಶ್ಚಾತ್ರ ಕೀಲಯೇತ್ ।
ಧ್ಯಾಯೇತ್ತು ಘಾತಕಂ ರೋಗೇ ಯದಿಚ್ಛೇದ್ಘಾತನಂ ಪರಂ ॥ ೧೦ ॥

ಅದಗ್ಧಮಪಕಾರ್ಯಂ ತು ಯದಾ ಶಾಂತಿಃ ಪ್ರವರ್ತತೇ ।
ಹತೋ ದಾವೇನ ತೇನ ಸ್ಯಾದ್ಬ್ರಹ್ಮಹಾ ಯದಿ ಚ ಸ್ವಯಂ ॥ ೧೨ ॥

ಆಕೃತಿಸ್ತು ಸದಾ ಮಾಂಸೈಃ ಕ್ರಿಯತೇ ವಿಘ್ನಕಾರಿಣಃ ।
ಸಕಲಸ್ತಸ್ಯ ಪರಶುಃ ಸಂಕ್ರಮೋ ನಾಯಕಸ್ಯ ವೈ ॥ ೧೩ ॥

ಸಂಹಾರಂ ಕ್ರಮಶೋ ಯುಂಜ್ಯಾತ್ತಥಾ ಮಾಂಸೇನ ವೈ ಬುಧಃ ।
ಯೋನಿಬೀಜವಿಭಾಗೇನ ಸ್ಥಾನಸ್ಥಾನೇಷು ಸರ್ವತಃ ॥ ೧೪ ॥

---

ಪ್ರದೇಶಕ್ಕೆ ಚಂದನದ ಮೊಳೆಯನ್ನೂ, ಕೆಳಭಾಗದ ದೇಹದಲ್ಲಿ ದೇವದಾರು ಮರದ ಚೂರನ್ನೂ, ಕಾಲುಗಳಲ್ಲಿ ಬೆತ್ತವನ್ನೂ ಮಂತ್ರಪೂರ್ವಕವಾಗಿ ಹೊಡಿಯಬೇಕು.

೧೧-೧೨. ಅಥವಾ ಸರ್ವಾಂಗವನ್ನೂ ರಕ್ತದಿಂದ ನೆನೆಸಬೇಕು. ರೋಗ ನಿವಾರಣೆಗಾಗಿ ಘಾತನಾದಿ ಕ್ರಿಯೆಗಳನ್ನು ಮಾಡುವವರು ಆ ರೋಗದ ಹೆಸರನ್ನು ಉಚ್ಚರಿಸಿದರೆ ಖಂಡಿತವಾಗಿ ಆ ವ್ಯಾಧಿಯು ನಿವಾರಣೆಯಾಗುವುದು. ಇಂತಹ ಆಭಿಚಾರಿಕವಿಧಿಗೆ ಉದ್ದಿಷ್ಟನಾಗುವ ಬ್ರಹ್ಮನಿಗಾದರೂ ಅದರ ತೊಂದರೆಯು ತಪ್ಪಲಾರದು.

೧೩-೧೪. ವಿಘ್ನಕಾರಿಗಳೆಂದರೆ ಆ ಕಾಲದಲ್ಲಿ ಮಾಂಸಾದಿಗಳೇ. ಅದಕ್ಕಾಗಿ ಪರಶುವನ್ನು (ಕೊಡಲಿ) ಅದಕ್ಕೆ ಸಂಪರ್ಕಮಾಡಿರಬೇಕು. ಹಾಗೆಯೇ ಮಾಂಸವನ್ನು ಛೇದಿಸುತ್ತಾ ಸಂಹಾರ ಮಂತ್ರವನ್ನುಚ್ಚರಿಸಿ ಆಯಾಯ ಸ್ಥಾನಗಳಲ್ಲಿ ಹಾಕಬೇಕು. ಈಗ ಹಿಂದೆ ನಿರ್ದೇಶಿಸಿದ ಯೋನಿಬೀಜ ಸ್ಥಾನಗಳನ್ನು ಗಮನದಲ್ಲಿಡಬೇಕು.

ಸರ್ವಾಂಗಗತರೋಗಾ ಹಿ ಚಿಕಿತ್ಸಾಃ ಸರ್ವತೋ ಮುಖಾಃ ।
ಸಂಕ್ರಮಸ್ತಸ್ಯ ವೈ ಯೋ ಹಿ ಕ್ರೀಡಾಸಂಮಂತ್ರಿಣಃ ಸ ತು ॥ ೧೫ ॥

ಯೋ ಯೋ ವೈ ಕೀಲಕಾಃ ಪ್ರೋಕ್ತಾಃ ಸಮಿಧೋಪಿ ಹಿತೋ ಮತಃ ।
ಚತುರ್ವರ್ಗಾಲ್ಯೋಪಹಾರೇಣ ತೇನ ತಸ್ಯ ಚಿಕಿತ್ಸಿತಂ ॥ ೧೬ ॥

ಇತಿ ಶ್ರೀ ಸಾಂಬಪುರಾಣೇ ಪಂಚಷಷ್ಟಿತಮೋಧ್ಯಾಯೋ
ದ್ವಾದಶಂ ಪಟಲಂ ಸಮಾಪ್ತಂ

---

೧೫-೧೬. ಸರ್ವಾಂಗಗಳಲ್ಲಿಯೂ ಅಡಕವಾಗಿರುವ ರೋಗವನ್ನು ಸರ್ವಾಂಗ ಚಿಕಿತ್ಸೆಯಿಂದಲೇ ಕಳೆಯಬೇಕು. ಅಥವಾ ಪ್ರತ್ಯೇಕವಾದ ಅವಯವಗಳಲ್ಲಿ ಕಂಡು ಬರುವ ವ್ಯಾಧಿಗಳನ್ನು ಆಯಾ ಅವಯವ ಚಿಕಿತ್ಸೆಯಿಂದಲೇ ಸರಿಪಡಿಸಬಹುದು. ಯಾವ ಯಾವ ಮೊಳೆಗಳು ಯಾವ ಯಾವ ವೃಕ್ಷದವುಗಳಾಗಿ ಉಕ್ತವಾಗಿವೆಯೋ, ಆಯಾಯಾ ವೃಕ್ಷಗಳ ಸಮಿತ್ತುಗಳಿಂದಲೇ ಹೋಮವಿಧಿಯನ್ನು ಅನುಸರಿಸಬೇಕು. ಅದೇ ವೃಕ್ಷಜಾತಿಗಳಲ್ಲಿ ಹುಟ್ಟಿದ ಪುಷ್ಪಮಾಲಾನುಸಂಧಾನದಿಂದಲೂ ಚಿಕಿತ್ಸೆಗಳನ್ನು ಸುಲಭವಾಗಿ ನಡೆಸಬಹುದು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಅಂಗಪ್ರತ್ಯಂಗ ಚಿಕಿತ್ಸಾವಿಧಾನವನ್ನು ವಿವರಿಸುವ
ಅರುವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಷಟ್ಷಷ್ಟಿತಮೋಽಧ್ಯಾಯಃ

ಸಾಮಾನ್ಯಾಂ ತು ಯದಾ ಮಂತ್ರೀ ಚಿಕಿತ್ಸಾಂ ಸಾರ್ವಲೌಕಿಕೀಂ ।
ಪ್ರಾರ್ಥಿತೋ ವಾ ನೃಪೇಂದ್ರೇಣ ತದಾ ಕುರ್ಯಾದಿಮಂ ವಿಧಿಂ ॥ ೧ ॥

ವ್ರತಂ ಪೂರ್ವಂ ಸಮುದ್ದಿಷ್ಟಂ ನಾಯಕಾನಾಂ ತು ಶಾಂತಯೇ ।
ಶಾಂತಯೇಽದ್ಭುತಹೋಮೇನ ಸತ್ವಂ ವಾಪಿ ವಿನಾಯಕಂ ॥ ೨ ॥

ಸ್ವೇನ ಗಾತ್ರೇಣ ವೈ ನಶ್ಯೇತ್ಸಾಧಕಃ ಸರ್ವಕರ್ಮಣಿ ।
ತಸ್ಮಾದ್ವ್ರತಂ ತು ವೈ ಕಾರ್ಯಂ ಸರ್ವೋಪದ್ರವಶಾಂತಯೇ ॥ ೩ ॥

---

## ಅರುವತ್ತಾರನೆಯ ಅಧ್ಯಾಯ

೧-೨. ಮಂತ್ರಜ್ಞನು ಸಕಲ ಜನ ಸಾಮಾನ್ಯವಾಗಿ ಇಂತಹ ಚಿಕಿತ್ಸಾಕಾರ್ಯಗಳನ್ನು ನಡೆಸಬೇಕು. ರಾಜನಿಂದ ಪ್ರಾರ್ಥಿತನಾದಾಗಲೂ ಈ ಮಂತ್ರ ವಿಧಿಗಳನ್ನು ಮುಂದುವರಿಸಬಹುದು. ಕಾರ್ಯಸಿದ್ಧಿಗೆ ಮೊದಲು ಒದಗುವ ಸಕಲ ವಿಘ್ನಗಳ ಶಾಂತ್ಯರ್ಥವಾಗಿ ಅದ್ಭುತ ಹೋಮಾದಿಗಳನ್ನು ನಡೆಸಿ ವಿಘ್ನಪರಂಪರೆಯನ್ನು ಬಹುವಾಗಿ ನಿವಾರಿಸಬೇಕು.

೩-೪. ಮಂತ್ರವಿಧಿಯನ್ನು ಅನುಸರಿಸಿದ ಮಾಂತ್ರಿಕರು ಶಾಂತಿಕರ್ಮಗಳನ್ನು ಆಚರಿಸದಿದ್ದರೆ ಅವರಿಗೆ ಅಂಗವಿಕಾರಾದಿಗಳು ಆಗುವುದುಂಟು. ಅದಕ್ಕಾಗಿ ಪ್ರತಿಯೊಬ್ಬ ಮಾಂತ್ರಿಕನೂ ಕೊನೆಯಲ್ಲಿ ಶಾಂತಿಕರ್ಮಗಳನ್ನಾಚರಿಸಿಕೊಳ್ಳಬೇಕು. ಮತ್ತು

ಅನ್ಯಥಾ ಹೀಯತೇ ಮಂತ್ರಃ ಸ್ವೇನ ಗಾತ್ರೇಣ ಯೋಜಯೇತ್ ।
ಶ್ವೇತಾಂಬರಧರೋ ಮಂತ್ರೀ ಶ್ವೇತಮಾಲ್ಯಾನುಲೇಪನಃ ॥ ೪ ॥

ಜಿತೇಂದ್ರಿಯಃ ಪ್ರಶಾಂತಾತ್ಮಾ ಕಾಷ್ಠಮೌನೀ ಸುಯಂತ್ರಿತಃ ।
ಶುದ್ಧವರ್ಣಾಂ ಸಮಾದಾಯ ಪತ್ನೀಂ ಶುದ್ಧಕುಲಾತ್ಮಜಾಂ ॥ ೫ ॥

ದಶಾಹಂ ತು ತಯಾ ಸಾರ್ಧಂ ಬ್ರಹ್ಮಚಾರೀವ್ರತಂ ಚರೇತ್ ।
ದಾಸವಿಭ್ರಮಯೋಗೇನ ನ ಕುರ್ಯಾದಾತ್ಮನಃ ಕೃತಂ ॥ ೬ ॥

ಅತೀತೇ ದಶರಾತ್ರೇ ತು ದ್ವಿತೀಯಾಂ ಕ್ಷತ್ರಿಯಾಂ ತನುಂ ।
ಸರ್ವಪೀತೋಪಹಾರೇಣ ಶೃಂಗಾರೈಃ ಕೃತಭೂಷಣಃ ॥ ೭ ॥

ಸುಮನಾದೃಢಚಿತ್ತಶ್ಚ ದಶಾಹಂ ಕ್ಷತ್ರಿಯಾಪತಿಃ ।
ವೈಶ್ಯೋ ಗುಣಸಮಾಯುಕ್ತಃ ಪೀತಾವಸ್ತ್ರಾನುಲೇಪನಃ ॥ ೮ ॥

---

ಅನಂತರ ಮಾಂತ್ರಿಕನು ಶುದ್ಧವಾದ ಬಿಳಿಯ ಉಡುಪನ್ನು ಉಟ್ಟು ಬಿಳಿಯ ಹೂ ಮಾಲಿಕೆಯನ್ನು ಧರಿಸಿರಬೇಕು.

೫-೬. ಸತ್ಕುಲೀನಳಾದ ಪತ್ನಿಯೊಡನೆ ವಾಸಿಸುತ್ತಿದ್ದರೂ ಬ್ರಹ್ಮಚರ್ಯ ದಿಂದಿರಬೇಕು. ಮಂತ್ರಜ್ಞನು ತನ್ನ ಕಾರ್ಯಗಳನ್ನು ಸೇವಕರಿಂದ ಮಾಡಿಸಿಕೊಳ್ಳ ಬಾರದು.

೭-೮. ಹಾಗೆ ಹತ್ತು ದಿನಗಳು ಕಳೆದಮೇಲೆ ಮುಂದಿನ ಹತ್ತು ದಿನಗಳು ಕ್ಷತ್ರಿಯನಂತೆ ಕಾಲಕಳೆಯಬೇಕು. ಹೊಂಬಣ್ಣದ ವಸ್ತ್ರಗಳನ್ನು ಧರಿಸಿ ದೃಢಚಿಕಿತ್ಸೆ ಯಿಂದ ಕ್ಷತ್ರಿಯ ಸ್ತ್ರೀಗೆ ಪತಿಯೆನಿಸಿಕೊಂಡಿರಬೇಕು.

ದೃಢಚಿತ್ತಶ್ಚರೇನ್ಮಂತ್ರೀ ದಶಾಹಂ ವೈಶ್ಯಗೋಚರಃ ।
ಕೃಷ್ಣವಸ್ತ್ರೋಪಹಾರೇಣ ಕೃಷ್ಣವರ್ಣಾಂ ತು ಯೋಜಯೇತ್ ॥ ೯ ॥

ಗಣಿಕಾಂ ಸರ್ವವರ್ಣಾಂ ವೈ ಪಂಚಮಂ ಸಾರ್ವವರ್ಣಿಕಂ ।
ಕೃತ್ವಾ ವ್ರತಸಮಾಪ್ತಿಂ ತು ಯೋನಿಚಕ್ರಂ ತತೋ ಯಜೇತ್ ॥ ೧೦ ॥

ತತ್ರಾಭಿಷಿಚ್ಯ ಚಾತ್ಮಾನಂ ಹನ್ಯಾದ್ರೋಗಾಂಸ್ತ್ವಶೇಷತಃ ।
ಯಾವತ್ಕಾಲಂ ವ್ರತಂ ಯುಂಜ್ಯಾತ್ತಾವತ್ಕಾಲಂ ಯಜೇನ್ನರಃ ॥ ೧೧ ॥

ಅಹಸ್ತು ಪೂಜಯೇದ್ದೇವಂ ನಿಶಿನಾ ತು ನ ಪೂಜಯೇತ್ ।
ಏತದ್ವ್ರತಂ ತ್ವಯಾ ಪ್ರೋಕ್ತಂ ಮಂತ್ರಿಣಾಂ ಸಿದ್ಧಿದಂ ಪರಂ ॥ ೧೨ ॥

ಸರ್ವಸಿದ್ಧಿಪರೋ ಮಂತ್ರೀ ವ್ರತಮೇತತ್ಸಮಾಚರೇತ್ ।
ನ ಪಾಣಿಪಾದಚಪಲೋ ನ ನೇತ್ರಚಪಲೋ ಭವೇತ್ ॥ ೧೩ ॥

---

೯-೧೦. ಮುಂದಿನ ಹತ್ತುದಿನಗಳು ದೃಢಮನಸ್ಸಿನಿಂದ ವೈಶ್ಯನಂತೆ ಪೀತ ವಸ್ತ್ರಾದ್ಯಲಂಕಾರಗಳಿಂದ ಕೂಡಿ ವಾಸಮಾಡಬೇಕು. ಅನಂತರ ಕೃಷ್ಣವಸ್ತ್ರಧಾರಿ ಯಾಗಿ ಕೃಷ್ಣವರ್ಣದ ವೇಶ್ಯಾಪತಿಯೆನಿಸಿಕೊಂಡಿದ್ದು ವ್ರತಸಮಾಪ್ತಿ ಮಾಡಿದರೆ ಯೋನಿಚಕ್ರವು ಸಿದ್ಧಿಗೊಡುವುದು.

೧೧-೧೪. ಅನಂತರ ಅಭಿಷೇಕಾದಿಗಳನ್ನು ಮಾಡಿಕೊಂಡರೆ ರೋಗಿ ನಿಜ ವಾಗಿಯೂ ರೋಗಮುಕ್ತನಾಗುವನು. ಈ ವ್ರತಾನುಷ್ಠಾನವನ್ನು ಹಗಲಿನಲ್ಲಿ ಮಾಡಬೇಕೇ ಹೊರತು ರಾತ್ರಿಯಲ್ಲಿ ನಡೆಸಬಾರದು. ಇಂತಹ ಸಿದ್ಧಿಪ್ರದವಾದ ವ್ರತವನ್ನು ನಾನು ನಿನಗೆ ಹೇಳಿರುವೆನು. ಪಾಣಿಪಾದಗಳ ಅಥವಾ ನೇತ್ರವಾಕ್ಕುಗಳ ಚಾಪಲ್ಯವನ್ನು ಬಿಟ್ಟುಜಿತೇಂದ್ರಿಯನಾಗಿದ್ದು ಈ ವ್ರತವನ್ನು ಸಿದ್ಧಿಸಬೇಕು. ಮಧ್ಯೆ

ನ ತು ವಾಕ್ಷೆಪಲಶ್ಚೈವ ಲಘ್ವಾಹಾರೋ ಜಿತೇಂದ್ರಿಯಃ ।
ಸಾಧಯೇತ್ಪ್ರಯತೋ ನಿತ್ಯಂ ಉಪಸರ್ಗಾನಿ ಚೋದ್ಧರೇತ್ ।
ಹಂತಾರಃ ಸರ್ವವಿಘ್ನಾನಾಂ ನರಾ ವ್ರತಪರಾಸ್ತು ಯೇ ॥ ೧೪ ॥

ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇ ಷಟ್‌ಷಷ್ಟಿತಮೋಧ್ಯಾಯೇ
ತ್ರಯೋದಶಂ ಪಟಲಂ.

---

ಬರುವ ವಿಘ್ನಗಳನ್ನೆಲ್ಲಾ ತಡೆಗಟ್ಟಿಕೊಂಡು ವ್ರತವನ್ನು ಮುಗಿಸಿದುದೇ ಆದರೆ ಆತನಿಗೆ ಸಕಲಇಷ್ಟಾರ್ಥಗಳೂ ಕೈಗೂಡುವುವು ಎಂಬುದರಲ್ಲಿ ಸಂದೇಹವಿಲ್ಲ. ಸದ್ವ್ರತಪರರಾದವರೇ ಸಕಲ ವಿಘ್ನಗಳನ್ನು ನಿವಾರಿಸುವವರಾಗುವರು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಜ್ಞಾನೋತ್ತರಖಂಡದಲ್ಲಿ
ಅರುವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

॥ ಶ್ರೀ ಸೂರ್ಯಾಯನಮಃ ॥

# ಅಥ ಶ್ರೀ ಸಾಂಬಪುರಾಣೇ ಸಪ್ತಷಷ್ಟಿತಮೋಽಧ್ಯಾಯಃ



ಏತದ್ವ್ರತಂ ಮಹಾಪುಣ್ಯಂ ಚರೇದುತ್ತರಸಾಧನೇ ।
ಅರ್ಧಂ ತ್ವಧಮೋ ಯೋಗೇ ತು ಪಾದಮೇಕಂ ತಥಾಧಮೇ ॥ ೧ ॥

ಯದುಕ್ತಂ ಸಾಧನೇ ತಸ್ಮಿನ್ ಪುರಾಕಲ್ಪೇ ಮಹೌಜಸಾ ।
ವೇಧಯೋಗಾನ್ಪ್ರವಕ್ಷ್ಯಾಮಿ ದಿವ್ಯಭೌಮಾರ್ಥಸಾಧಕಾನ್ ॥ ೨ ॥

ಸತ್ವಂ ರಜಸ್ತಮಶ್ಚೈವ ತಿಸ್ರೋ ವೈ ಮಂತ್ರಯೋನಯಃ ।
ಬ್ರಹ್ಮಾ ವಿಷ್ಣುಸ್ತಥಾರುದ್ರಸ್ತೇವೈ ಸಾಧ್ಯಾಸ್ತು ಮಂತ್ರಿಣಃ ॥ ೩ ॥

---

## ಅರುವತ್ತೇಳನೆಯ ಅಧ್ಯಾಯ

೧-೨. ಪುಣ್ಯಕರವಾದ ಈ ವ್ರತದಲ್ಲಿಯೇ ಉತ್ತರಾಂಗಸಾಧಕವಾಗಿರುವ ವೇಧಯೋಗಗಳನ್ನು ಈಗ ಹೇಳುವೆನು. ಇದನ್ನು ಮಹಾತ್ಮರಾದ ಪ್ರಾಚೀನರೇ ವಿವರಿಸಿರುವರು. ಅದರಲ್ಲಿ ಅರ್ಧವ್ರತವು ಅಧಮಯೋಗದಲ್ಲಿಯೂ, ಪಾದಭಾಗವು ಅತ್ಯಂತಾಧಮಯೋಗದಲ್ಲಿಯೂ ನಡೆಸತಕ್ಕವುಗಳು.

೩-೪. ಮಂತ್ರಯೋನಿಗಳು ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಂದ ಕೂಡಿ, ಕ್ರಮವಾಗಿ ಮೂರುಯೋನಿಗಳಾಗಿ ಬ್ರಹ್ಮ, ವಿಷ್ಣು, ರುದ್ರಾದಿ ದೇವತೆಗಳೆನಿಸಿಕೊಂಡಿವೆ. ಅರ್ಚನವಿಧಿಯಲ್ಲಿಯೂ, ಅಗ್ನಿಕಾರ್ಯವಿಧಿಯಲ್ಲಿಯೂ,

ಅರ್ಚಾಯಾಂ ಕಾಮಸಂಕಲ್ಪಶ್ಚಾಗ್ನಿಕಾರ್ಯೇ ಯಥಾ ಪುನಃ ।
ನಾರೀ ದುಃಖಪ್ರಕೃತ್ಯಾಂ ಚ ಲಿಂಗೇ ವಾ ಸಾರ್ವಕಾಮಿಕೇ ॥ ೪ ॥

ಚತುರ್ಭುಜಾ ಭವೇತ್ಸಾಹಿ ನರಮಾಕ್ರಮ್ಯ ಸಂಸ್ಥಿತಾ ।
ಖಟ್ವಾಂಗಂ ದಕ್ಷಿಣೇ ತಸ್ಯಾಃ ಕಪಾಲಂ ವಾಮಕೇ ಕರೇ ॥ ೫ ॥

ಚಕ್ರಂ ವರಃ ಕ್ರಮಾದ್ಧಸ್ತೇ ಅಘೋರಾಸ್ಯಾದ್ದಿವ್ಯಮಾನುಷ್ಯೈಃ ।
ಕ್ರೂರಾ ದಂತಾಶ್ಚ ವಿನ್ಯಸ್ಯ ತೇಜೋರಾಶಿಪುಟಾನಿ ಷಟ್ ॥ ೬ ॥

ಕ್ರಮಾನ್ಮಂತ್ರಪದಂ ಚ್ಛೈಕಂ ಶಿಷ್ಟಂ ತಸ್ಯೈವ ಸಂಪುಟಂ ।
ಜಪಿತ್ವಾ ಕ್ರಮಯೋಗೇನ ಲಕ್ಷಮಂತ್ರಾನ್ ಸುಸಂಯುತಃ ॥ ೭ ॥

ವ್ರತಂ ತ್ವನಂತರಂ ಕಾರ್ಯಂ ಕಾಮಂ ತತ್ಸಾಧಕೇನ ತು ।
ಮಾಸಂ ಗುಗ್ಗುಲುಹೋಮಸ್ಸ್ಯಾಚ್ಛಾಗಮಾಂಸೇನ ಯೋಜಿತಃ ॥ ೮ ॥

---

ದುಃಖಪ್ರಕೃತಿಯಲ್ಲಿಯೂ, ಸ್ತ್ರೀ ರೂಪದಲ್ಲಿ ಅಥವಾ ಸಾರ್ವಕಾಮಿಕವಾದ ಲಿಂಗದಲ್ಲಿ ಈ ವಿಧಿಯನ್ನು ನಡೆಸಿಕೊಳ್ಳಬೇಕು.

೫-೬. ಆ ಸ್ತ್ರೀವಿಗ್ರಹವು ನಾಲ್ಕು ಕೈಗಳುಳ್ಳದ್ದಾಗಿ ಪುರುಷನನ್ನು ಆಕ್ರಮಿಸಿಕೊಂಡು ಬಲಗೈಯಲ್ಲಿ ಖಟ್ವಾಂಗವೆಂಬ ಆಯುಧವನ್ನೂ, ಎಡಗೈಯಲ್ಲಿ ಕಪಾಲವನ್ನೂ ಒಂದುಕೈಯಲ್ಲಿ ಚಕ್ರವನ್ನೂ, ಮತ್ತೊಂದರಲ್ಲಿ ವರದ ಮುದ್ರೆಯನ್ನೂ, ಧರಿಸಿಕೊಂಡಿರಬೇಕು. ದೇವ ಮತ್ತು ಮನುಷ್ಯಾಕಾರಗಳು ಎರಡೂ, ತೋರುತ್ತಿರಬೇಕು. ಕ್ರೂರವಾದ ಹಲ್ಲುಗಳೂ ತೇಜೋರಾಶಿಯೂ ಅಲ್ಲಿ ಪ್ರತಿಫಲಿಸುತ್ತಿರಬೇಕು.

೭-೮. ಆಗ ಕ್ರಮವಾಗಿ ಮಂತ್ರಪದಗಳನ್ನುಚ್ಚರಿಸಿ ಸಂಪುಟಾತ್ಮಕವಾದ ಮಂತ್ರಗಳನ್ನುಚ್ಚರಿಸುತ್ತಾ ಮೂಲಮಂತ್ರವನ್ನು ಲಕ್ಷಸಂಖ್ಯೆಯಲ್ಲಿ ಜಪಿಸಬೇಕು. ಅನಂತರ ಹಿಂದೆ ಹೇಳಿದ ವ್ರತವನ್ನುಮಾಡಿ, ಆಡಿನ ಮಾಂಸದಿಂದ ಗುಗ್ಗುಲುವಿನ ಬೆಂಕಿಯಲ್ಲಿ ಒಂದು ತಿಂಗಳು ಹೋಮಮಾಡಬೇಕು.

ತ್ರಿಸಂಧ್ಯಂ ತಾಡನಂ ಕೃತ್ವಾ ಹೋಮಶ್ಚಾಥ ತದನಂತರಂ ।
ಪ್ರತಿಸಂಧ್ಯಂ ಸಹಸ್ರಂ ತು ಯಾವನ್ಮಾಸೋ ವಿನಿರ್ಗತಃ ॥ ೯ ॥

ಏವಂ ಸಂಸಾಧಿತೋ ಮಂತ್ರಃ ಕಾಮದಸ್ತು ಸದಾ ಭವೇತ್ ।
ತಂತ್ರಜ್ಞಃ ಸಾಧಯೇದೇವ ಮಥವಾ ಯಂತ್ರವಿತ್ತಮಃ ॥ ೧೦ ॥

ಸುಸಹಾಯಃ ಪ್ರಸನ್ನಾತ್ಮಾ ನಿತ್ಯಯುಕ್ತಶ್ಚ ಸಾತ್ವಿಕಃ ।
ಮೋಹಾದಾರಭತೇ ಯಸ್ತು ಸಾಧನಂ ವೇಧವರ್ಜಿತಃ ॥ ೧೧ ॥

ಕೃತ್ವಾ ಭವತಿ ವೈ ಸಾಹಿ ದೇವತಾಹೀನಕರ್ಮಣಿ ।
ವಿಪಿನೇ ಕಾಷ್ಠಮೌನೀ ಸ್ಯಾದಥವಾ ಸಾಧಕೈರ್ವದೇತ್ ॥ ೧೨ ॥

ಸಮಯಜ್ಞೈಸ್ತತೋ ವಿಪ್ರೈರನ್ಯಥಾಹೀನಸಾಧನಃ ।
ಯಾದೃಶಸ್ಸಾಧಕೋ ಜ್ಞೇಯಃ ಸಹಾಯಸ್ತಸ್ಯ ತಾದೃಶಃ ॥ ೧೩ ॥

---

೯-೧೦. ಮೂರುಹೊತ್ತು ತಾಡನವನ್ನೂ, ಹೋಮವನ್ನೂ ನಡೆಸಬೇಕು. ಸಂಖ್ಯೆಯು ಸಹಸ್ರ ಪರಿಮಿತಿಯಲ್ಲಿರಬೇಕು. ಜಿತೇಂದ್ರಿಯನಾಗಿ ಈ ರೀತಿ ವ್ರತಾನುಷ್ಠಾನಮಾಡಿದವನು ತನ್ನ ಇಷ್ಟಾರ್ಥಗಳನ್ನು ಸಂಪೂರ್ಣವಾಗಿ ಸಾಧಿಸ ತಕ್ಕವನಾಗುವನು.

೧೧-೧೨. ಈ ಮಂತ್ರಸಿದ್ಧಿಯನ್ನು ಪಡೆಯುವವನು ಸಹಾಯಸಂಪತ್ತಿನಿಂದ ಕೂಡಿ ಪ್ರಸನ್ನತೆಯುಳ್ಳವನಾಗಿರಬೇಕು. ಹಾಗಿಲ್ಲದವನು ಅಜ್ಞಾನದಿಂದ ಪ್ರಾರಂಭಿಸಿದರೆ ಅತನು ದೈವದ್ರೋಹಿಯಾಗುವನು. ಆಗ ಆತನು ಕಾಡಿನಲ್ಲಿ ಮೌನವ್ರತ ದಲ್ಲಿದ್ದು ಸಾಧಕರನ್ನು ನಿರೀಕ್ಷಿಸಿ ನೋಡಿ, ಅವರೊಡನೆ ಮಾತನಾಡಿ ವಿಷಯಗಳನ್ನು ಸಂಪೂರ್ಣವಾಗಿ ಗ್ರಹಿಸಿ, ಅನಂತರ ವ್ರತಾಚರಣೆಗೆ ಆರಂಭಮಾಡಬೇಕು.

೧೩-೧೪. ಶಾಸ್ತ್ರ ಸಂಪತ್ತನ್ನರಿತವರ ಸಹವಾಸದಿಂದ ಮಂತ್ರಸಿದ್ಧಿಯು ಒದಗುವುದು. ಸಹಾಯ ಸಂಪತ್ತು ಯಾವ ರೀತಿ ಇರುವುದೋ ಅದೇರೀತಿ ಸಾಧ

ತತ್ತ್ವದೃಷ್ಟೇನ ಯೋಗೇನ ಸಾಧ್ಯಂ ಮಂತ್ರೀ ಸಮಾರಭೇತ್ ।
ತಪಸ್ವೀ ಚ ಜಿತಾತ್ಮಾ ಚ ನಿತ್ಯಭಕ್ತೋ ಮಹೇಶ್ವರೇ ॥ ೧೪ ॥

ಏವಂ ವಿಧಸ್ತು ವೈ ಮಂತ್ರೀ ಕಾಲೇ ಯೋ ಮೃತ್ಯುಮಾಪ್ನುಯಾತ್ ।
ಅನಂತಾಸ್ತಸ್ಯ ವೈ ಲೋಕಾ ಇತಿ ಮಂತ್ರವ್ಯವಸ್ಥಿತಿಃ ॥ ೧೫ ॥

ಪುಣ್ಯಾತ್ಮಾ ಸುಕೃತೇ ಸ್ಥಾನೇ ರಾಜಾ ವಾ ಸಾರ್ವಭೌಮಿಕಃ ।
ವಿದ್ಯಾ ಸಿದ್ಧಾ ಭವಂತ್ಯೇತೇ ಸಾಧಕಾಸ್ತು ಮಹೀತಲೇ ॥ ೧೬ ॥

ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇ
ಸಪ್ತಷಷ್ಟಿತಮೋಧ್ಯಾಯಃ.

---

ಕನೂ ಸಿದ್ಧಿಯನ್ನು ಪಡೆಯುವನು. ತಾತ್ತ್ವಿಕವಾದ ಮಾರ್ಗದಿಂದ ಮಂತ್ರಿಯು ಸಾಧ್ಯಾಂಶವನ್ನು ಸಾಧಿಸಬೇಕು. ಆತನು ತಪಸ್ವಿಯಾಗಿಯೂ, ಜಿತೇಂದ್ರಿಯನಾಗಿಯೂ, ಈಶ್ವರಭಕ್ತನಾಗಿಯೂ ಇದ್ದು ಕಾಲಕಳೆಯಬೇಕು.

೧೫–೧೬. ಈ ರೀತಿ ಸದ್ಗುಣಭರಿತನಾಗಿದ್ದ ಮಾಂತ್ರಿಕನು ಭೂಲೋಕದಲ್ಲಿ ಮೃತ್ಯುವಶನಾದಮೇಲೆ ಅನಂತಾನಂತ ಪುಣ್ಯಲೋಕಗಳನ್ನು ಸಂಪಾದಿಸಿ ಮತ್ತೆ ಭೂಲೋಕದಲ್ಲಿ ಚಕ್ರವರ್ತಿಪದವಿಯಲ್ಲಿ ಜನಿಸಿ, ಅನಂತರ ದೇವಯೋನಿಗಳಲ್ಲಿ ಅಡಗುವನೆಂದು ಹೇಳಬಹುದು.

ಇಲ್ಲಿಗೆ ಶ್ರೀ ಸಾಂಬಪುರಾಣದ ಜ್ಞಾನೋತ್ತರಖಂಡದಲ್ಲಿ
ಅರುವತ್ತೇಳನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಅಷ್ಟಷಷ್ಟಿತಮೋಽಧ್ಯಾಯಃ

---

ಸಾಧನಂ ಸಂಪ್ರವಕ್ಷ್ಯಾಮಿ ಯಥಾ ಸಿದ್ಧ್ಯಂತಿ ಸಾಧಕಾಃ ।
ವೇಧಾ ಯೋಗಾಂಶ್ಚ ವಿಮಲಾನ್ನಾನಾಸಿದ್ಧಿಫಲಪ್ರದಾನ್ ॥ ೧ ॥

ಷಾಣ್ಮಾಸಿಕಂ ತು ವೈ ಯೋಜ್ಯಂ ಪುರಶ್ಚರಣಮಾದಿಶೇತ್ ।
ಶಾಕಾದಿನಾ ವಿಧಾನೇನ ಜಲೈರ್ವಾಪಿ ಚ ಶೋಧನಂ ॥ ೨ ॥

ಧ್ಯಾಯೇಚ್ಚ ಪ್ರಣವಂ ಪಶ್ಚಾತ್ಸಹಸ್ರಂ ಶತಷಡ್ಗುಣಂ ।
ಆಯಚ್ಛನ್ನಂತು ಸಂಭ್ರಾಂತಃ ಪೂರ್ಣೇನಾಪೂರ್ಣ ಚೇತಸಾ ॥ ೩ ॥

ಶುದ್ಧಕಾಯಸ್ತತೋ ಮಂತ್ರೀ ಕೃತ್ವಾ ವಾಸಗೃಹಂ ತತಃ ।
ತಸ್ಮಿನ್ ಸಂಸ್ಥಾಪಯೇದ್ದೇವಂ ವಿಧಿನಾ ಶಾಸ್ತ್ರಚೋದಿತಂ ॥ ೪ ॥

---

## ಅರವತ್ತೆಂಟನೆಯ ಅಧ್ಯಾಯ

೧–೨. ಸಾಧಕರು ಸಿದ್ಧಿಯನ್ನು ಪಡೆಯುವ ವೇಧಾಯೋಗಗಳೆಂಬ ಸಾಧನಗಳ ವಿಷಯವನ್ನು ಸ್ವಲ್ಪಮಟ್ಟಿಗೆ ಈಗ ಹೇಳುವೆನು. ಆರುತಿಂಗಳು ಪರ್ಯಂತ ಕೇವಲ ಶಾಕಾಹಾರದಿಂದಲೋ ಅಥವಾ ಜಲಪಾನಾದಿಗಳಿಂದಲೋ ದೇಹವನ್ನು ಶೋಷಿಸಿಕೊಂಡು ಪ್ರಣವಮಂತ್ರವನ್ನು ಆರುಲಕ್ಷಸಾರಿ ಜಪಮಾಡಬೇಕು.

೩–೪. ಪೂರ್ಣವಾದ ಮನಸ್ಸಿನಿಂದ ಜಿತೇಂದ್ರಿಯನೆನಿಸಿ ಒಂದು ಸ್ವತಂತ್ರವಾದ ವಾಸಗೃಹವನ್ನು ಕಲ್ಪಿಸಿಕೊಳ್ಳಬೇಕು. ಅಲ್ಲಿ ವಿಧಿಪೂರ್ವಕವಾಗಿ ದೇವರನ್ನು ಸ್ಥಾಪನೆಮಾಡಿಕೊಳ್ಳಬೇಕು.

ವಿದ್ಯಾಂಗಾನಿ ತ್ವರಿಷ್ಟಾನಿ ಸ್ವಮಂತ್ರಂ ವಿಧಿನಾ ಕ್ರಮಾತ್ ।
ಸಹಸ್ರದಶಪರ್ಯಾಯಮೇಕೈಕಂ ಪರಿವರ್ತಯೇತ್ ॥ ೫ ॥

ತತೋ ಮಂತ್ರಂ ಸಮಾಧಾಯ ಈಪ್ಸಿತಂ ಮನಸಶ್ಶುಭಂ ।
ಆಪ್ಯಾಯಿತಂ ವಿರಕ್ತಂ ಚ ದೀಪಿತಂ ಶಾಸ್ತ್ರತಃ ಕ್ರಮಾತ್ ॥ ೬ ॥

ಜಪಾಂತೇ ತು ವ್ರತಂ ಯೋಜ್ಯಂ ವ್ರತಾಂತೇ ಪಿ ಚ ಸಾಧನಂ ।
ಅಸ್ತಾನಾಂ ಮಂಡಲೇ ಯೋಗಃ ಸಾಧ್ಯಮಂತ್ರಸ್ಯ ಸಾಧನೇ ॥ ೭ ॥

ಪ್ರೋಕ್ತಾಃ ಕ್ರಮೇಣ ವಿಧಯಃ ಸರ್ವಮಂತ್ರಾನುಸಾರಿಣಃ ।
ಅಸಿದ್ಧ್ಯವೇಧ್ಯಮಾಯೋಜ್ಯಂ ಕೃತೇ ವಾ ವ್ಯಂಜನಾದಿಕೇ ॥ ೮ ॥

ತಂತ್ರೋಕ್ತಂ ವೇದ್ಧ್ಯಮಾದಧ್ಯಾತ್ ಸ್ವಮಂತ್ರಾಕಾರಮೇವ ಚ ।
ಸಾಧಯೇದಥ ತಂತ್ರಜ್ಞೋ ಯಜ್ಞಸ್ಯ ನವಸಃ ಕ್ರಿಯಾಃ ॥ ೯ ॥

---

೫-೬-೭. ಅರಿಷ್ಟಾಖ್ಯಗಳಿಂದ ವಿದ್ಯಾಮಂತ್ರಗಳಿಂದ ಕೂಡಿ, ಮೂಲಮಂತ್ರವನ್ನು ಹತ್ತುಸಾವಿರ ಸಂಖ್ಯೆಯಲ್ಲಿ ಜಪಮಾಡಬೇಕು. ಅನಂತರ ತನಗೆ ಬೇಕಾದವನೂ ವಿರಕ್ತನೂ, ಶಾಸ್ತ್ರಪಾಂಡಿತ್ಯವುಳ್ಳವನೂ ಆದ ಒಬ್ಬ ಮಂತ್ರಸಾಧಕನನ್ನು ಆರಾಧಿಸಬೇಕು ಮತ್ತು ತೃಪ್ತಿಪಡಿಸಬೇಕು. ಜಪಾನಂತರ ವ್ರತ, ವ್ರತಾನಂತರ ಈ ಸಾಧನ ಇವುಗಳನ್ನು ತಪ್ಪದೆ ನಡೆಸಬೇಕು. ಸಾಧ್ಯವಿಷಯಕ್ಕೆ ಮುಖ್ಯಕಾರಣವಾದದ್ದೇ ಈ ಸಾಧನ.

೮-೯. ಇಲ್ಲಿಯ ವಿಧಿಗಳೆಲ್ಲವೂ ಮಂತ್ರಾರ್ಥಾನುಸಾರವಾಗಿಯೇ ಇರುವುವು. ಇದರಿಂದ ಸಿದ್ಧಿಯನ್ನು ಪಡೆಯದವನು ಯಾವುದೋ ಒಂದು ಕರ್ತವ್ಯದಲ್ಲಿ ನ್ಯೂನತೆಯನ್ನು ಹೊಂದಿರಬೇಕೆಂದು ತಿಳಿಯಬೇಕು. ಅನಂತರ ಮಂತ್ರದಲ್ಲಿ ಹೇಳಿರುವಂತೆ ಮಂತ್ರಾಕಾರವನ್ನು ಸರಿಯಾಗಿ ತಿಳಿದು ಅನಂತರ ಮತ್ತೆ ಹೋಮಾದಿಕ್ರಿಯೆಗಳಿಗೆ ತೊಡಗಬೇಕು. ಹೋಮಾಂತ್ಯದಲ್ಲಿ ಅಗ್ನಿಕುಂಡವು ವಿಧಿಪೂರ್ವಕವಾದ ಲಕ್ಷಣ

ಹೋಮಾಂತೇ ಹ್ಯಗ್ನಿಕುಂಡಾನಾಂ ಚೋದಿಕೋ ವಿಧಿನೋತ್ಥಿತಃ ।
ನರೋ ನ ಸಿದ್ಧಿಮಾಪ್ನೋತಿ ಮಂತ್ರರೂಪೀ ಸದೃಶ್ಯತೇ ॥ ೧೦ ॥

ಚಲತ್ಯಪಿ ತಥಾ ಮಂತ್ರೀ ಮನ್ಯಂತೇ ಪರಿಚಾರಕಾಃ ।
ಉದ್ಯತಾಶ್ಚ ಮಹಾಘೋರಾ ಲಕ್ಷ್ಯಂತೇ ಮಂತ್ರಿಣಃ ಪರೇ ॥ ೧೧ ॥

ಲಕ್ಷಯೇದ್ಯದಿ ರೂಪೇಣ ಶಾಸ್ತ್ರಸ್ಯೋಕ್ತಸ್ಯ ಲಕ್ಷಿತಂ ।
ಸಿದ್ಧಮಂತ್ರಂ ವಿಜಾನೀಯಾದನ್ಯಥಾ ತು ವಿನಾಶಕಃ ॥ ೧೨ ॥

ಉತ್ಥಾಯ ಯದಿ ಮಂತ್ರೇಣ ಸ್ವೇನಾರ್ಥಃ ಸಂಪ್ರದೃಶ್ಯತೇ ।
ಸಾಧ್ಯಸ್ಸಏವ ವಿಜ್ಞೇಯೋನ್ಯಥಾ ಸ ಘಾತಯೇತ್ತು ತಂ ॥ ೧೩ ॥

ಪಾತಾಲದಿಶಿ ಪಾಂತಸ್ತು ಕ್ರಮತಸ್ತತ್ರ ಸಾಧಕಃ ।
ವಿದ್ಯಾಸಿದ್ಧೌ ತು ವೈ ಮಂತ್ರೀ ಕಾಮೇದ್ವೈಘೋರಕಂ ಪ್ರದಂ ॥ ೧೪ ॥

---

ಗಳಿಂದ ಕೂಡದೆ ಹೋಗಿದ್ದರೆ ಆತನಿಗೆ ಮಂತ್ರಸಿದ್ಧಿಯಾಗುವುದಿಲ್ಲವೆಂದು ತಿಳಿಯಬೇಕು. ಮತ್ತು ಅದು ಕೇವಲ ಮಂತ್ರರೂಪಿಯೇ ಹೊರತು ಸಾಧಕವ್ರತವಲ್ಲವೆಂದಾಗುವುದು.

೧೧-೧೨. ಮಂತ್ರಶಕ್ತಿಯಿಂದ ಮಾಂತ್ರಿಕನು ನೋಡುವವರಿಗೆ ಭಯಂಕಾರನಾಗಿ ಕಂಡುಬರುವನು. ಇಂತಹ ಮಂತ್ರಪುರಶ್ಚರಣವಿಧಿಯನ್ನು ವಿಧಿವತ್ತಾಗಿ ತಿಳಿದು ಮಂತ್ರಸಿದ್ಧಿಯನ್ನು ಹೊಂದಬೇಕು. ಇಲ್ಲವಾದರೆ ಅದು ವ್ಯರ್ಥವಾಗುವುದು ಮತ್ತು ವಿನಾಶಕಾರಿಯೂ ಆದೀತು.

೧೩-೧೪. ಯಾವುದೋಒಂದರ ಸಿದ್ಧಿಗಾಗಿ ಮಂತ್ರೋಚ್ಚಾರಣೆಮಾಡಿದ ನಂತರ ಆ ಸಿದ್ಧಿಯನ್ನು ತಾನು ಹೊಂದಲೇಬೇಕು. ಮತ್ತು ಮಧ್ಯೆಬರುವ ಕಷ್ಟಗಳನ್ನು ಅನುಭವಿಸಲೇಬೇಕು. ಹಾಗೆ ಬಂದ ಸಿದ್ಧಿಯನ್ನು ತಿರಸ್ಕರಿಸಿದರೆ ಸಾಧಕನೇ ನಾಶಹೊಂದುವನು ಸಾಧಕನು ಕ್ರಮಕ್ರಮವಾಗಿ ಭೂಗರ್ಭದಲ್ಲಿ (ಗುಹೆ) ವ್ರತಾಚರಣೆಗೆ ಆರಂಭಿಸಬೇಕು. ವಿದ್ಯೆಯು ಸಿದ್ಧಿಸದೆಹೋದರೆ ಆಗ ಆತನಿಗೆ ಭಯಂಕರವಾದ ನರಕವು ಲಭಿಸುವುದು.

ಸಿದ್ಧೋ ಯಃ ಶ್ರಿಯಾ ರಾಜಾ ಸಪ್ತದ್ವೀಪಾಧಿಪೋ ಬಲೀ ।
ಭುಕ್ತ್ವಾ ತು ಪಾರ್ಥಿವಾನ್ ಭೋಗಾನ್ ಶಿವಂ ಯಾತಿ ತನುಕ್ಷಯೇ॥ ೧೫॥

ಏತಾಸ್ತು ಸಿದ್ಧಯಃ ಪ್ರೋಕ್ತಾ ಉತ್ತಮಾಃ ಸರ್ವಕಾಮದಾಃ ।
ತದರ್ಧಾ ಮಧ್ಯಮಾ ಜ್ಞೇಯಾಃ ಕನೀಯಸ್ಯೋಽರ್ಧತೋಽಪ್ಯತಃ ॥ ೧೬ ॥

ಸ ಕ್ರಾಮಯತಿ ವೈ ಸಿದ್ಧೋ ಹ್ಯನ್ಯಸ್ಮಿನ್ ಸಿದ್ಧಿಮಿಚ್ಛತಿ ।
ಸರ್ವೈರ್ಗುಗ್ಗುಲಯೋಗೈಸ್ಸಿದ್ಧೋಽಧ್ಯಾನೀತತೋಽನ್ಯಥಾ ॥ ೧೭ ॥

ಭ್ರಷ್ಟರಾಜ್ಯೋ ನರೋ ದೇವೋ ಯದಿ ಸ್ಯಾತ್ಸಿದ್ಧಿಶೋಧಿತಃ ।
ಅಸಿದ್ಧೇ ತು ಗುಣೋ ಯೋಗೇ ಜಪಾದೇವ್ರತಿನೋ ನರಾಃ ॥ ೧೮ ॥

ಸುಖಂ ಕ್ರಾಮಂತಿ ವೈ ಸಿದ್ಧಿಂ ಸಂತೃಪ್ತಾ ಮಂತ್ರದೀಪಿತಾಃ ।
ಹೀನೋ ಯೋ ಹಿ ನರೋ ಯೋಜ್ಯಃ ಕಿಂ ಪುನಃ ಸಾಧಕೇ ಕ್ಷತೇ ॥೧೯॥

---

೧೫-೧೬. ಹೀಗೆ ಮಂತ್ರಸಿದ್ಧಿಯನ್ನು ಪಡೆದವನು ಸಪ್ತದ್ವೀಪ ಪರ್ಯಂತವಾಗಿರುವ ಭೂಮಿಗೆ ಒಡೆಯನೆನಿಸಿ, ರಾಜಭೋಗಗಳನ್ನೆಲ್ಲಾ ಅನುಭವಿಸಿ ಅಂತ್ಯದಲ್ಲಿ ಸ್ವರ್ಗವನ್ನು ಹೊಂದುವನು. ಇಲ್ಲಿನವರೆಗೆ ಹೇಳಿದ ಸಿದ್ಧಿಗಳೆಲ್ಲಾ ಉತ್ತಮ ಸಿದ್ಧಿಗಳು. ಅರ್ಧಸಿದ್ಧಿಯನ್ನೇ ಮಧ್ಯಮಸಿದ್ಧಿಯೆಂದೂ, ಅರ್ಧಕ್ಕಿಂತಲೂ ಕಮ್ಮಿಯಾದ ಸಿದ್ಧಿಯು ಅಧಮಯೋಗಗಳೆಂದೂ ಹೇಳಲ್ಪಡುವುವು.

೧೭-೧೮. ಈ ಗುಗ್ಗುಲುಯೋಗದಿಂದ ಸಿದ್ಧಿಯನ್ನು ಪಡೆದವನು ಉಳಿದ ಎಲ್ಲಾ ಯೋಗಗಳ ಸಿದ್ಧಿಯನ್ನೂ ಪಡೆಯುವನು. ಈ ಸಿದ್ಧಿಯಿಂದ ಮನುಷ್ಯನನ್ನು ದೇವತೆಯನ್ನಾಗಿ ಬೇಕಾದರೂ ಮಾಡಬಹುದು. ರಾಜನನ್ನು ರಾಜ್ಯಭ್ರಷ್ಟನನ್ನಾಗಿ ಓಡಿಸಬಹುದು. ಮಂತ್ರಸಿದ್ಧಿಯಿಲ್ಲದೆ ಕೇವಲ ಮಂತ್ರಜಪದಲ್ಲಿಯೇ ಇರುವವರು,

೧೯-೨೦. ಸುಖವನ್ನು ಪಡೆಯಬಹುದು. ಕೇವಲ ಮಂತ್ರದೀಪಿತವಾದರೂ ಸಹ ಹೆಚ್ಚಿನ ಸೌಖ್ಯವನ್ನು ಪಡೆಯುವುದಾದರೆ ಇನ್ನು ಮಂತ್ರಸಿದ್ಧಿಯನ್ನು ಹೊಂದಿ

ಮಾಸಂ ಗುಗ್ಗುಲುಹೋಮಸ್ತು ಸರ್ವದಾ ಸರ್ವಕರ್ಮಸು ।
ಜಪವೃದ್ಧಿಸ್ಸದಾ ಯೋಜ್ಯಾ ಸಂಕ್ರಮೇ ಮಂತ್ರಿಣಾ ಸದಾ ॥ ೨೦ ॥

ಸಂಕಲ್ಪಾಕ್ರಮಣಂ ಯುಂಜ್ಯಾನ್ನಾಸಂಕಲ್ಪಸ್ತು ಸಿದ್ಧ್ಯತಿ ।
ಸಂಕಲ್ಪಂ ತು ತತಃ ಕೃತ್ವಾ ಸಾಧ್ಯಂ ಮಂತ್ರೀ ತು ಸಾಧಯೇತ್ ॥ ೨೧ ॥

ಸತ್ಯವಾದೀ ಜಿತದ್ವಂದ್ವೋ ದೃಢಚರ್ಯಾರತಃ ಶುಚಿಃ ।
ಮಿತಭುಗ್ಮಿತಭಾಷಶ್ಚ ಸಾಧಯೇತ್ಸಿದ್ಧಿಮುತ್ತಮಾಂ ॥ ೨೨ ॥

ನ ಸಂಭಾಷೇತ ವೈ ಶೂದ್ರಂ ಪ್ರಮಾದಾನ್ಮಂತ್ರಸಾಧಕಃ ।
ಅರಕ್ತೋ ರಂಜಯೇಲ್ಲೋಕಾನ್ ಕಾಮೀ ಚೇತ್ಸ್ಯಾದಕಾಮುಕಃ ॥ ೨೩ ॥

ಗೂಢವಿದ್ಯಾವ್ರತಶ್ಚಾಪಿ ಪ್ರಮಾದೀ ಸ್ಯಾತ್ಸಸಾಧಕಃ ।
ಕ್ರಿಯಾಂ ಚ ಸುದೃಢಾಂ ಕುರ್ಯಾನ್ನವಿಹಿಂಸೇತ್ಸ ಸಾಧಕಃ ॥ ೨೪ ॥

---

ದವರು ಏನನ್ನು ತಾನೇ ಹೊಂದಲಾರರು ? ಗುಗ್ಗುಲು ಯೋಗದಲ್ಲಿ ಮಾಂತ್ರಿಕನು ಮಾಸಪರ್ಯಂತ ಗುಗ್ಗುಲು ಹೋಮಮಾಡಿದ ಮೇಲೆ ಜಪವನ್ನು ವೃದ್ಧಿಪಡಿಸಿಕೊಳ್ಳಬೇಕು.

೨೧–೨೨. ಸಾಧಕನು ಮೊದಲು ಒಂದು ಸಿದ್ಧಿಸಾಧನೆಗಾಗಿ ಸಂಕ್ರಮಣ ಕಾಲದಲ್ಲಿ ಸಂಕಲ್ಪವನ್ನು ವಿಧಿವತ್ತಾಗಿ ಮಾಡಬೇಕು. ಸಂಕಲ್ಪವಿಲ್ಲದೆ ಯಾವ ಕಾರ್ಯಕ್ಕೂ ತೊಡಗಕೂಡದು. ಅನಂತರ ಸಾಧಕನು ಮಂತ್ರಪುರಶ್ಚರಣೆಮಾಡುತ್ತ ಸತ್ಯವಾದಿಯಾಗಿಯೂ, ಜಿತೇಂದ್ರಿಯನಾಗಿಯೂ, ಮಿತಾಹಾರ, ಮಿತಭಾಷಣವುಳ್ಳವನಾಗಿಯೂ ಇದ್ದು ಮಂತ್ರಸಿದ್ಧಿಪರ್ಯಂತ ವ್ರತಾದಿಗಳನ್ನು ಆಚರಿಸುತ್ತಿರಬೇಕು.

೨೩-೨೪. ಸಾಧಕನು ಮರೆತೂ ಶೂದ್ರಾದಿಗಳೊಡನೆ ಸಂಭಾಷಣೆ ನಡೆಸಕೂಡದು. ಯಾವ ಆಡಂಬರಾದಿಗಳನ್ನೂ ಇಟ್ಟುಕೊಳ್ಳದೆ, ಆಸೆಪಡದೇ, ವಿದ್ಯೆಯನ್ನೇ ಗೂಢವಾಗಿಟ್ಟುಕೊಂಡು, ಬಹಳ ಎಚ್ಚರಿಕೆಯಿಂದ ಸಾಧನೆಗೆ ತೊಡಗಬೇಕು. ದೃಢಕಾರ್ಯಾಚರಣೆಗಳಲ್ಲಿ ಯಾರಿಗೂ ಹಿಂಸೆಯನ್ನು ಕೊಡಬಾರದು.

ಯಾವದ್ವ್ರತಂ ತು ಯಃ ಕುರ್ಯಾತ್ತಸ್ಯ ಸಿದ್ಧ್ಯಂತಿ ಲೌಕಿಕಾಃ ।
ಜಪಿತ್ವಾ ಸಂಹಿತಾಂ ಮಾಸಂ ತತಸ್ಸಾಧ್ಯಂ ಪ್ರಯೋಜಯೇತ್ ॥ ೨೫ ॥

ಪ್ರಸೂತಿಂ ಘಾತಕೇ ಕೃತ್ವಾ ಲವಣಸ್ಯಾಹುತಿಂ ಕ್ರಮಾತ್ ।
ಸಪ್ತರಾತ್ರಂ ತಥಾ ಹುತ್ವಾ ವಶೇ ಜಂತೂನ್ ಕರೋತಿ ಸಃ ॥ ೨೬ ॥

ಪ್ರತಿಲೋಮೈಸ್ತಥಾ ವರ್ಣೈಸ್ಸಾಧಕೋ ಘಾತಕಸ್ಯ ತು ।
ಶೃಂಗಿಬೇರವಿಷೇ ಹುತ್ವಾ ಘಾತಯೇತ್ಸರ್ವಜಂತಕಾನ್ ॥ ೨೭ ॥

ಅವ್ರತೀ ನೈವ ಸಂಸಿದ್ಧ್ಯೇತ್ ಅಜಯಸ್ಸಾಧಕಸ್ಯ ವೈ ।
ಮೋಹಾದಾರಭತೇ ಯಸ್ತು ಹನ್ಯತೇ ಸೋಽವಿಧಾನವಿತ್ ॥ ೨೮ ॥

---

೨೫-೨೬. ವ್ರತಾಚರಣೆಯಿಂದಲೇ ಸಾಧಕನು ಲೌಕಿಕವಾದ ಅನೇಕ ಸಿದ್ಧಿಗಳನ್ನು ಪಡೆಯಬಹುದು. ಯಾವ ಸಾಧಕನು ಒಂದು ತಿಂಗಳು ಪರ್ಯಂತ ಸಂಹಿತಾ ಪಾರಾಯಣಮಾಡಿ, ಅನಂತರ ಸಾಧ್ಯಾಂಶಸಾಧನೆಗೆ ಪ್ರಯತ್ನಪಡುವನೋ ಆತನು ಬಹುಬೇಗ ವ್ರತಸಿದ್ಧಿಯನ್ನು ಹೊಂದುವನು. ಘಾತುಕಪ್ರಾಣಿಗಳನ್ನು ಪ್ರಕೃತಿಯನ್ನಾಗಿ ಮಾಡಿಕೊಂಡು ಏಳು ದಿನ ಪೂರ್ತಿ ಲವಣಹೋಮ ಮಾಡಿದ್ದೇ ಆದರೆ ಎಲ್ಲಾ ದುಷ್ಟಪ್ರಾಣಿವರ್ಗವನ್ನೂ ಸುಲಭವಾಗಿ ವಶಮಾಡಿಕೊಳ್ಳಬಹುದು.

೨೭-೨೮. ಕೊಲ್ಲಬೇಕಾದ ಪ್ರಾಣಿಯ ಹೆಸರನ್ನು ತಲೆಕೆಳಗಾಗಿ ಬರೆದು ಅದರಲ್ಲಿ ಶೃಂಗಬೇರವಿಷ (ವಿಷವಿಶೇಷ) ವನ್ನು ಹೋಮಮಾಡಿದರೆ ಆ ಪ್ರಾಣಿಯು ಬಹುಬೇಗ ನಾಶವಾಗುವುದು. ವ್ರತಿಯಾಗದವನು ಸಿದ್ಧಿಯನ್ನು ಹೊಂದಲಾರನು. ಸಾಧಕನಾಗದವನು ಎಂದೂ ಜಯವನ್ನು ಪಡೆಯಲಾರನು. ಅಜ್ಞಾನದಿಂದ ಎಲ್ಲರೂ ಸಿದ್ಧಿಯನ್ನು ಪಡೆಯಬೇಕೆಂದು ಹೊರಟರೆ ಅದರಿಂದ ಅನರ್ಥವೇ ಒದಗಿ ತಾನೂ ನಾಶವಾಗುವನು.

ವೇಧಕಾಮಸ್ತು ಮಂತ್ರಸ್ತು ಯದಿ ರೂಪಂ ಸಮಾಲಿಖೇತ್ ।
ಪೂರ್ವೋಕ್ತೇನ ವಿಧಾನೇನ ತ್ರಿಮುಖಾಂ ತಾಂ ಚತುರ್ಭುಜಾಂ ॥ ೨೯ ॥

ಅಷ್ಟಶಕ್ತಿಪರೋ ಚೈವ ದಿಕ್ಪತೀನಾಂ ಚ ರೂಪಕೈಃ ।
ರಶ್ಮಯಸ್ತು ಯಥಾರ್ಕಸ್ಯ ತಥಾ ಮಂತ್ರಸ್ಯ ತಾಃ ಸ್ಮೃತಾಃ ॥ ೩೦ ॥

ಯಥಾ ವಿಷ್ಣುಸ್ತಥಾ ರುದ್ರೋ ವೀರಭದ್ರಶ್ಚ ಪಾರ್ಶ್ವತಃ ।
ಏತೇ ಮಂತ್ರಸ್ಯ ವೈ ಯೋಜ್ಯಾಃ ಸರ್ವಕಾಲಂ ತು ಮಂತ್ರವಿತ್ ॥ ೩೧ ॥

ಹೋಮಕಾಲೇ ತು ಮಂತ್ರಸ್ಯ ಜಪೇನ ವಿನಿಯೋಜಯೇತ್ ।
ಶಾತನೇ ಚಾಪಿ ರೋಗಾಣಾಂ ಏಷ ದೃಷ್ಟೋ ವಿಧಿಃ ಪರಃ ॥ ೩೨ ॥

ಸಂಶಯೀ ತು ಯದಾ ಸಸ್ಯಾತ್ತದಾ ಕುರ್ಯಾದಿಮಂ ವಿಧಿಂ ।
ಸಾಧಯೇತ್ಕಾಮತೋಹ್ಯರ್ಥಾನ್ ಪತಿಃ ಸ್ಯಾದ್ಬೀಜಸತ್ತಮಃ ॥ ೩೩ ॥

---

೨೯-೩೦. ಹಿಂದೆ ಹೇಳಿದ ಮಂತ್ರವೇಧೆಯನ್ನು ತಿಳಿದು ಕಾರ್ಯಸಿದ್ಧಿಯನ್ನು ಬಯಸಲಪೇಕ್ಷಿಸುವವನು ಪೂರ್ವೋಕ್ತವಿಧಾನದಂತೆ ತ್ರಿಮುಖಾಕಾರದ ನಾಲ್ಕು ತೋಳುಗಳುಳ್ಳ ಅಷ್ಟಶಕ್ತ್ಯೈಕ್ಯ ಸ್ವರೂಪವಾದ ವಿಗ್ರಹವನ್ನೂ ದಿಕ್ಪತಿಗಳ ಆಕಾರವನ್ನೂ, ಸೂರ್ಯನ ರಶ್ಮಿ ಮಂತ್ರಗಳನ್ನೂ ಅಲ್ಲಿ ಬರೆಯಬೇಕು.

೩೧-೩೨. ಮಧ್ಯೆ ವಿಷ್ಣುವನ್ನೂ, ಅಕ್ಕಪಕ್ಕಗಳಲ್ಲಿ ರುದ್ರ, ವೀರಭದ್ರ, ಇವರನ್ನೂ ಸ್ಥಾಪಿಸಬೇಕು. ಆಯಾ ದೇವತೆಗಳ ಮಂತ್ರದಿಂದಲೇ ಆವಾಹಿಸಿ, ಅನಂತರ ಹೋಮಮಾಡಬೇಕು. ರೋಗನಾಶಕವಾಗಿ ಮಾಡುವ ಕರ್ಮಗಳಲ್ಲಿಯೂ, ಅದೇ ಮಂತ್ರಗಳ ಪುರಶ್ಚರಣೆ, ಮತ್ತು ಇವುಗಳನ್ನು ನಡೆಸಬಹುದು.

೩೩-೩೪. ಸಂಶಯಾತ್ಮನು ನಿಶ್ಚಯಜ್ಞಾನವನ್ನು ಪಡೆಯುವುದಕ್ಕೂ ಕಾಮ ಅರ್ಥ, ಇವುಗಳನ್ನು ಸಾಧಿಸುವುದಕ್ಕೂ ಬೀಜಮಂತ್ರವನ್ನೇ ಉಚ್ಚರಿಸಬೇಕು.

ರಾಷ್ಟ್ರಭಂಗೇ ನಿಪಾತೇ ವಾ ಸ್ಥಾನತ್ಯಾಗೇ ತಥಾ ಬುಧಃ ।
ಸಂಪುಟೀ ಸ್ಥಾಪಯೇನ್ಮಂತ್ರಂ ಯಾವತ್ಕಾಲವಿಪರ್ಯಯಃ ॥ ೩೪ ॥

ಸಂಹಾರಾಂತಂ ತತಃ ಕೃತ್ವಾ ಮಧ್ಯೇ ಮಂತ್ರಂ ತು ಯೋಜಯೇತ್ ।
ಪುನಸ್ಸಂಹಾರಮಾಯೋಜ್ಯ ಮಧ್ಯೇ ಬೀಜೇನ ವೇಷ್ಟಯೇತ್ ॥ ೩೫ ॥

ದಶವರ್ಣೇನ ಬೀಜೇನ ತ್ವಂಗಪ್ರತ್ಯಂಗಯೋಜನಂ ।
ನ್ಯಸ್ತೋ ಭವತಿ ವೈ ಮಂತ್ರಃ ಕಾಲಮಾಕಲ್ಪಮಂತ್ರಿಣಾಂ ॥ ೩೬ ॥

ಅಧಸ್ತಾತ್ಪ್ರಣವಂ ಕೃತ್ವಾ ಪ್ಲುತೌ ದ್ವೌ ಚಾಪಿ ಪಾದಯೋಃ ।
ಪುನಃಪುನಸ್ತಥಾ ಹಸ್ತೇ ವ್ಯೋಕಾರಶ್ಚಾಪಿ ವಾಮಕೇ ॥ ೩೭ ॥

ಹೃದಯೇ ತು ಮಕಾರಸ್ಸ್ಯಾತ್ ವ್ಯೋಕಾರೋ ಜಠರೇ ಸ್ಥಿತಃ ।
ವಿಕಾರಃ ಪೃಷ್ಠಸಂಸ್ಥೋ ವೈ ನಕಾರೋ ಮುಖಸಂಸ್ಥಿತಃ ॥ ೩೮ ॥

---

ಒಂದು ರಾಷ್ಟ್ರವನ್ನೇ ನಾಶಮಾಡಲು ಅಥವಾ ಒಡೆಯಲು, ಸ್ಥಾನಭ್ರಷ್ಟರನ್ನಾಗಿ ಮಾಡಲು ಎಷ್ಟುಕಾಲ ಬೇಕಾಗುವುದೋ ಅಲ್ಲಿನವರೆಗೆ ಮಂತ್ರಗಳನ್ನು ಸಂಪುಟೀಕರಣಮಾಡಬೇಕು.

೩೫–೩೬. ಅನಂತರ ಸಂಹಾರಾಂತವಾಗಿ ಕರ್ಮಮಾಡಿ, ಮಧ್ಯೆಮಧ್ಯೇ ಮೂಲಮಂತ್ರಗಳನ್ನೇ ಸಂಪುಟೀಕರಣಮಾಡುತ್ತಾ ಮತ್ತೆ ಸಂಹಾರಮಂತ್ರವನ್ನೆ ಸ ಗುತ್ತಾ ಬೀಜಮಂತ್ರವನ್ನು ದಶವರ್ಣಾಕ್ಷರಘಟಿತವಾದ ಬೀಜಮಂತ್ರದ ಅಂಗ ಪ್ರತ್ಯಂಗಗಳಿಂದ ಕೂಡಿಸಿ, ಉಚ್ಚರಿಸುತ್ತಿರಬೇಕು. ಹೀಗೆ ಮಾಡುವುದರಿಂದ ಮಂತ್ರವು ಕಲ್ಪಪರ್ಯಂತವಾಗಿ ಫಲವನ್ನು ಕೊಡತಕ್ಕದ್ದಾಗುವುದು.

೩೭–೩೮. ಆಕಾರದ ಅಧೋಭಾಗದಲ್ಲಿ ಪ್ರಣವವನ್ನೂ ಪಾದಗಳಲ್ಲಿ ಎರಡು ಪ್ಲುತಗಳನ್ನೂ ಅದನ್ನು ಬಲಗೈಯಲ್ಲಿಯೂ, ವ್ಯೋಕಾರವನ್ನು ವಾಮಭಾಗದಲ್ಲಿಯೂ ಹೃದಯದಲ್ಲಿ ಮಕಾರವನ್ನೂ, ಜಠರದಲ್ಲಿ ವ್ಯೋಕಾರವನ್ನೂ, ಪೃಷ್ಠಭಾಗದಲ್ಲಿ ವಿಕಾರ ವನ್ನೂ ಮುಖದಲ್ಲಿ ನಕಾರವನ್ನೂ ಬರೆಯಬೇಕು.

ಪ್ರಣವಂ ದಾಪಯೇನ್ಮೂರ್ಧ್ನಿ ಸ ಚ ದೃಷ್ಟೋ ವಿಧಿಃ ಪರಃ ।
ನ್ಯಸ್ತೋ ಭವತಿ ವೈ ಮಂತ್ರೋ ಯಾವತ್ಕಾಲಂ ತು ಸಾಧನಂ ॥ ೩೯ ॥

ವಿಧಿರೇಷ ತು ಮಂತ್ರಾಣಾಂ ಸೂಕ್ಷ್ಮೋ ವೈ ಸರ್ವತೋ ಮುಖಃ ।
ಅಸಂದೇಹೇನ ಸಿದ್ಧೇನ ವಿಧಿಗುಪ್ತೇನ ಮಂತ್ರವಿತ್ ॥ ೪೦ ॥

ಗ್ರಹಣೇ ಚಾಪಿ ಮಂತ್ರಸ್ಯ ಭಿನ್ನಾ ಕಾರ್ಯಾಶ್ಚ ಮಂತ್ರಿಣಃ ।
ಮೂಲಂ ತು ಸಾಧನೇ ಯುಂಜ್ಯಾದಾದ್ಯಂತಕವಿಧಿಃ ಕ್ರಮಾತ್ ॥ ೪೧ ॥

ಕ್ರಮಾದ್ವಾ ನೈವ ಕುರ್ವಂತಿ ಕೃತಮಿತ್ಯತ್ರ ಸಾಧನಂ ।
ಅಮಂತ್ರ್ಯ ತು ವಿವರ್ತೇತ ತಂತ್ರಮುಕ್ತಂ ತು ಸಾಧಯೇತ್ ॥ ೪೨ ॥

ಮಂತ್ರೇ ಜಪೇ ಚ ಯೇ ಲಗ್ನಾಸ್ತಥಾ ವ್ರತವಿಧೌ ಸ್ಥಿತಾಃ ।
ಸಾಧನಂ ತು ಪುನಸ್ತೇಷಾಂ ಯಥಾ ಶಾಸ್ತ್ರಸಮಾಗಮಂ ॥ ೪೩ ॥

---

೩೯-೪೦ ಶಿರೋಭಾಗದಲ್ಲಿ ಪ್ರಣವವನ್ನು ಬರೆಯುವುದೂ ಒಂದುವಿಧಿಯಿದೆ. ಹೀಗೆ ಮಂತ್ರಾಕ್ಷರಪೂರ್ವಕವಾಗಿ ಬರೆದು ಮಾಡುವ ಸಾಧನವು ಅಚಿರದಲ್ಲಿಯೇ ಫಲ ಕೊಡುವುದು. ಇದೇ ಸೂಕ್ಷ್ಮವಾದ ಮಂತ್ರವಿಧಿ. ಮಂತ್ರಜ್ಞನಾದವನು ನಿಶ್ಚಯಾತ್ಮಕವಾದ ಜ್ಞಾನದಿಂದ ಗುಪ್ತವಾಗಿ ವಿಧಿಯಂತೆ ನಡೆಯಬೇಕು .

೪೧-೪೨. ಮಂತ್ರಸ್ವೀಕಾರಕಾಲದಲ್ಲಿ ಮಂತ್ರಗಳನ್ನು ಬಿಡಿಸಿ ಬಿಡಿಸಿ ಹೇಳಿ ಕೊಡಬಹುದು. ಸಾಧನಕಾಲದಲ್ಲಿ ಮಾತ್ರ ಆದ್ಯಂತವಾಗಿ ಮಂತ್ರವನ್ನುಚ್ಚರಿಸಬೇಕು. ಕ್ರಮವಾಗಿ ಮಾಡುವ ಸಾಧನವು ಸಾಧನವಲ್ಲ. ಏಕದಾ ಸರ್ವವನ್ನೂ ಸಾಧಿಸುವ ಮಾರ್ಗವೇ ಸಾಧನವೆನಿಸುವುದು. ಅಮಂತ್ರದಲ್ಲಿ ತಂತ್ರೋಕ್ತವಾದ ಮಾರ್ಗದಂತೆ ಕಾಲವಿಳಂಬ ಮಾಡಲು ಅವಕಾಶವಿರುವುದು.

೪೩-೪೪. ಮಂತ್ರಜಪ, ವ್ರತವಿಧಿ, ಇವುಗಳಲ್ಲಿ ಸಾಧಕನು ಶಾಸ್ತ್ರನಿಯಮ

ಸ್ವಲ್ಪೇಽಪಿ ಸಾಧನೇ ಯುಂಜ್ಯಾಜ್ಜಪವ್ರತರತೈಸ್ತು ವೈ ।
ಅನ್ಯಥಾ ಹೀಯತೇ ಮಂತ್ರೀ ಕರ್ಮಣಾಪಿ ನಿರರ್ಥಕಂ ॥ ೪೪ ॥

ಮಾಂಸಸಾಧನಯೋಗೇನ ಜಪಿತ್ವಾ ಚಾಪಿ ಸಂಹಿತಾಂ ।
ಪಂಚರಾತ್ರವ್ರತಂ ಪಶ್ಚಾದಸಿಧಾರಂ ಯಥಾ ಕ್ರಮಾಂ ॥ ೪೫ ॥

ಕ್ಷುದ್ರಾನ್ ರೋಗಾನ್ ಗೃಹಾಂಶ್ಚಾಪಿ ತಥಾ ವ್ಯಾಧೀನುಪದ್ರವಾನ್ ।
ಇಚ್ಛಾತಃ ಸಾಧಯೇತ್ಸರ್ವಾಂಸ್ತೀಕ್ಷ್ಣವ್ರತರತೋ ನರಃ ॥ ೪೬ ॥

ಮಹಾತಪಸ್ವೀ ಚ ಜಿತೇಂದ್ರಿಯಶ್ಚ
ನ ಚಾನ್ಯಭಕ್ತೈಶ್ಚ ಮಹೇಶ್ವರಾದಸೌ ।
ವಿದ್ಯಾಸು ತತ್ತ್ವೇಷು ಮಹಾಸ್ಥಿತೀಂಶ್ಚ
ಪ್ರಾಪ್ನೋತಿ ವಿದ್ಯಾಧರಮುಖ್ಯಲಕ್ಷ್ಮೀಂ ॥ ೪೭ ॥

---

ಗಳನ್ನು ತಿಳಿದಿರಬೇಕು. ಕೇವಲ ತಾಂತ್ರಿಕಮಾರ್ಗವನ್ನೇ ಅವಲಂಬಿಸಿ, ಶಾಸ್ತ್ರಾನುಷ್ಠಾನದಿಂದ ದೂರನಾದರೆ ಅವನ ಮಂತ್ರಗಳು ನಿರರ್ಥಕಗಳಾದಾವು.

೪೫-೪೬. ಮಾಂಸಾಹುತಿಗಳಿಂದಲೂ ಸಂಹಿತಾಪಾರಾಯಣದಿಂದಲೂ, ಪಂಚರಾತ್ರ ವ್ರತದಿಂದಲೂ ಅಸಿಧಾರಾನುಸರಣೆಯಿಂದಲೂ (ಕತ್ತಿಯು ಅಲುಗಿನಮೇಲೆ ನಿಲ್ಲುವುದು) ಕ್ಷುದ್ರಕರವಾದ ರೋಗಗಳನ್ನು ಗೆಲ್ಲಬಹುದು. ಅದಕ್ಕಾಗಿ ವಿಶೇಷ ತರವಾಗಿ ಹಿಂಸೆಕೊಡುವ ದೊಡ್ಡದೊಡ್ಡ ರೋಗಗಳನ್ನು ನಿವಾರಣೆಮಾಡಲು ತೀಕ್ಷ್ಣ ವ್ರತಾನುಷ್ಠಾನಪರನಾಗಿರಬೇಕು.

೪೭. ಒಟ್ಟಿನಲ್ಲಿ ಮಹಾ ತಪಸ್ವಿಯಾಗಿಯೂ, ಜಿತೇಂದ್ರಿಯನಾಗಿಯೂ, ಇದ್ದು ಕೇವಲ ಈಶ್ವರಾರಾಧನೆಯಲ್ಲಿಯೇ ನಿರತರಾದವರು, ಸಮಸ್ತವಾದ ವಿದ್ಯೆಗಳನ್ನೂ, ಸಕಲ ತತ್ತ್ವಮಾರ್ಗವನ್ನೂ, ಅನುಪಮವಾದ ದಿವ್ಯಭೋಗಗಳನ್ನೂ ಪಡೆಯುವರು.

ದಶಾತ್ಮಕಂ ತು ತಂ ಬುದ್ಧ್ವಾ ಬೀಜತತ್ತ್ವಂ ತು ಕೃತ್ಸ್ನಶಃ ।
ನಿಯೋಗಂ ಪದಬೀಜಾನಾಂ ಬುದ್ಧಿಸಿದ್ಧಿಂ ಯಥೋದಿತಾಂ ॥ ೪೮ ॥

ಸರ್ವಮಂತ್ರಾತ್ಮಕಾ ದೇವಾಃ ಸರ್ವದೇವಾಶ್ಶಿವಾತ್ಮಕಾಃ ।
ಶಿವತಂತ್ರಪದೈರ್ಬೀಜೈಃ ಕಾಲಕಾಲಕೃಪಾದಿಭಿಃ ।
ಬುದ್ಧ್ವಾ ಸಮ್ಯಗ್ಯಥಾ ನ್ಯಾಯಂ ಸಿದ್ಧಿಂ ಚಾಶು ಪ್ರವರ್ತತೇ ॥ ೪೯ ॥

ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇ ಅಷ್ಟಷಷ್ಟಿತಮೋಽಧ್ಯಾಯೇ
ಸರ್ವಸಾಮಾನ್ಯಸಾಧನಂ ನಾಮ ಪಂಚದಶಂ ಪಟಲಂ.

---

೪೮-೪೯. ಬೀಜತತ್ತ್ವವು ದಶಾತ್ಮಕವಾದದ್ದೆಂದು ಭಾವಿಸಬೇಕು. ಅದರ ಬೀಜಮಂತ್ರಗಳನ್ನೂ, ಸಿದ್ಧಿಪ್ರಕಾರವನ್ನೂ ವಿಧಿವತ್ತಾಗಿ ತಿಳಿದು ಸಕಲ ಮಂತ್ರಗಳೂ ದೇವತಾಸ್ವರೂಪವೆಂದೂ, ಸಕಲ ದೇವತೆಗಳೂ ಶಿವಸ್ವರೂಪವೆಂದೂ, ಸಕಲ ತಂತ್ರಸಿದ್ಧಿಗೂ ಈಶ್ವರಾನುಗ್ರಹವೇ ಮುಖ್ಯಕಾರಣವೆಂದೂ ಅರಿತು, ಪರಮೇಶ್ವರನ ಕೃಪಾತಿಶಯ ಸಂಪಾದನೆಗಾಗಿ ಸರ್ವರೂ ಪ್ರಯತ್ನಿಸಬೇಕು.

ಇಲ್ಲಿಗೆ ಅರವತ್ತೆಂಟನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ

# ಏ ಕೋ ನ ಸ ಪ್ತ ತಿ ತ ಮೋ ಧ್ಯಾ ಯಃ

---

ತತ್ತ್ವಾನುಸಾರೇಣ ಪಥಃ ಕ್ರಮಶೋಥಾನುವರ್ಣ್ಯತೇ ।
ಶಿವಲೋಕಂ ಯಥಾ ಯೇನ ಪ್ರವಿಶೇದ್ಗೃಹವತ್ ಗೃಹೀ ॥ ೧ ॥

ಗಣಮಂಡಲತತ್ತ್ವಜ್ಞಸ್ತೇಷು ಪಾಪರತಃ ಸದಾ ।
ಅನೇಕಶೋಭಿಷಿಕ್ತಶ್ಚ ಶಿವವದ್ಗುರುಪೂಜಕಃ ॥ ೨ ॥

ಅರ್ಪಿತಃ ಶಿವಯೋಗೌ ಚ ಗರ್ಭಂ ಚಾಂಬಿಕಯಾ ಧೃತಃ ।
ಯೋಗೇನ ಜನಿತಶ್ಚೈವ ಯೋಗಾತ್ಮಾ ಯೋಗಸಂಭವಃ ॥ ೩ ॥

---

## ಅರುವತ್ತೊಂಬತ್ತನೆಯ ಅಧ್ಯಾಯ

೧-೨. ತತ್ತ್ವಾನುಸಾರವಾದ ಮುಕ್ತಿಮಾರ್ಗವನ್ನು ಈಗ ವಿವರಿಸುವೆನು. ತತ್ತ್ವಮಾರ್ಗಗಾಮಿಯು ತನ್ನ ಮನೆಯನ್ನೇ ಶಿವಲೋಕವೆಂದು ತಿಳಿಯಬೇಕು. ಗಣಮಂಡಲದ ದೇವತೆಗಳ ಸ್ವರೂಪವನ್ನು ಸಂಪೂರ್ಣವಾಗಿ ಅರಿತವನಾಗಿ, ಶಂಕರನನ್ನೂ, ಗುರುವನ್ನೂ, ವಿಧಿವತ್ತಾಗಿ ಪೂಜಿಸಬೇಕು.

೩-೪. ಶಿವನ ಅನುಗ್ರಹದಿಂದ ಅಂಬಿಕೆಯ ಗರ್ಭದಲ್ಲಿ ಯೋಗಶಕ್ತಿಯಿಂದ ಜನಿಸಿ, ಯೋಗಾತ್ಮನೆನಿಸಿಕೊಂಡವನೆಂಬ ಭಾವನೆಯಿರಬೇಕು. ಅನಂತರ ಜಾತ

ಜಾತಕರ್ಮಾದಿಭಿರ್ಯುಕ್ತಃ ಸ್ನಾನಾದ್ವಿಗತಕಲ್ಮಷಃ ।
ಕೃತರಕ್ಷಶ್ಚ ಧೂಪೇನ ಸತ್ಯಾತ್ಮಾ ಸತ್ಯಸಂಭವಃ ॥ ೪ ॥

ವಿಧಿನಾ ಚೋಪನೀತಸ್ತು ಮುಂಜಾಜಿನಧರಶ್ಶುಚಿಃ ।
ದೇವವ್ರತಧರೋ ಮುಂಡೀ ವಾ ಜಟೀ ಭೈಕ್ಷಭೋಜನಃ ॥ ೫ ॥

ವಿಧಿನಾಧೀತವಿದ್ಯಶ್ಚ ಸರ್ವಜ್ಞೋ ಬೀಜವಿತ್ತಮಃ ।
ಕೃತಾತ್ಮಾ ಕೃತವಿದ್ಯಶ್ಚ ಕೃತಗೋದಾನದಕ್ಷಿಣಃ । ॥ ೬ ॥

ಪ್ರಸೃತಸ್ತ್ರಿವೃತಾನ್ನಂ ಚ ಮೂರ್ಧ್ನ್ಯಾಘ್ರಾತಶ್ಚ ಆತ್ಮನಾ ।
ಕರ್ತ್ರಾವತ್ಕೃತಚೂಡೋಽಯಂ ಮಂತ್ರಶಕ್ತ್ಯನುಷ್ಠಿತಃ ॥ ೭ ॥

ಪಾಕಯಜ್ಞಂ ಹವಿರ್ಯಜ್ಞಂ ಸೋಮಯಾಜೀ ತಥೈವ ಚ ।
ಶಿವಮಾರ್ಗಾನುಸಾರೀ ಚ ಧನವಾನ್ ಯೋಗನಿಶ್ಚಯಃ ॥ ೮ ॥

---

ಕರ್ಮಾದಿ ಸಂಸ್ಕಾರಗಳಿಂದ ಸಂಸ್ಕೃತನಾಗಿ, ಸ್ನಾನಾದಿಗಳಿಂದ ಶುದ್ಧ ಚೇತನನೆನಿಸಿ, ಧೂಪಾದಿಗಳಿಂದ ರಕ್ಷೆಯನ್ನು ಪಡೆದು ಸತ್ಯಾತ್ಮಕನಾಗಿ ವರ್ತಿಸಬೇಕು.

೫-೭. ಶಿವಸ್ವರೂಪಿಯೇ ತಾನು ಎಂದು ಭಾವಿಸಿ, ಅನ್ನಪ್ರಾಶನ, ಚೂಡಾ ಕರ್ಮ, ಉಪನಯನ, ಮೌಂಜಿಧಾರಣ, ಅಜಿನಧಾರಣಾದಿ ಸಂಸ್ಕಾರಗಳಿಂದ ಶುದ್ಧನಾಗಿ ಸದಾ ಸದ್ವೃತಾಚರಣೆಗಳನ್ನು ನೆರವೇರಿಸುತ್ತಾ,ಮುಂಡಿ(ಸನ್ಯಾಸಿ)ಯಾಗಿಯೋ ಅಥವಾ ಜಟಾಧಾರಿಯಾಗಿಯೋ ಇದ್ದು, ಭಿಕ್ಷಾನ್ನದಿಂದ ಜೀವಿಸುವವನಾಗಬೇಕು. ವಿಧಿವತ್ತಾಗಿ ಬ್ರಹ್ಮವಿದ್ಯೆಯನ್ನರಿತು, ಸರ್ವಜ್ಞಸ್ವರೂಪನೆನಿಸಿ, ಗೋದಾನಾದಿ ವ್ರತ ಚತುಷ್ಟಯಗಳಿಂದ ಶುದ್ಧನಾಗಿ ಇತರ ದಾನಗಳನ್ನೂ, ಗುರುದಕ್ಷಿಣೆಯನ್ನೂ ನೆರವೇರಿಸಬೇಕು.

೮-೧೦. ಸಪ್ತಪಾಕಯಜ್ಞಗಳನ್ನೂ ವಿಧಿವತ್ತಾಗಿ ನಡೆಸಿ, ಸೋಮಯಾಗ ಮಾಡಿ, ಶೈವ ಸಂಪ್ರದಾಯವನ್ನೇ ಅನುಸರಿಸುತ್ತಾ, ಯೋಗಾಭ್ಯಾಸ ನಿರತನಾಗಿ, ಕರ್ಮಠನಾಗಿ ಕೊನೆಗೆ ಗುಣದೋಷಗಳೆರಡನ್ನೂ ತ್ಯಜಿಸಿ, ನಿರ್ಗುಣಾತ್ಮಕವಾದ

ಯಥೋಕ್ತಜ್ಞಾನಕರ್ಮಸ್ಥೋ ಗುಣದೋಷವಿವರ್ಜಿತಃ ।
ಸ ತೇ ನಿರ್ಮಾಲ್ಯದೋಷಶ್ಚ ಸರ್ವತತ್ತ್ವೇಷು ಸಿಧ್ಯತಿ ॥ ೯ ॥

ಏವಂ ಗುಣವಿಶಿಷ್ಟಾತ್ಮಾ ತಪಸ್ವೀ ದ್ವಂದ್ವವರ್ಜಿತಃ ।
ಕ್ರೋಧಾದಿಭಿರ್ವಿಯುಕ್ತಶ್ಚ ಸಮಲೋಷ್ಟಾಶ್ಮಕಾಂಚನಃ । ॥ ೧೦ ॥

ಆತ್ಮವತ್ಸರ್ವಭೂತೇಷು ಸರ್ವಮಾತ್ಮನಿ ಪಶ್ಯತಿ ।
ಪ್ರಾಣಾಯಾಮಾದಿಭಿಃ ಛಿನ್ನಸ್ತುತಯಾ ಪುಟಸಂಶಯಃ ॥ ೧೧ ॥

ವಿಶುದ್ಧಾಚಾರ ಆಚಾರ್ಯೋ ಭಾವತಃ ಪ್ರಣಿಯುಜ್ಯತೇ ।
ಅನೇನ ಕ್ರಮಯೋಗೇನ ವಿಶೇದ್ದೇವಂ ಪರಂ ಪ್ರಭುಂ ॥ ೧೨ ॥

ಪ್ರತಿಕರ್ತೃಪ್ರತಿಧ್ಯಾಯೀ ವಿಧಿನಾ ತತ್ತ್ವದಾತ್ಮನಃ ।
ಧ್ಯಾಯಂಶ್ಚ ಶಿವಮಾತ್ಮಸ್ಥಮಾಚಾರ್ಯಂ ಚಾಪಿ ಶೇಷಯೇತ್ ॥ ೧೩ ॥

---

ಬ್ರಹ್ಮಾನುಸಂಧಾನ ಮಾಡುವವನಾಗಬೇಕು. ಇಂತಹವನಿಗೆ ಸಕಲ ತತ್ತ್ವಗಳೂ ಸಿದ್ಧಿಸಿದಂತೆಯೇ ಆಗುವುವು. ಈ ರೀತಿ ಯೋಗಿಯಾದವನು ಸುಖದುಃಖಗಳಿಗೆ ಮನಗೊಡದೆ ಕಾಮಕ್ರೋಧಗಳನ್ನೂ ದೂರಮಾಡಿ, ಸುವರ್ಣವನ್ನೂ ಸಹ ಮಣ್ಣು ಹೆಂಟೆಯಂತೆ ತಿಳಿಯುವಂತಹ ವೈರಾಗ್ಯಶಾಲಿಯಾಗಿರಬೇಕು.

೧೧-೧೨. ಪ್ರತಿಯೊಂದು ಪ್ರಾಣಿಗಳನ್ನೂ ತನ್ನಂತೆಯೇ ನೋಡಬೇಕು. ಸರ್ವವೂ ಪರಮಾತ್ಮಸ್ವರೂಪವೆಂದೇ ಅರಿಯಬೇಕು. ಪ್ರಾಣಾಯಾಮಾದಿಗಳಿಂದ ದೇಹವನ್ನು ಶುದ್ಧಿಗೊಳಿಸಿಕೊಂಡಿರಬೇಕು. ಶುದ್ಧವಾದ ಆಚಾರಾದಿಗಳನ್ನು ನಡೆಸುವವನಾಗಿ ಭಾವನಾಶುದ್ಧಿಯಿಂದಿದ್ದು ಸೋಽಹಂಭಾವದಿಂದ ಪರಮಾತ್ಮನಲ್ಲಿ ಐಕ್ಯನಾಗಬೇಕು.

೧೪-೧೪. ಪರಬ್ರಹ್ಮವಸ್ತುವು ಪ್ರತಿಕ್ರಿಯೆಗೂ ಕರ್ತೃವೆಂದೂ, ಧ್ಯಾನಧ್ಯೇಯಗಳೆರಡೂ ಆತ್ಮನಿಷ್ಠವಾದವುಗಳೆಂದೂ ತಿಳಿದು ಸರ್ವದಾ ಶಿವೋಽಹಂ ಎಂಬ ಭಾವನೆ

ಪ್ರವಕ್ಷ್ಯತಿ ಪ್ರಯುಕ್ತಶ್ಚ ದೀಕ್ಷಯಾ ವಿಮಲೀಕೃತಃ ।
ಧ್ಯಾನಯುಕ್ತಸ್ಸದಾ ಗಚ್ಛೇತ್ ಧ್ಯಾಯಿನಂ ಪರಮಂ ಪದಂ ॥ ೧೪ ॥

ಚರೇದುತ್ಪನ್ನವಿಜ್ಞಾನೋ ಮುಕ್ತಿವ್ರತಮನಿಂದಿತಂ ।
ಭೂತವ್ರತಾನಿ ಸಿದ್ಧ್ಯರ್ಥಮೇಕಾಂತೇ ಸರ್ವತಃ ಕ್ಷಮೀ ॥ ೧೫ ॥

ಸಂತ್ಯಜ್ಯ ಸರ್ವಕಾಲಾತ್ಮಪ್ರಧಾನಹಿತವಾದಿನಂ ।
ಮತಾನಿ ವಿಪರೀತಾನಿ ಧ್ಯಾಯೇನ್ನಿತ್ಯಂ ಸದಾಶಿವಂ ॥ ೧೬ ॥

ನಿರ್ನಿಮಿತ್ತಂ ನಿರಾಕಾರಂ ವಾಗ್ವಿಶುದ್ಧಂ ಪರಾತ್ಪರಂ ।
ಪ್ರಮಾಣಂ ವಿಷಯಾತೀತಮದೃಷ್ಟಾಂತಾದಿಲಕ್ಷಣಂ ॥ ೧೭ ॥

ಜ್ಯೋತಿಷಾಂ ಚ ಪರಂ ಧಾಮ ಜ್ಞಾನಾನಾಂ ಪರಮಂ ಪದಂ ।
ತತ್ತ್ವಾನಾಂ ಪರಮಂ ತತ್ತ್ವಂ ಗತೀನಾಂ ಪರಮಾಂ ಗತಿಂ ॥ ೧೮ ॥

---

ಯಿಂದ ಕೂಡಿ ದೀಕ್ಷಾವಿಧಿಯಿಂದ ಶುದ್ಧನಾಗಿ ಧ್ಯಾನವಿಷಯನಾದ ಪರಮಾತ್ಮನ ಮುಕ್ತಿಸ್ಥಾನವನ್ನು ಸರ್ವದಾ ಅನುಸಂಧಾನಮಾಡುತ್ತಿರಬೇಕು.

೧೫-೧೬. ಹಾಗೆ ಚಿತ್ತಶುದ್ಧಿಯಿಂದ ಜ್ಞಾನವನ್ನು ಸಂಪಾದಿಸಿ, ಅನಂತರ ಭೂತವ್ರತಾದಿಗಳನ್ನೂ, ವಿಪರೀತವಾದ ಮತಗಳನ್ನೂ, ಕಾಲಾತ್ಮವಾದ ಅಭಿಪ್ರಾಯವೆಲ್ಲವನ್ನೂ ಬಿಟ್ಟು ಸರ್ವದಾ ಕ್ಷಮಾಶೀಲನಾಗಿ ನಿತ್ಯಾನಂದಸ್ವರೂಪನಾದ ಸದಾಶಿವನನ್ನೇ ಸರ್ವದಾ ಧ್ಯಾನಮಾಡುತ್ತಿರಬೇಕು.

೧೭-೧೮. ಸದಾಶಿವನು ಕಾರಣರಹಿತನು. ಆಕಾರರಹಿತನು. ಶುದ್ಧಸ್ವಭಾವದ ಪರಾತ್ಪರವಸ್ತುವು. ಇಂದ್ರಿಯವಿಷಯಗಳಿಗೆ ಅತೀತನೆನಿಸಿ, ದೃಷ್ಟಾಂತಾದಿಗಳಿಂದ ವಿವರಿಸಲು ಸಾಧ್ಯವಿಲ್ಲದವನು. ಜ್ಯೋತೀರೂಪಿಯು. ಜ್ಞಾನಸ್ವರೂಪನು. ತತ್ತ್ವಗಳಲ್ಲಿ ಪರತತ್ತ್ವವೆನಿಸಿ, ಗತಿಗಳಲ್ಲೆಲ್ಲಾ ಪರಮಗತಿಸ್ವರೂಪನೆಂದು ಹೇಳಿಸಿಕೊಳ್ಳುವವನು.

ತತ್ತ್ವೇನ ತಂತುತತ್ತ್ವಂ ತಂತುತಾ ಚೈವ ಸತ್ತತಂ ।
ತೇನೇದಂ ತಂತುತಾ ನಿತ್ಯಂ ಚಿಂತಯೇತ್ತತ್ತು ನಿಷ್ಕಲಂ ॥ ೧೯ ॥

ಕ್ಷುರಿಕಾಧ್ಯೇಯಯೋಗಜ್ಞೋ ಬಿಂದುನಾದತನುಸ್ಥಿತಂ ।
ಮುಂಚತಿ ಕ್ಷಿಪ್ರಮಾತ್ಮಾನಂ ಬುದ್ಧ್ವಾ ಜ್ಞಾನಮಯಂ ಪರಂ ॥ ೨೦ ॥

ಸತತಾಭ್ಯಾಸಯೋಗೇನ ಕಾಲೇನ ಬಹುಧಾ ನರಃ ।
ವಿಧಿನಾ ಭಾವಶುದ್ಧೇನ ದೇಹೀ ವಿಂದತಿ ಸತ್ಪದಂ ॥ ೨೧ ॥

ಮುಹೂರ್ತಾರ್ಧಾರ್ಧಮಂತ್ರೇಣ ಮಂತ್ರಬೀಜಕಲಾದಿಭಿಃ ।
ದಿವಾರ್ಧಂ ರವಿಭಾಗೇನ ದೇಹೀ ವಿಂದತಿ ತತ್ಕ್ಷಣಾತ್ ॥ ೨೨ ॥

ಪ್ರಾಕೃತಾನಿ ಚ ತತ್ತ್ವಾನಿ ಪ್ರಕೃತ್ಯಾ ಪ್ರಕೃತಾನಿ ವೈ ।
ತೀವ್ರತತ್ತ್ವಂ ಪರಂ ಸೂಕ್ಷ್ಮಂ ಮಂತ್ರಾತ್ಮಾ ಪಂಚವಿಂಶಕಂ ॥ ೨೩ ॥

---

೧೯. ಸತ್ತ್ವರೂಪದಿಂದ ಸರ್ವವ್ಯಾಪಕನಾಗಿರುವ ಪರಮಾತ್ಮನೇ ತಂತುರೂಪಿಯೆನಿಸಿರುವನು. ಸರ್ವವ್ಯಾಪಕತ್ವವು ಅವನಲ್ಲಿರುವುದರಿಂದಲೇ ತಂತುತ್ವವೆಂದರೆ ದಾರದಂತೆ ಸರ್ವವನ್ನೂ ಬಂಧಿಸುವ ಧರ್ಮವು ಪರಬ್ರಹ್ಮವಸ್ತುವಿನಲ್ಲಿ ತೋರಿಬರುವುದು.

ಛುರಿಕೋಪನಿಷತ್ತಿನಲ್ಲಿ, ನಾದಬಿಂದೂಪನಿಷತ್ತಿನಲ್ಲಿ, ಹೇಳಿರುವ ಕ್ರಮದಂತೆ ಜ್ಞಾನಮಯನಾದ ಪರಬ್ರಹ್ಮವಸ್ತುವನ್ನು ಯೋಗಮಾರ್ಗದಿಂದ ಅರಿಯಬೇಕು.

೨೦-೨೨. ಹೀಗೆ ಮನುಷ್ಯನು ಬಹುಕಾಲ ಅಭ್ಯಾಸಮಾಡಿ ಶುದ್ಧಭಾವದಿಂದ ಕೂಡಿದವನಾಗಿದ್ದು ಅನಂತರ ಪರಮಪದವನ್ನು ಹೊಂದುವನು. ಆದರೆ ಅಂತಹ ದಿವ್ಯ ಜ್ಞಾನವೊದಗಬೇಕಾದರೆ, ಮುಹೂರ್ತಮಾತ್ರವಾಗಲೀ ಅಥವಾ ಅರ್ಧ ಮುಹೂರ್ತವಾಗಲೀ ಹಗಲುಹೊತ್ತಿನಲ್ಲಿ ಭಕ್ತಿಪೂರ್ವಕವಾಗಿ ಪಠಿಸುವ ಈ ಬೀಜ ಮಂತ್ರಗಳಿಂದ ಮನುಷ್ಯನು ಜ್ಞಾನಿಯೆನಿಸುವನು.

೨೩-೨೪. ಪ್ರಕೃತ್ಯಾದಿ ಪಂಚವಿಂಶತಿ (೨೫) ಸಾಂಖ್ಯತತ್ತ್ವಗಳನ್ನು ನಂಬಿ, ಅದನ್ನೇ ಅನುಸಂಧಾನ ಮಾಡುತ್ತಾ ಮಂತ್ರಾತ್ಮನೆನಿಸಿ, ಯೋಗಶಾಸ್ತ್ರಾಭ್ಯಾಸದಲ್ಲಿ

ತೀವ್ರಸ್ಯಾತ್ಮನಿ ತತ್ತ್ವಜ್ಞೋ ಯೋಗವಾನ್ಯೋಗಪಂಡಿತಃ ।
ಅಚಿರಾಲ್ಲಭತೇ ಶಾಂತಿಂ ದೇಹೀ ತತ್ತ್ವೇನ ಯೋಜಿತಃ ॥ ೨೪ ॥

ಧಾರಣಾ ಸತತಂ ಯೋಗೋ ಜಪಧ್ಯಾನಾದಿದೀಪಿತಃ ।
ಯೋಜಯಂಸ್ತು ಪರಂ ಯೋಜ್ಯಂ ಲಿಲಿಹೇತ್ಪತ್ರಮವ್ಯಯಂ ॥ ೨೫ ॥

ಏವಂಗುಣವಿಶಿಷ್ಟಸ್ತು ಯೋಜಯೇತ್ತತ್ತ್ವಮಂಡಲಂ ।
ಅಗುಣಸ್ತ್ವೇವ ಯೋಜ್ಯಂ ಸ್ವಸ್ಮಂತ್ರೀ ವಿದ್ಯೇಶ್ವರಾದೃತೇ ॥ ೨೬ ॥

ಇತಿ ಶ್ರೀ ಸಾಂಬಪುರಾಣೇ ಏಕೋನ ಸಪ್ತತಿತಮೋಧ್ಯಾಯಃ.

---

ನಿಪುಣನಾಗಿ, ಯೋಗಾಭ್ಯಾಸದಿಂದ ದೇಹವನ್ನೂ ಶೋಷಿಸಿ, ಅನಂತರ ಶಾಂತನಾಗಿ ಮುಕ್ತನಾಗಬೇಕು.

೨೫-೨೬. ಜಪಧ್ಯಾನಾದಿಗಳಿಂದ ದೀಪಿತನಾಗಿ, ಧಾರಣಾತ್ಮಕವಾದ ತತ್ತ್ವದಿಂದ ಯೋಗಿಯೆನಿಸಬೇಕು. ಅನಂತರ ನಾಶರಹಿತವಾದ ಶಾಶ್ವತಪದವಿಗೆ ತ್ವರೆಪಡಬೇಕು. ಈ ಗುಣಗಣಭರಿತನಾದವನು ಕೊನೆಗೆ ನಿರ್ಗುಣಸ್ವರೂಪಿಯಾದ ಪರಮಾತ್ಮನ ಸಾಯುಜ್ಯವನ್ನು ಪಡೆದು, ಈಶ್ವರಭೇದವನ್ನೂ ತೊರೆದು ಸರ್ವೇಶ್ವರಸ್ವರೂಪನಾಗಿ ಆನಂದಮಯತೆಯನ್ನೂ ಸಂಪಾದಿಸುವನು. ಇದೇ ಶಾಸ್ತ್ರಮಾರ್ಗಾನುಷ್ಠಾನದಿಂದ ಹೊಂದಬಹುದಾದ ಶಾಶ್ವತ ಮುಕ್ತಿಮಾರ್ಗ.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಅರವತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಸಪ್ತತಿತಮೋಽಧ್ಯಾಯಃ

---

ಉಕ್ತೋ ಜಪೋ ವಿಧಿರ್ವಿಶಿಷ್ಟೋ ಬೀಜಂ ಚ ಸಹ ಕರ್ಮಭಿಃ ।
ಸಹ ಯೋಜ್ಯಾ ಯಥಾ ಬೀಜಮಿಚ್ಛತೇ ಪರಮೇಶ್ವರಃ ॥ ೧ ॥

ವಕ್ತುಮರ್ಹಸ್ಯಶೇಷೇಣ ಭಕ್ತಾಯ ಸತತಂ ಪ್ರಭೋ ।
ಏವಮುಕ್ತಃ ಪ್ರಭುರ್ದೇವಃ ಪ್ರಾಹ ತಸ್ಮೈ ಯಥಾವಿಧಿ ॥ ೨ ॥

ಅಕ್ಷರಾಯ ದಶ ತ್ರಿಂಶತ್ ಯೋನಿರುಕ್ತಾ ಮಯಾ ಪುರಾ ।
ಸರ್ವಂ ವೈ ಚೋಚ್ಯತೇ ತಸ್ಮಾದ್ಯಥಾ ಬೀಜಂ ಪ್ರಸೂಯತೇ ॥ ೩ ॥

---

## ಎಪ್ಪತ್ತನೆಯ ಅಧ್ಯಾಯ

೧-೨. "ದೇವದೇವನೇ, ಇಲ್ಲಿನವರೆಗೆ ಸಕಲ ವಿಧವಾದ ಬೀಜಮಂತ್ರಗಳನ್ನೂ ವಿವರವಾಗಿ ತಿಳಿಸಲಾಯಿತು. ಆದರೆ ಪರಶಿವನಿಗೆ ಅತ್ಯಂತ ಇಷ್ಟವಾದ ಬೀಜಾಕ್ಷರಗಳನ್ನು ತಿಳಿಯಲು ಬಯಸುತ್ತಿದ್ದೇನೆ. ದಯೆಯಿಂದ ಆ ವಿಚಾರವನ್ನು ಅನುಗ್ರಹಿಸಬೇಕು ಎಂದು ಕೇಳಿಕೊಳ್ಳಲು, ಆದರಂತೆ ಸೂರ್ಯಭಗವಾನನು ಮುಂದಿನ ವಿಷಯಗಳನ್ನು ವಿವರಿಸಲಾರಂಭಿಸಿದನು.

೩-೪. ಹಿಂದೆ ನಲವತ್ತು ಅಕ್ಷರ ಯೋನಿಗಳನ್ನು ಹೇಳಿಯಾಯಿತು. ಅವೆಲ್ಲವೂ ಈ ಈಶ್ವರಬೀಜಮಂತ್ರಗಳಿಗೆ ಮೂಲಸ್ಥಾನಗಳಾಗುವುವು. ಅದರಲ್ಲಿ ಅಕ್ಷರಸಂಖ್ಯೆಯಲ್ಲಿ ಮೂರು, ನಾಲ್ಕು, ಎರಡು, ಮೂರು, ಐದು, ನಾಲ್ಕು ಮೂರು,

ತ್ರೀಣಿ ಚತ್ವಾರಿ ಚ ದ್ವೇ ಚ ತ್ರೀಣಿ ಪಂಚ ಚತುಷ್ಟಯಂ ।
ತ್ರೀಣಿ ಚತ್ವಾರಿ ದ್ವೇ ತ್ರೀಣಿ ಪಂಚಚೈವ ಚತುಶ್ಚತುಃ ॥ ೪ ॥

ತದ್ವಿಕೇನ ಸಮಾಯುಕ್ತಾ ಯೋನಿರೇಷಾ ಹಿ ವಿಶ್ವಭುಕ್ ।
ಸಂಪೃಕ್ತ್ಯೈಷಾ ಪ್ರಸೂಯೇತ ಅಕ್ಷರೇಣ ದಶಾತ್ಮಕಂ ॥ ೫ ॥

ವ್ಯಂಜನಾನಿ ಸ್ವರಶ್ಚೈವ ಪರಮೇಷ್ಠ್ಯಾದಯಸ್ತಥಾ ।
ಭೂತಾಧಿಪತಯಶ್ಚೈವ ತೇಭ್ಯೋ ಜ್ಯೋತಿಃ ಪರಂ ತತಃ ॥ ೬ ॥

ಇತಿ ಶ್ರೀ ಸಾಂಬಪುರಾಣೇ ಸಪ್ತತಿತಮೋಽಧ್ಯಾಯಃ

---

ನಾಲ್ಕು, ಎರಡು, ಮೂರು, ಐದು, ನಾಲ್ಕು, ನಾಲ್ಕು ಎಂಬ ಸಂಖ್ಯಾನುಸಾರವಾದ ಅಕ್ಷರಗಳು ಈಶ್ವರಯೋನಿಗಳೆನಿಸುವುವು.

೫-೬. ಆ ಯೋನಿಸಂಖ್ಯೆಗಳಲ್ಲಿ ಮತ್ತೆರಡು ಅಧಿಕವಾದರೆ ಅದನ್ನು ವಿಶ್ವಭುಗ್ಯೋನಿಯೆನ್ನುವರು. ಅಂತೂ ಒಟ್ಟಿನಲ್ಲಿ ಅಕ್ಷರಗಳಿಂದ ದಶವಿಧವಾದ ಯೋನಿಗಳು ಉತ್ಪತ್ತಿಯಾಗುವುವು. ಸ್ವರ, ವ್ಯಂಜನ ಏತದುಭಯಾತ್ಮಕಗಳಾದ ಅಕ್ಷರಗಳೇ ಬ್ರಹ್ಮಾದಿದೇವತೆಗಳು, ಮತ್ತು ಭೂತಾಧಿಪತಿಗಳು, ಇವರೆಲ್ಲರಿಗೂ ಮೂಲಭೂತವಾದದ್ದೇ ಒಂದು ತೇಜಸ್ಸು. ಅದೇ ಬೀಜಭೂತವಾದದ್ದು. ಅದೇ ಪರಶಿವ ಸ್ವರೂಪವಾದ ಮೂಲವಸ್ತು.

ಇಲ್ಲಿಗೆ ಸಾಂಬಪುರಾಣದಲ್ಲಿ ಎಪ್ಪತ್ತನೆಯ ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥಶ್ರೀ ಸಾಂಬಪುರಾಣೇ ಏಕಸಪ್ತತಿತಮೋಧ್ಯಾಯಃ

---

ಕೃಷ್ಣಚಕ್ರಸಮಾಕಾಲಮಾಗ್ನೀಸ್ವಕಸಮಾಯುತಂ ।
ಬೀಜಾನಾಂ ಪರಮಂ ಬೀಜಂ ಶಂಕರಂ ಪರಮೇಶ್ವರಂ ॥ ೧ ॥

ಭಿನ್ನಂ ಚ ಮಾರ್ಗಮೂಲೇಷು ವಿನ್ಯಸ್ತಂ ಚ ಸಬಿಂದುಕಂ ।
ಶರೀರಂ ದೇವದೇವಸ್ಯ ಅಕ್ಷರಂ ಬೀಜನಿಃಸ್ವರಂ ॥ ೨ ॥

ಪ್ಲುತಂ ಪರಂ ಸಯಾ ಭಕ್ತ್ಯಾ ಪ್ರಣವಾದ್ಯಚ್ಚ ಸಂಹತಂ ।
ಭಿನ್ನಂ ಚತುರ್ಭಿರ್ವರ್ಣಾಶ್ಚ ಸದೃಶಶ್ಚಾತ್ಮನಸ್ತಥಾ ॥ ೩ ॥

---

## ಎಪ್ಪತ್ತೊಂದನೆಯ ಅಧ್ಯಾಯ

೧-೨. ಕೃಷ್ಣಚಕ್ರಸಮವಾದ ಕೋಣಯುತವಾದ ಚಕ್ರವನ್ನು ನಿರ್ಮಿಸಿ, ಅದರ ಮಧ್ಯಭಾಗದಲ್ಲಿ ಸಕಲ ಬೀಜಮಂತ್ರಗಳಿಗೂ ಮೂಲಭೂತನಾದ ಲೋಕೇಶನನ್ನು ವಿನ್ಯಾಸಮಾಡಬೇಕು. ಹಾಗೆಯೇ ನಾಲ್ಕುಮಾರ್ಗಗಳನ್ನು ಬರೆದು ಪ್ರತಿ ಮಾರ್ಗದಲ್ಲಿಯೂ ಅಕ್ಷರಗಳನ್ನು ಬಿಂದುಸಹಿತವಾಗಿ ದೇವದೇವನ ಶರೀರಾತ್ಮಕ ದೃಷ್ಟಿಯಿಂದ ರಚನೆಮಾಡಬೇಕು. (ಕೃಷ್ಣ, ಚಕ್ರ, ಸಮ ಮುಂತಾದ ಬೇರೆ ಬೇರೆ ಹೆಸರಿನ ಚಕ್ರಗಳುಂಟು.)

೩-೪. ಅಕ್ಷರಗಳಲ್ಲಿ ಪ್ರಣವವನ್ನೇ ಆದಿಯನ್ನಾಗಿ ಮಾಡಿಕೊಂಡು ನಾಲ್ಕು ನಾಲ್ಕು ಅಕ್ಷರಗಳಿಗೆ ಒಂದೊಂದು ಸಾಲಿನಂತೆ ವಿಂಗಡಿಸಿಕೊಳ್ಳಬೇಕು. ಅಕಾರಾದಿ

ಆಕಾರಾದ್ಯಂತ್ರಿಕಂ ಪೂರ್ವೇ ಸುಕಾರಾತ್ಪೂರ್ವದಕ್ಷಿಣೇ ।
ಸಮ್ಯಗ್ವಿಜ್ಞಾಯ ಮೇಧಾವೀ ಸ್ಥಾಪಯೇಚ್ಚತುರಕ್ಷರಂ ॥ ४ ॥

ಪಶ್ಚಿಮೇ ತು ತಕಾರಾದ್ಯಂ ಯದಯೋನ್ಯಾಂ ತು ತತ್ತ್ವವಿತ್ ।
ಹ್ಯಕ್ಷರಂ ಪದವಿನ್ಮಂತ್ರೀ ವಿನ್ಯಸೇದ್ಭೂತಯೇ ಶುಭಂ ॥ ೫ ॥

ಚಕಾರಾದ್ಯಂತರೇ ಮಾರ್ಗೇ ಪದಮಕ್ಷರಸಂಜ್ಞಿತಂ ।
ಆತ್ಮಪ್ರಸೂತಿಂ ಪ್ರಾಣಾಂಶ್ಚ ವಿನ್ಯಸೇತ್ತತ್ತ್ವವಿದ್ಭುವಿ ॥ ೬ ॥

ಪಕಾರಾದಿ ಚಕಾರಾಂತಾ ಪಂಚಿಕಾ ಶಕ್ತಿಸಂಜ್ಞಿತಾ ।
ಶಿವಧಾತ್ರೀ ಸ್ಥಿತಾ ಮಧ್ಯಂ ವ್ಯಾಪ್ಯ ವಿಶ್ವಜಗತ್ಪತಿಂ ॥ ೭ ॥

ವಿಶಿಷ್ಟಾನಿ ತತೋನ್ಯಸ್ಯ ಬಿಂದುನಾ ಭೂಪತಿಃ ಕ್ರಮಾತ್ ।
ದ್ವೇ ದ್ವೇ ಯಥಾಪತತ್ವಂ ವೈ ಚೈಶಾನ್ಯಾಂ ದಿಶಿ ದಕ್ಷಿಣೇ ॥ ೮ ॥

---

ಯಾದ ಚಕ್ರದಲ್ಲಿ ಪೂರ್ವಭಾಗದಲ್ಲಿ ನಾಲ್ಕುವರ್ಣಗಳೂ ಆಗ್ನೇಯಕ್ಕೆ ಸುಕಾರಾದಿಯಾಗಿಯೂ ನಾಲ್ಕುನಾಲ್ಕು ಅಕ್ಷರಗಳನ್ನು ಬುದ್ಧಿವಂತಿಕೆಯಿಂದ ವಿನ್ಯಾಸಮಾಡಬೇಕು.

೫-೬. ಪಶ್ಚಿಮಭಾಗದಲ್ಲಿ ತಕಾರಾದಿಯಾಗಿಯೂ, ಅದೇ ರೀತಿ ಪ್ರತಿದಿಕ್ಕುಗಳಲ್ಲಿಯೂ ವಿಧಿಪೂರ್ವಕವಾಗಿ ಮಾಂತ್ರಿಕನು ಅಕ್ಷರವಿನ್ಯಾಸ ಮಾಡಬೇಕು. ಚಕಾರಾದಿಯಾದ ಮಾರ್ಗದಲ್ಲಿ ಅಕ್ಷರಸಂಜ್ಞಕವಾದ ಆತ್ಮಪ್ರಸೂತಿಯನ್ನೂ, ಪ್ರಾಣವನ್ನೂ ಭೂಮಿಯಲ್ಲಿ ವಿನ್ಯಾಸಮಾಡಬೇಕು.

೭-೮. ಪಕಾರಾದಿಯಾಗಿ ಚಕಾರಾಂತವಾದ ಅಕ್ಷರಗಳಿಗೆ ಪಂಚಿಕಾಶಕ್ತಿಯೆಂದು ಹೆಸರು. ಅಲ್ಲಿಯೇ ವಿಶ್ವಕ್ಕೂ ಒಡೆಯನೆನಿಸಿರುವ ಶಿವಧಾತ್ರಿಯು ನೆಲಸಿರುವುದು. ಅಲ್ಲಿಂದ ಮುಂದಕ್ಕೆ ಈಶಾನ್ಯ ಮತ್ತು ದಕ್ಷಿಣದಿಕ್ಕುಗಳಿಗೆ ವ್ಯಾಪ್ತಿಯಿರುವಂತೆ ಎರಡೆರಡು ಅಕ್ಷರಗಳನ್ನು ಜೋಡಿಸಿ, ಬರೆಯಬಹುದು. ಅಕಾರ, ಇಕಾರ, ರೇಫಾದಿಯಾದವುಗಳು, ಏಕಾರಾದಿಯಾದವುಗಳು ಇವುಗಳೆಲ್ಲಾ ಶಾಂತಾಕ್ಷರಯೋಗಿಗಳೆನಿಸಿರುವುವು. ಇವೇ ಅಕ್ಷರಕವಚಗಳು. ಇವೆಲ್ಲವೂ ಮಂತ್ರಶಾಸ್ತ್ರದಲ್ಲಿ ವಿಸ್ತೃತವಾಗಿ ವರ್ಣಿತವಾಗಿವೆ.

**ಅಕಾರೇಕಾರಭೂತಾದ್ಯಾ ರೇಫಾದ್ಯಾಶ್ಚ ತತಃ ಪರಂ ।**
**ಐಕಾರಾದ್ಯೇ ತಥಾ ದ್ವೇ ಚ ಶಾಂತಪರ್ೋತ್ತರವರ್ಣಿಕಾಃ ॥ ೯ ॥**

**ಇತಿ ಶ್ರೀ ಸಾಂಬಪುರಾಣೇ ಏಕಸಪ್ತತಿತಮೋಧ್ಯಾಯಃ.**

---

ಈ ರೀತಿ ಅಕ್ಷರವಿನ್ಯಾಸಮಾಡಿದ ಒಂದು ಚಕ್ರವೇ ವಿಶ್ವಭುಕ್ಚಕ್ರ. ಇದರಲ್ಲಿ ಸರ್ವಾಂತರ್ಯಾಮಿಯೂ, ಸರ್ವಲೋಕೈಕ ಸಂರಕ್ಷಕನೂ ಆದ ಪರಮೇಶ್ವರನನ್ನು ಧ್ಯಾನಿಸಿ, ಮಂತ್ರಪುರಶ್ಚರಣಾದಿಗಳಿಂದ ಶಿವಮಂತ್ರವನ್ನು ಸಿದ್ಧಿಪಡಿಸಿಕೊಂಡು, ತನ್ಮೂಲಕ ಶಿವಸಾಯುಜ್ಯವನ್ನು ಪಡೆಯಬಹುದು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಎಪ್ಪತ್ತೊಂದನೆಯ ಅಧ್ಯಾಯವು
ಸಮಾಪ್ತವಾದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯನಮಃ ॥

# ಅಥ ಸಾಂಬಪುರಾಣೇ ದ್ವಿಸಪ್ತತಿತಮೋಧ್ಯಾಯಃ.

---

ವರ್ಣನಾಶವಿಧಿಸ್ತು ಸ್ಯಾದ್ವ್ಯಂಜನಾನಿ ಯಥಾಕ್ರಮಂ ।
ಸಿದ್ಧಯೇ ಶಬ್ದರೂಪಾಣಾಂ ಪ್ರಥಮಃ ಪೂರ್ವದಕ್ಷಿಣೇ ॥ ೧ ॥

ದ್ವಿತೀಯೋ ನೈಋತೇ ಸ್ಥಾಪ್ಯ ತೃತೀಯೋ ವಾಯುದೈವತೇ ।
ಚತುರ್ಥಃ ಸರ್ವದೈವತ್ಯೇ ವಿನ್ಯಾಸಂ ಶೃಣ್ವತಃ ಪರಂ ॥ ೨ ॥

ಅಂತಸ್ಥಾಃ ಪ್ರಥಮಂ ಚ ಸ್ಯಾದ್ವಿನ್ಯಸ್ಯ ದಕ್ಷಿಣೇ ತಥಾ ।
ಶೇಷಾಸ್ತಥಾ ಶಕಾರಾದ್ಯಾ ವಿನ್ಯಸ್ಯ ಪಶ್ಚಿಮಾಂ ದಿಶಂ ॥ ೩ ॥

ಉತ್ತರಸ್ಯಾಂ ಯಥಾನ್ಯಸ್ಯಾಶ್ಚತ್ವಾರೋ ಮುಖನಾಸಿಕಾಃ ।
ಪರತಶ್ಚ ಸುರಾಸ್ತೇಭ್ಯೋ ಬಹಿಃ ಸ್ಥಾನಂ ಯಥಾಕ್ರಮಂ ॥ ೪ ॥

---

## ಎಪ್ಪತ್ತೆರಡನೆಯ ಅಧ್ಯಾಯ

೧-೩. ವರ್ಣನಾಶವಿಧಿಯೆಂದರೆ ಕ್ರಮವಾಗಿ ವ್ಯಂಜನಗಳು ಸ್ವರಗಳೊಡಗೂಡಿ ಪದವಾಗುವಿಕೆ. ಅದರಲ್ಲಿ ಅಂತಸ್ಥವರ್ಣಗಳಾದ ಯ, ರ, ಲ, ವ ಗಳನ್ನು ಕ್ರಮವಾಗಿ ಆಗ್ನೇಯ, ನೈಋತ್ಯ, ವಾಯವ್ಯ ಈಶಾನ್ಯದಲ್ಲಿ ಬರೆಯಬೇಕು. ಉಳಿದ ಶಕಾರಾದಿಯಾದ ಅಕ್ಷರಗಳನ್ನೆಲ್ಲಾ ಪಶ್ಚಿಮದಿಕ್ಕಿನಲ್ಲಿ ಬರೆಯಬೇಕು.

೪-೬. ಉತ್ತರಭಾಗದಲ್ಲಿ ಯ, ಸ, ಮತ್ತು ನಾಲ್ಕು ಅನುನಾಸಿಕವರ್ಣಗಳನ್ನೂ ಬರೆಯಬೇಕು. ಅಲ್ಲಿಂದ ಮುಂದಕ್ಕೆ ದೇವತಾಯೋನಿಗಳನ್ನೂ ಪೂರ್ವ

ಪೂರ್ವೇಣ ತು ಸಮಾನ್ಯಸ್ಯಾದ್ಧ್ರಸ್ವದೀರ್ಘಪ್ಲುತಾಸ್ತ್ರಯಃ ।
ಉತ್ತರೇಣ ತ್ರಯಸ್ತ್ವನ್ಯೇ ತದೇವಂ ದ್ವಾದಶೈವ ತು ॥ ೫ ॥

ಐಕಾರೋ ನೈಋತೇ ಸ್ಥಾಪ್ಯ ಉತ್ತರೇ ವಾಯುದೈವತೇ ।
ಚಕ್ರಮೇತದ್ದ್ವಿಶಕ್ತಿಸ್ಥಂ ಬೀಜಂ ನ್ಯೈ ಶಬ್ದತಾಂ ವರಂ ॥ ೬ ॥

ಇತಿ ಶ್ರೀ ಸಾಂಬಪುರಾಣೇ ದ್ವಿಸಪ್ತತಿತಮೋಽಧ್ಯಾಯಃ.

---

ಭಾಗದಲ್ಲಿ ಸ, ಮ, ನ ಎಂಬ ಅಕ್ಷರಗಳನ್ನೂ ಹ್ರಸ್ವ, ದೀರ್ಘ, ಪ್ಲುತಭೇದಗಳಿಂದ ಬರೆಯಬೇಕು. ಉತ್ತರದಲ್ಲಿಯೂ ಅದೇ ಮೂರು ಅಕ್ಷರಗಳನ್ನೂ ಹ್ರಸ್ವ, ದೀರ್ಘ, ಪ್ಲುತಭೇದದಿಂದ ವಿನ್ಯಾಸಮಾಡಬೇಕು. ನೈಋತ್ಯದಲ್ಲಿ ಐಕಾರವನ್ನೂ, ಉತ್ತರದಲ್ಲಿ ವಾಯುದೇವತೆಯನ್ನೂ ಬರೆಯಬೇಕು. ಚಕ್ರವು ದ್ವಿದೈವತಾತ್ಮಕವಾದದ್ದು ಇದನ್ನು ಶಕ್ತಿದ್ವಯಾತ್ಮಕ ಚಕ್ರವೆಂದು ಹೇಳುವರು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಎಪ್ಪತ್ತೆರಡನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ತ್ರಿಸಪ್ತತಿತಮೋಽಧ್ಯಾಯಃ

ಆದ್ಯಂತಂ ಪ್ರಣವಂ ಜ್ಞೇಯಂ ಯೋನಿಬೀಜಂ ಪುನಃ ಪುನಃ ।
ನ್ಯಸೇತ್ಪಂಚಾಕ್ಷರಂ ಭೂಮೌ ಫಲಾರ್ಥೀ ಪರಮೇಷ್ಠಿನಂ ॥ ೧ ॥

ನ್ಯಸೇದಷ್ಟಾಕ್ಷರಂ ತಸ್ಯ ಬೀಜಮಾದೌ ಸಬಿಂದುಕಂ ।
ಶೇಷಾಸ್ಸ್ಯುಃ ಪ್ರಣವಾದ್ಯಂತಾಃ ಪರಸ್ಯಾಂ ದಿಶಿ ಕಾರಣಂ ॥ ೨ ॥

ದಕ್ಷಿಣಸ್ಯಾಂ ಪರೋ ದೇವಃ ಪರಸ್ಯಾಂ ಸ್ಯಾತ್ಸಬಿಂದುಕಃ ।
ಇವಾಸ್ಯಾದೌ ಸ ಬಿಂದುಸ್ಸ್ಯಾತ್ತದನ್ಯಾನಿ ತು ಪೂರ್ವವತ್ ॥ ೩ ॥

---

## ಎಪ್ಪತ್ತುಮೂರನೆಯ ಅಧ್ಯಾಯ

೧-೨. ಸೃಷ್ಟಿ ಸಂಹಾರ ಸಂಜ್ಞಕವಾದ ಒಂದು ಚಕ್ರವಿನ್ಯಾಸವು ಹೇಗೆಂದರೆ, ಚಕ್ರದ ಆದ್ಯಂತದಲ್ಲಿ ಪ್ರಣವಾಕ್ಷರಗಳನ್ನೂ, ಮಧ್ಯೆಯೋನಿ ಬೀಜವನ್ನೂ, ಪಂಚಾಕ್ಷರೀ ಮತ್ತು ಅಷ್ಟಾಕ್ಷರೀ ಮಂತ್ರಗಳನ್ನೂ ಪ್ರಣವ ಬಿಂದುಸಹಿತವಾಗಿ ವಿನ್ಯಾಸ ಮಾಡಬೇಕು.

೩-೪. ದಕ್ಷಿಣಭಾಗದಲ್ಲಿ ಪರಾಪರಾತ್ಮಕವಾದ ಪರಬ್ರಹ್ಮನನ್ನೂ, ನೈಋತ್ಯ ದಿಕ್ಕಿನಲ್ಲಿ ಬಿಂದುವನ್ನೂ, ಮುಂದಕ್ಕೆ ಸುತ್ತಲೂ ಬಿಂದುಸಹಿತವಾದ ಅಕ್ಷರಗಳನ್ನೂ

ನ ಚಾಕ್ಷರಃ ಪರಸ್ಯಾಂ ಸ್ಯಾತ್ಸಬಿಂದೂಕಾರಪೂರ್ವಕಃ ।
ಅಷ್ಟೌ ಕ್ರಿಯಾ ಯುಗನ್ಯಾನಿ ಭೂತಾತ್ಮಾ ನಾಮತಸ್ತು ಸಃ ॥ ೪ ॥

ವ್ಯೋಮಾದ್ಯಂತಂ ಪರೋ ದೇವೋ ವಿರಾಮೋ ಪ್ರಣವಸ್ತತಃ ।
ಅಕ್ಷರಾಣಿ ಚ ವಿಜ್ಞೇಯಾ ಬೀಜಯೋನಿಸ್ತು ಯಾದೃಶೀ ॥ ೫ ॥

ಸುಪ್ರಣವಾದಿ ಚ ಭವೇದ್ವ್ಯಾಪಿನೇ ಮಧ್ಯತೋ ಭವೇತ್ ।
ಪ್ರಸೂತ್ಯಾಖ್ಯೋ ಭವೇದ್ದೇವೋ ವರ್ಣಾ ದಶ ಚ ಸಪ್ತ ಚ ॥ ೬ ॥

ಓಂಕಾರಾವಭಿತೋ ಯಸ್ಯ ವ್ಯೋಮಮಧ್ಯೇ ತತಃ ಪರಃ ।
ವಿನ್ಯಸ್ಯ ಸೃಷ್ಟಿಸಂಜ್ಞೋಥ ದೇವಃ ಪಂಚದಶಾಕ್ಷರಃ ॥ ೭ ॥

---

ಊಕಾರಪೂರ್ವಕವಾಗಿ ಅಷ್ಟಕ್ರಿಯಾತ್ಮಕಗಳಾದ ಭೂತನಾಮಗಳ ಆದ್ಯಕ್ಷರಗಳನ್ನೂ ನಿರೂಪಿಸಬೇಕು.

೫-೬. ಆದ್ಯಂತದಲ್ಲಿ ವ್ಯೋಕಾರವನ್ನೂ, ವಿರಾಮದಲ್ಲಿ ಮತ್ತೆ ಪ್ರಣವವನ್ನೂ, ಮುಂದೆ ಹೇಳುವ ಬೀಜಯೋನಿಗಳಲ್ಲಿ ಬೇಕಾದ ಬೀಜಯೋನಿ ಮಂತ್ರವನ್ನೂ ಪ್ರಣವಾದಿಯಾಗಿ ಬರೆಯಬೇಕು. ಹೀಗೆ ಬರುವ ಹದಿನೇಳು ಅಕ್ಷರಗಳಿಗೆ ಪ್ರಸೂತಿದೇವತೆಯೇ ಅಭಿಮಾನದೇವತೆಯಾಗಿರುವುದು.

೭-೮. ಸುತ್ತಲೂ ಓಂಕಾರವನ್ನೂ, ಮಧ್ಯೆ ವ್ಯೋಮವನ್ನೂ ಅದರಲ್ಲಿ ಸೃಷ್ಟಿಸಂಜ್ಞಕವಾದ ದೇವತೆಯನ್ನೂ, ಹದಿನೈದು ಅಕ್ಷರಗಳ ಆದಿಭೂತವಾದ ಹೆಸರುಗಳುಳ್ಳ ದೇವತಾನಾಮಗಳನ್ನೂ, ಸದಸದಾತ್ಮಕನಾದ ಪರಮೇಶ್ವರನನ್ನೂ ವಿನ್ಯಾಸಮಾಡಬೇಕು. ಅನಂತರ ಈಶಾನ್ಯದಿಕ್ಕಿನಲ್ಲಿ ದಶಾಕ್ಷರಗಳಿಂದ ಕೂಡಿದ ಬ್ರಹ್ಮಯೋನಿಮಂತ್ರವನ್ನೂ ವಿನ್ಯಾಸಮಾಡಬೇಕು. ಹೀಗೆ ಸೃಷ್ಟಿಗೂ ಸಂಹಾರಕ್ಕೂ

ಏಷಾಮಾದಿಪದೈರ್ನ್ಯಸ್ಯ ದೇವಃ ಸದಸದಾತ್ಮಕೇ ।
ಐಶಾನ್ಯಾಂ ದಶಕೋ ಧಾತಾ ಸೃಷ್ಟಿಸಂಹಾರಸಂಜ್ಞಿತಃ ॥ ೮ ॥

ಇತಿ ಶ್ರೀ ಸಾಂಬಪುರಾಣೇ ಬೀಜಪ್ರಸವೇ ತ್ರಿಸಪ್ತತಿತಮೋಽಧ್ಯಾಯಃ.

---

ಮೂಲಕಾರಣರಾದ ಬ್ರಹ್ಮ ಮತ್ತು ಕಾಲರುದ್ರರ ಅಭಿಮಾನಭೂತವಾದ ಬೀಜ ಯೋನಿಗಳನ್ನೂ ಬೀಜಾಕ್ಷರಗಳನ್ನೂ ಬರೆಯುವ ಮಂಡಲಕ್ಕೆ ಸೃಷ್ಟಿಸಂಹಾರವೆಂದೇ ಹೆಸರಿರುವುದು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಎಪ್ಪತ್ತುಮೂರನೆಯ
ಅಧ್ಯಾಯವು ಮುಗಿದುದು.

॥ ಶ್ರೀ ॥

॥ ಶ್ರೀ ಸೂರ್ಯಾಯನಮಃ ॥

# ಅಥ ಶ್ರೀ ಸಾಂಬಪುರಾಣೇ ಚತುಸ್ಸಪ್ತತಿತಮೋಧ್ಯಾಯಃ



ಉತ್ತರಾ ಯೋನಯಸ್ತೇಷಾಂ ಮಂತ್ರಾಸ್ತಾಭ್ಯೋ ವಿನಿಃಸೃತಾಃ ।
ಅಷ್ಟಾಕ್ಷರಾ ತು ಭೂತ್ಯಂತೇ ವ್ಯೋಮಾದಿ ಪ್ರಥಮಾ ಹಿ ಸಾ ॥ ೧ ॥
(ಶಿವಯೋನಿಃ)

ಓಂಕಾರಾದಿಹಕಾರಾಂತಾ ಅಕ್ಷರಾಃ ಪರಮಾಃ ಪರಾಃ ।
ಮುಕ್ತಯೇ ವಿಹಿತಾ ಪುಣ್ಯಾ ಯೋನಿಃ ಶಬ್ದವತಾಂ ಮತಾ ॥ ೨ ॥
(ಪರಯೋನಿಃ)

ದಿಶಿ ಕಾರಣಯೋನಿಃ ಸ್ಯಾತ್ ದ್ವಂದ್ವಾಹೋಹ್ಯನಂತರಂ ।
ಸ ಬಿಂದ್ವಾಕಾರಪೂರ್ವಾ ಸಾ ಭೂತ್ಯಂತಾಶ್ಚತುರಕ್ಷರಾಃ ॥ ೩ ॥
(ಕಾರಣಯೋನಿಃ)

---

## ಎಪ್ಪತ್ತನಾಲ್ಕನೆಯ ಅಧ್ಯಾಯ

೧. ಇನ್ನು ಮುಂದೆ ಯೋನಿವಿಶೇಷಗಳನ್ನೂ, ಅವುಗಳ ಮಂತ್ರಗಳನ್ನೂ ವಿವರಿಸುವೆನು. ಅಷ್ಟಾಕ್ಷರಗಳು ಎಂದರೆ ಭೂ, ಎಂಬಕ್ಷರವನ್ನು ಅಂತ್ಯದಲ್ಲಿಯೂ, ವ್ಯೋಕಾರವನ್ನು ಆದಿಯಲ್ಲಿಯೂ ಉಳ್ಳದುದು. ಇದಕ್ಕೆ ಶಿವಯೋನಿಯೆಂದು ಹೆಸರು.

೨. ಓಂಕಾರಾದಿಯಾಗಿ ಹಕಾರಾಂತವಾಗಿರುವ ಅಕ್ಷರಗಳನ್ನೇ ಶಬ್ದಯೋನಿ ಅಥವಾ ಪರಯೋನಿಯೆನ್ನುವರು. ಇದು ಪುಣ್ಯಪ್ರದವೂ ಮುಕ್ತಿಕಾರಣವೂ ಆದದ್ದೆಂದು ಹೇಳುವರು.

೩. ಅಷ್ಟದಿಕ್ಕುಗಳಲ್ಲಿ ಜೋಡಿಯಾಗಿ, ಬಿಂದು ಆಕಾರಪೂರ್ವಕವಾದ ನಾಲ್ಕು ನಾಲ್ಕು ಅಕ್ಷರಗಳ ವಿನ್ಯಾಸವೇ ಕಾರಣಯೋನಿಯೆನಿಸುವುದು.

ಕ್ರಿಯಾಶಕ್ತಿಸ್ತಥಾ ಪಂಚವರ್ಣೇಯಮಾತ್ಮನಃ ।
ಇಕಾರಾದಿಸ್ತಕಾರಾಂತಾ ಭೂತಯೋ ತ್ರಿಗುಣಸ್ಯ ತು ॥ ೪ ॥

(ಕ್ರಿಯಾಯೋನಿಃ)

ವಾರುಣಾಭ್ಯಾಂ ಭೂತಯೋನಿಃ ಸ್ಯಾದುಕಾರಾದಿಷಡಕ್ಷರಾಂ ।
ಭಕಾರಾಂತಾ ಚ ಸಾ ಜ್ಞೇಯಾ ಭುವನಸ್ಯ ವನಸ್ಯ ತು ॥ ೫ ॥

(ಭೂತಯೋನಿಃ)

ಸಪ್ತಾಕ್ಷರಪರಾ ಚಾಸ್ಯಾಃ ಭೂತಯೋನೇರನಂತರಂ ।
ವ್ಯೋಮಾದಿವಾಯುದೇವಾಂತಾ ವಾಯವ್ಯಾ ಬೀಜಯೋನಿಕಾ ॥ ೬ ॥

(ಬೀಜಯೋನಿಃ)

ವಕಾರಾದಿಮಕಾರಾಂತಾ ಮಧ್ಯೇ ವ್ಯೋಮ ಸಮೀರಣಾತ್ ।
ಸೃಷ್ಟಿಯೋನಿಪರಾ ದ್ವೇ ಚ ದಶಚೈಕಾಕ್ಷರಾಣಿ ತು ॥ ೭ ॥

(ಸೃಷ್ಟಿಯೋನಿಃ)

---

೪. ಇಕಾರಾದಿಯಾಗಿ ತಕಾರಾಂತಗಳಿಂದ ಐದು ಅಕ್ಷರಗಳೇ ತ್ರಿಗುಣಾತ್ಮಕವಾದ ಭೂತಕ್ರಿಯಾಶಕ್ತಿಯು. ಇದನ್ನೇ ಕ್ರಿಯಾಯೋನಿಯೆನ್ನುವರು.

೫. ಉಕಾರಾದಿಯಾಗಿ ಭಕಾರಾಂತವಾದ ಷಡಕ್ಷರಗಳಿಂದಲೂ, ವರುಣ ದೇವತಾ ಮಂತ್ರಗಳಿಂದಲೂ ಕೂಡಿದ ಮಂತ್ರವೇ ಭೂತಯೋನಿ.

೬. ಭೂತಯೋನಿಗೆ ಸಂಬಂಧಿಸಿದ ಅಕ್ಷರಗಳಿಂದ ಮುಂದಕ್ಕೆ ಏಳು ಅಕ್ಷರಗಳು ವ್ಯೋಮಾದಿಯಾಗಿ ವಾಯುದೇವಾಂತವಾದ ಅಕ್ಷರಗಳಿಗೆ ಬೀಜಯೋನಿಎಂದು ಹೆಸರು.

೭. ವಕಾರಾದಿಯಾಗಿ ಮಕಾರಾಂತವಾಗಿರುವ ೧೩ ಅಕ್ಷರಗಳ ಸಮುದಾಯವೂ ಸೃಷ್ಟಿಯೋನಿಯೆನಿಸುವುದು. ಇದು ವ್ಯೋಮಸಮೀರಣಾತ್ಮಕವಾದದ್ದು.

ಸಂಹಾರೇ ದ್ವಾದಶಾಸ್ಯಾಂತೇ ಪ್ರಣವಾದ್ಯಂತದೀಪಿತಃ ।
ಸರ್ವಸ್ಯ ವಾಙ್ಮಯಸ್ಯೈಷ ಸಂಹರ್ತಾ ಕೇವಲಃ ಪ್ರಭುಃ ॥ ೮ ॥

(ಸಂಹಾರಯೋನಿಃ)

ಕ್ಷಣಪೂರ್ಣಾವಥೋಂಕಾರೌ ದ್ವಾರಪಾಲೌ ತು ಬಾಹ್ಯತಃ ।
ಕುಂಭಾಕೃತಿರುದಗ್ದ್ವಾರಂ ಘೃತಂ ಭೂತ್ಯೈಕ್ಷ ಸರ್ವತಃ ॥ ೯ ॥

ಯೋನಯಃ ಪಾರ್ಥಿವಾನ್ಯಸ್ಯಾಸ್ತಂತ್ರಸ್ಯ ತ್ರಯಮಾದಿತಃ ।
ಪೃಥ್ವೀ ಯಃ ಪೂರಯೇತ್ಸಪ್ತವಿಭಕ್ತೇಃ ಪ್ರಣವಾಷ್ಟಕಃ ॥ ೧೦ ॥

(ಪಾರ್ಥಿವಯೋನಿಃ)

ಅಕ್ಷರಾಣಾಂ ಚ ಯೋನಿಃ ಸ್ಯಾದಾದಿವರ್ಣಾ ಯಥಾಕ್ರಮಾತ್ ।
ಸರ್ವತ್ರ ಬೀಜನಂ ಕಾರ್ಯಂ ಬೀಜಿನಾಂ ಪ್ರಣವೇನ ಹಿ ॥ ೧೧ ॥

(ಅಪಾಂಯೋನಿಃ)

---

೮. ಹನ್ನೆರಡು ಅಕ್ಷರಗಳಲ್ಲಿ ಆದ್ಯಂತವಾಗಿ ಪ್ರಣವವನ್ನು ಸೇರಿಸುತ್ತಾ, ಬರೆಯುವ ಅಕ್ಷರಸಮುದಾಯವೆಲ್ಲವೂ ಸಂಹಾರಯೋನಿಯೆನಿಸುವುದು.

೯. ಈ ಯೋನ್ಯಕ್ಷರಗಳ ಹೊರಭಾಗದಲ್ಲಿ ಕುಂಭಾಕೃತಿಯಾಗಿ ಘೃತಪೂರ್ಣವಾಗಿ ಉತ್ತರಾಭಿಮುಖವಾಗಿರುವ ಒಂದು ಪ್ರದೇಶದಲ್ಲಿ ಓಂಕಾರದ್ವಯಗಳನ್ನು ಬರೆಯುವುದೇ ದ್ವಾರಪಾಲಕಯೋನಿಯೆನಿಸುವುದು.

೧೦. ತಂತ್ರದಲ್ಲಿ ಹೇಳಲ್ಪಟ್ಟ ಅಕ್ಷರತ್ರಯಾತ್ಮಕವಾದ ಪೃಥಿವೀ ಶಬ್ದವನ್ನೂ ಸಪ್ತಮಿಭಕ್ತಿಗಳಿಂದಲೂ, ಪ್ರಣವದಿಂದಲೂ ಕೂಡಿದ ಅಷ್ಟಾಕೃತಿಯೇ ಪಾರ್ಥಿವ ಯೋನಿ.

೧೧. ಎಲ್ಲಾ ಯೋನಿಗಳ ಆದ್ಯಕ್ಷರಗಳನ್ನೇ ಕ್ರಮವಾಗಿ ಸೇರಿಸಿ, ಓಂಕಾರಾದಿಯಾದ ಬೀಜಾಕ್ಷರವನ್ನು ಉಲ್ಲೇಖಿಸಿದರೆ ಅದು ಅಪಾಂ ಯೋನಿಯೆನಿಸುವುದು.

ಯೋನಿಸ್ತು ತೇಜಸೋಂಭಸ್ಸ್ಯಾದ್ಭೂತಯೋ ಸರ್ವದೇಹಿನಾಂ ।
ಕಾದಯಸ್ತ್ವಗ್ನಿವರ್ಣಾನಾಂ ಪ್ರಭವಾಯ ಮಹಾತ್ಮನಾಂ ॥ ೧೨ ॥
(ಯೋನಿರಾಗ್ನೇಯೀ)

ಆಕಾಶಗುಣಕಾರಃ ಶಬ್ದಾಶ್ಚಾದೇಯೋ ಬೀಜಯೋನಯಃ ।
ಸೃಷ್ಟಯೇ ಶಬ್ದರೂಪಾಣಾಂ ಕಾಲಾದಿವರತಾವಿಧಿಃ ॥ ೧೩ ॥
(ಆಕಾಶಾತ್ಮಿಕಾಯೋನಿಃ)

ಭೂತಾನಾಂ ಪರಮಾಂ ಯೋನಿಂ ಭಕಾರಾದಿತಥಾ ಪರಾ ।
ವಾಙ್ಮಯಸ್ಯ ಚ ಸಿದ್ಧ್ಯರ್ಥಂ ಭೂತಯೋನಿಂ ವಿಧಾಪಯೇತ್ ॥ ೧೪ ॥
(ಭೂತಸಂಹಾರಯೋನಿಃ)

ದ್ವಾರದೇಶೇ ತು ವಿನ್ಯಸ್ಯ ಚತ್ವಾರೋ ಯಮಸಂಜ್ಞಕಾಃ ।
ವಿಷಮಂ ಪರಮಂ ದೇವಂ ಯ ಏವಂ ಧ್ಯೇಯಮೀಶ್ವರಂ ॥ ೧೫ ॥
(ನಪುಂಸಕಯೋನಿಃ

---

೧೨. ಕಕಾರಾದಿಯಾದ ಅಗ್ನಿವರ್ಣಗಳ ಸ್ಥಾನವೇ ಅಗ್ನಿಯೋನಿಯೆನಿಸುವುದು. ಇದು ಜಗತ್ತಿನ ರಕ್ಷಣೆಗಾಗಿ ಜಲಸಮೃದ್ಧಿಯನ್ನೂ, ಮಹಾ ವಿಭೂತಿಗಳ ಜನನವನ್ನೂ ಒದಗಿಸತಕ್ಕದ್ದಾಗುವುದು.

೧೩. ಕಾಲಾದಿಯಾಗಿ ವ, ರ, ತ, ಈ ಅಕ್ಷರಗಳ ಪರ್ಯಂತವಾಗಿರುವ ಆಕಾಶ ಗುಣಕವಾದ ಅಕ್ಷರಗಳಿಂದ ಕೂಡಿದ ಯೋನಿಯೇ, ಆಕಾಶಾತ್ಮಿಕವಾದ ಯೋನಿಯೆನಿಸುವುದು.

೧೪. ಭಕಾರಾದಿಯಾದ ಸಕಲ ವರ್ಣಗಳ ಸಮುದಾಯವೇ ಭೂತಸಂಹಾರ ಯೋನಿಯೆನಿಸುವುದು. ಇದೇ ಸಕಲ ಭೂತಗಳಿಗೂ ಮುಖ್ಯ ಯೋನಿಯೆನಿಸಿಕೊಂಡಿರುವುದು.

೧೫. ಯಮಸಂಜ್ಞಕವಾದ ನಾಲ್ಕು ಅಕ್ಷರಗಳನ್ನು ದ್ವಾರದೇಶದಲ್ಲಿ ಬರೆದು ಅದರಲ್ಲಿ ವಿಷಮಾಕ್ಷರವೇ ಪರಮಧ್ಯೇಯವೆಂದು ಭಾವಿಸುವುದೇ ನಪುಂಸಕಯೋನಿಯೆನಿಸುವುದು.

ವಿಶ್ವಯೋನಿರತೋನ್ಯಸ್ಯಾಃ ಸರ್ವಜ್ಞಾ ವಿಶ್ವಸೃಕ್ಪರಾಃ ।
ದ್ವಾರಪಾಲನಮಸ್ಕಾರವರ್ಣಾ ಉಕ್ತಾಸ್ಯಸಂಜ್ಞಿತಾಃ ॥ ೧೬ ॥

ನಮೋ ನಮೋ ತತ್ತ್ವಸ್ಯ ಪ್ರಣವಸ್ಯ ತು ।
ಏವಂ ದೀಪಿತಮೋತತ್ತು ವಿಶ್ವಸೃಗ್ಭೂತಯೋ ಮತಂ ॥ ೧೭ ॥

ಪರಮಂ ಕಾರಣಂ ಚೈವ ಕ್ರಿಯಾ ಭೂತಾತ್ಮನಾ ಸಹ ।
ಬೀಜಯೋನಿಶ್ಚ ಸೃಷ್ಟಿಶ್ಚ ಸಂಹಾರಶ್ಚಾಷ್ಟಮಃ ಪುನಃ ॥ ೧೮ ॥

ವಿಧಾನಂ ದೇವದೇವಸ್ಯ ಮನಸಾಪ್ಯಥ ಕೀರ್ತಯೇತ್ ।
ಪ್ರವಿಶೇತ್ಪರಮಂ ದೇವಂ ವಿಮುಕ್ತಸ್ಸರ್ವಬಂಧನೈಃ ॥ ೧೯ ॥

ಏವಮೇವ ಸದಾ ದೇವಃ ಕೃತ್ಸ್ನಸ್ಯ ಜಗತೋ ಗುರುಃ ।
ಪೂಜ್ಯೋ ಧ್ಯೇಯಸ್ತಥೇಜ್ಯಶ್ಚ ವಿದ್ವದ್ಭಿಃ ಪರಮಾರ್ಥತಃ ॥ ೨೦ ॥

---

೧೬-೧೭. ವಿಶ್ವಯೋನಿಯಲ್ಲಿ ದ್ವಾರಪಾಲಕ ನಮಸ್ಕಾರಪೂರ್ವಕವಾದ ನಾಲ್ಕು ಯಮವರ್ಣಗಳು ನಮಶ್ಯಬ್ದಾಂತವಾಗಿ ಪ್ರಣವಸಹಿತವಾಗಿ ಉಲ್ಲೇಖಿಸಲ್ಪಡುವುವು. ಇದು ವಿಶ್ವಸೃಷ್ಟಿಯ ಉದ್ದೇಶಕ್ಕಾಗಿ ನಿಯಮಿಸಲ್ಪಟ್ಟಿರುವುದು.

೧೮-೨೦. ಜಗತ್ತಿನ ಸೃಷ್ಟಿಗೆ ಕ್ರಿಯಾಪಂಚಭೂತಗಳು, ಬೀಜಯೋನಿಗಳೆಂದು ಎಂಟು ಪರಮ ಕಾರಣಗಳಿವೆ. ಸಂಹಾರವು ಮಾತ್ರ ದೇವದೇವನ ಕೇವಲ ಮನಸ್ಸಿನಿಂದಲೇ ನಡೆಯುಬಹುದಾಗಿದೆ. ಈ ಜಗತ್ತು ಹೀಗೆ ಭಗವಂತನಿಂದ ಸೃಷ್ಟವಾಗಿ ಅನೇಕ ಬಂಧನಗಳನ್ನು ಪಡೆದು, ಕೊನೆಗೆ ಸಕಲ ಬಂಧನಗಳಿಂದಲೂ ಮುಕ್ತವಾಗಿ ಸಂಹಾರಕಾಲದಲ್ಲಿ ಪರಮಾತ್ಮನಲ್ಲಿಯೇ ಐಕ್ಯವಾಗುವುದು. ಆದ್ದರಿಂದ ಸಕಲ ಲೋಕಕ್ಕೂ ಸೃಷ್ಟಿ ಸ್ಥಿತ್ಯಾದಿ ಕಾರ್ಯಗಳಲ್ಲಿ ಗುರುವೆನಿಸಿರುವ ಪರಾತ್ಪರ ಸ್ವರೂಪನಾದ ಆದಿದೇವನನ್ನು ಸರ್ವದಾ ಧ್ಯಾನ, ಜಪ, ಪೂಜಾದಿಕಾರ್ಯಗಳಿಂದ ಸೇವಿಸುತ್ತಿರಬೇಕು.

ಇತಿ ಶ್ರೀ ಸಾಂಬಪುರಾಣೇ ಬೀಜಪ್ರಸವೋನಾಮ
ಚತುಸ್ಸಪ್ತತಿತಮೋಽಧ್ಯಾಯಃ.

---

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಎಪ್ಪತ್ತುನಾಲ್ಕನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಪಂಚಸಪ್ತತಿತಮೋಽಧ್ಯಾಯಃ

ಉಕ್ತಂ ತದ್ಯೋನಿಬೀಜಂ ಚ ಸಾಂಕುರಂ ಪ್ರಸವಂ ಮಹತ್ ।
ತತ್ಪುಷ್ಪಫಲದಂ ಮಹ್ಯಂ ಮುಕ್ತಿದಂ ಸರ್ವದೇಹಿನಾಂ ॥ ೧ ॥

ಪೂರ್ವಸ್ಯಾಂ ಸಂಶಯುಶ್ಚೈವಂ ದೀಪ್ತ್ಯಾಯಾಮುಚ್ಯತಾಂ ಪುನಃ ।
ತಂ ವಿಧಿಂ ಸಂಶಯ (?) ದೇವಭಕ್ತಃ ಸ್ಯಾಮಹಭಾಸ್ಕರೇ ॥ ೨ ॥

ಶ್ರುತ್ವಾ ವಿಜ್ಞಾಪನಂ ತಸ್ಯ ಪ್ರೋವಾಚ ವಿಧಿವತ್ಪ್ರಭುಃ ।
ಸಮಯಾದಿಯಥಾ ತತ್ವಂ ದೀಕ್ಷಾಂ ಸಮ್ಯಕ್‌ಚತುರ್ವಿಧಾಂ ॥ ೩ ॥

---

## ಎಪ್ಪತ್ತೈದನೆಯ ಅಧ್ಯಾಯ

೧-೨. ಅನಂತರ ಭಕ್ತಶಿರೋಮಣಿಯಾದ ರಾಜನು ಸೂರ್ಯದೇವನನ್ನು ಕುರಿತು "ದೇವದೇವನೆ, ಇಲ್ಲಿಯವರೆಗೆ ಯೋನಿಬೀಜಾತ್ಮಕಗಳಾದ ಮಂತ್ರಾಕ್ಷರಗಳನ್ನು ತಿಳಿಸಿರುವೆ. ಇನ್ನುಮುಂದೆ ಸಕಲ ಪ್ರಾಣಿಗಳೂ ಸಂಶಯರಹಿತವಾಗಿದ್ದು ಪೂರ್ವ ದೀಪ್ತಿ ಸಂಸ್ಕಾರದಿಂದ ಮುಕ್ತಿಯನ್ನು ಪಡೆಯುವ ಮಾರ್ಗಗಳನ್ನು ವಿವರಿಸಿ ಹೇಳಬೇಕು" ಎಂದು ಪ್ರಾರ್ಥಿಸಿಕೊಳ್ಳಲು,

೩-೪. ಆಗ ಪ್ರಭುವಾದ ಸೂರ್ಯದೇವನು ಭಕ್ತನ ವಿಜ್ಞಾಪನೆಯಂತೆ ಚತುರ್ವಿಧವಾದ ದೀಕ್ಷಾವಿಧಿಯನ್ನು ವಿವರಿಸಲು ಆರಂಭಿಸಿದನು. "ದೀಕ್ಷಾವಿಧಿಯನ್ನು

ಪರೀಕ್ಷಿತಾಯ ಭಕ್ತಾಯ ಶುಶ್ರೂಷಣರತಾಯ ಚ ।
ತಪಸ್ವಿನೇ ವಿನೀತಾಯ ಕ್ರೋಧಾದಿರಹಿತಾಯ ಚ ॥ ೪ ॥

ಪೂಜಯಿತ್ವಾಥ ದೇವೇಶಂ ಪ್ರಾಗುಕ್ತೇನ ವಿಧಾನತಃ ।
ಆವಾಹಯೇತ್ತತಸ್ತಸ್ಮಿನ್ ಭೂತಯೋನಿಂ ದಶಾತ್ಮಿಕಾಂ ॥ ೫ ॥

ದೃಷ್ಟ್ವಾ ಚ ಸರ್ವಭೂತೈಶ್ಚ ಸ್ಮಶಾನೇ ಸಕಲೀಕೃತಂ ।
ಸಪ್ತಕೃತ್ವೋಥ ಸಂಪಾತ್ಯ ದರ್ಭಪುಂಜೇ ಸ್ಥಿತಸ್ತತಃ ॥ ೬ ॥

ಅನ್ಯತ್ರ ಸ್ಥಾಪಿತಂ ಶಿಷ್ಯಮಾಜ್ಯಾದ್ಯೈಶ್ಚ ಸುಪೂಜಿತಂ ।
ಪಾವಯೇತ್ತಂ ತ್ರಿರೂರ್ಧ್ವಗಂ ವೈ ನಾಭೇಃ ಪಿಂಜೂಲಕೈರಧಃ ॥ ೭ ॥

ಆಹುತೀರ್ಜುಹುಯಾದ್ಭೂತೈಃ ಸರ್ವೈರೇವ ಯಥಾಕ್ರಮಂ ।
ಸಂಪಾತಾನ್ ಪಾತಯೇಚ್ಛಿಷ್ಯೇ ಮುಕ್ತದೋಷಸ್ತಥಾ ಭವೇತ್ ॥ ೮ ॥

---

ಪಡೆಯಲು ಮೊದಲು ಅತ್ಯಂತ ವಿನೀತನೂ, ತಪಸ್ವಿಯೂ, ಕಾಮಕ್ರೋಧಾದಿಗಳಿಂದ ಬಿಡುಗಡೆಹೊಂದಿದವನೂ ಆದ ಒಬ್ಬಗುರುವನ್ನು ಮೊದಲು ವಿಧಿವತ್ತಾಗಿ ಪೂಜಿಸಬೇಕು.

೫-೬. ಹಾಗೆಯೇ ದೇವರನ್ನೂ ಪೂಜಿಸಿ, ಆಪೂಜ್ಯನಲ್ಲಿ ದಶಾತ್ಮಿಕವಾದ ಭೂತಯೋನಿಯನ್ನು ಆವಾಹಿಸಬೇಕು. ಅನಂತರ ಸ್ಮಶಾನದಲ್ಲಿ ಸಕಲೀಕೃತವಾದ ಸಕಲ ಭೂತಗಳೊಡನೆ ಏಳುಸಾರಿ ಆವಾಹನಾದಿ ಪೂಜೆಗಳನ್ನು ನಡೆಸಿ, ತಾನು ದರ್ಭಮಯವಾದ ಆಸನದಲ್ಲಿ ಕುಳಿತುಕೊಳ್ಳಬೇಕು.

೭-೮. ಆಚಾರ್ಯನಾದ ತಾನು ಶಿಷ್ಯನನ್ನು ಒಂದುಕಡೆ ಕೂರಿಸಿ, ಆ ಕಲಾತ್ಮಕವಾಗಿ ಭಾವಿಸಿದ ಚಕ್ರವನ್ನು ವಿಧಿವತ್ತಾಗಿ ಪೂಜಿಸಿ, ಆಜ್ಯಾಹುತಿಯಿಂದ ಸಕಲ

ಸಕಲೀಕೃತ್ಯ ಪಶ್ಚಾಚ್ಚ ಯಜೇಚ್ಚಾಪಿ ಪುನಃ ಶುಚಿಃ ।
ಸಂಸ್ಥಾಪ್ಯ ದಕ್ಷಿಣೇನಾಗ್ನೇರ್ಭೂತೈರ್ಹುತ್ವಾ ಚ ಕಿಲ್ಬಿಷಂ ॥ ೯ ॥

ಭಸ್ಮಮುಷ್ಟಿಂ ತತಸ್ತಸ್ಮಿನ್ ದದ್ಯಾದಾದಾಯ ಪಾವಕಂ ।
ಏವಂ ಸಮಯಿನಸ್ತಸ್ಯ ಭವೇತ್ಸಂಸ್ಕಾರಯೋಗ್ಯತಾ ॥ ೧೦ ॥

ಇತಿ ಸಾಂಬಪುರಾಣೇ ಜ್ಞಾನೋತ್ತರೇ ಬೀಜಪ್ರಸವೇ
ಪಂಚಸಪ್ತತಿತಮೋಽಧ್ಯಾಯಃ.

---

ಭೂತಗಳನ್ನೂ ತೃಪ್ತಿಪಡಿಸಬೇಕು. ಅನಂತರ ಕುಶಪಿಂಜೂಲಕದಿಂದ (ದರ್ಭೆಯ ಕುರ್ಚಿ) ಪ್ರೋಕ್ಷಿಸಿ ಆ ಶಿಷ್ಯನನ್ನು ಮುಕ್ತದೋಷವುಳ್ಳವನನ್ನಾಗಿ ಮಾಡಬೇಕು.

೧೦. ಆಮೇಲೆ ಹೋಮಾಗ್ನಿಯಿಂದ ರಕ್ಷೆಯನ್ನು ತೆಗೆದು ಶಿಷ್ಯನಿಗೆ ಹಚ್ಚಬೇಕು. ಇದರಿಂದ ಆತನ ಸಕಲ ಪಾಪಗಳೂ ಪರಿಹೃತಗಳಾಗಿ ಆಗ ಸಂಸ್ಕೃತನೆನಿಸುವನು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಎಪ್ಪತ್ತೈದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಸೂರ್ಯಾಯನಮಃ ॥

# ಅಥ ಶ್ರೀ ಸಾಂಬಪುರಾಣೇ ಷಟ್ಸಪ್ತತಿತಮೋಧ್ಯಾಯಃ

---

ಯೋಗ್ಯತಾಮಥ ಬುದ್ಧ್ವಾಸ್ಯ ಸಂಸ್ಕಾರಂ ಗುರುರಾರಭೇತ್ ।
ಭೂತಸ್ಯ ಪಾವನೈರೇವ ತಸ್ಯ ಸಂಪೂಜ್ಯ ತತ್ತ್ವತಃ ॥ ೧ ॥

ಸಂಹಾರಶಕ್ತಿಮಾವಾಹ್ಯ ವಧಾನೇನ ದಶಾತ್ಮನಾ ।
ಆತ್ಮಾನಂ ಸಕಲೀಕೃತ್ಯ ಶಿಷ್ಯೇ ನ್ಯಾಸಾನ್ ಪ್ರಯೋಜಯೇತ್ ॥ ೨ ॥

ಕೃತ್ವಾ ಪೂಜಾದಿಕಾಂ ಸಮ್ಯಕ್ಪ್ರತಿಮಂತ್ರಂ ಪ್ರಯೋಜಯೇತ್ ।
ಸ್ಪೃಷ್ಟಸ್ತು ಪಾವಕಂ ಕರ್ಮ ಯದ್ಯಸೌ ಪ್ರತಿಪದ್ಯತೇ ॥ ೩ ॥

---

## ಎಪ್ಪತ್ತಾರನೆಯ ಅಧ್ಯಾಯ.

೧-೨. ಗುರುವು ಶಿಷ್ಯನ ಯೋಗ್ಯತಾದಿಗಳನ್ನು ಚೆನ್ನಾಗಿ ತಿಳಿದು ಅನಂತರ ಅವನನ್ನು ಸಂಸ್ಕಾರದಿಂದ ಶುದ್ಧಿಗೊಳಿಸಲು ಪ್ರಯತ್ನಿಸಬೇಕು. ಮತ್ತು ಅನಂತರ ಭೂತಪಾವನ ಮಂತ್ರಗಳಿಂದಲೂ ಸಂಹಾರಶಕ್ತಿ ಪರ್ಯಂತವಾದ ಮಂತ್ರಪುರಶ್ಚರಣೆ ಯಿಂದಲೂ ತಾನು ಮೊದಲು ಸಕಲೀಕರಣಾತ್ಮಕವಾದ ಸಂಸ್ಕಾರದಿಂದ ಶುದ್ಧಿ ಹೊಂದಿ, ಅನಂತರ ಶಿಶ್ಯನಲ್ಲಿ ನ್ಯಾಸಾದಿಗಳ ಉಪದೇಶವನ್ನು ನಡೆಸಬೇಕು.

೩-೪. ಅನಂತರ ಪೂಜಾದಿಗಳನ್ನು ವಿಧಿವತ್ತಾಗಿ ನೆರವೇರಿಸಿ, ಮಂತ್ರಪೂರ್ವಕವಾಗಿ ಪಾವಕ ಕರ್ಮವನ್ನು ಶಿಶ್ಯನ ಅನುಮತಿಯಿದ್ದರೆ ನಡೆಸಬೇಕು. ಅದು

ಬ್ರಹ್ಮಘ್ನಂ ಶೋಧಯೇದ್ಗೋಷ್ಠಂ ದಶಾಹಂ ಪಾಪಶುದ್ಧಯೇ ।
ಅನ್ಯೇಷ್ವಪ್ಸು ತ್ರಿರಾತ್ರಂ ಚ ಮಹಾಸಂಗೇಷು ತತ್ತ್ವವಿತ್ ॥ ೪ ॥

ಪ್ರತ್ಯೇಕಮಾಹುತೀಸ್ತಿಸ್ರೋ ಹುತ್ವಾ ಸಂಪಾತಪಾರಣಂ ।
ಸಂಸ್ಥಿತೋ ದಕ್ಷಿಣೇನಾಗ್ನೇಃ ಕ್ರಮೇಣ ಲಭತೇ ಗುರುಃ ॥ ೫ ॥

ಗುರುಣಾಷ್ಟಶತಂ ಹುತ್ವಾ ಸಂಪಾತ್ಯಾಸ್ತ್ವೇಕವಿಂಶತಿಃ ।
ಸಂಪಾತಾ ಮೂರ್ಧ್ನಿ ಶಿಷ್ಯಸ್ಯ ಶಿವಯೋನ್ಯಾಂ ತಥಾಂಜಲಿಂ ॥ ೬ ॥

ಪುಷ್ಪಸ್ಯ ಮೂರ್ಧ್ನಿ ದದ್ಯಾಚ್ಚ ಕ್ರಿಯಾಯೋನ್ಯಾಂ ಚ ನಿಃಕ್ಷಿಪೇತ್ ।
ದರ್ಭೇ ದಶಾತ್ಮನಾ ಹೋಮಸ್ತ್ರಿಕಮೇತನ್ಮಯೋದಿತಂ ॥ ೭ ॥

ತಥಾ ಪುಂಸವನಂ ಕೃತ್ವಾ ಕ್ರಿಯಾಯೋನ್ಯೈಶ್ಚ ಮಂತ್ರಿಣಃ ।
ತಥೈವ ತಂಡುಲೈರ್ಜುಹುಯಾದಾಹುತಿಂ ತ್ವೇಕವಿಂಶತಿಂ ॥ ೮ ॥

---

ಹೇಗೆಂದರೆ, ಶಿಷ್ಯನು ಬ್ರಹ್ಮಹತ್ಯ ಮಾಡಿದವನಾದರೆ ಮೊದಲು ಆತನು ಹತ್ತುದಿನಗಳ ಪರ್ಯಂತ ಹಸುವಿನ ತೊಟ್ಟಿಯನ್ನು ಗುಡಿಸಬೇಕು. ಅನಂತರ ಮೂರು ರಾತ್ರಿ ನೀರಿನಲ್ಲಿ ನಿಲ್ಲಬೇಕು.

೫-೬. ಅನಂತರ ಅಗ್ನಿಸಂಸ್ಕಾರದಿಂದ ಅಗ್ನಿಯನ್ನು ವೃದ್ಧಿಗೊಳಿಸಿ ದಕ್ಷಿಣ ಭಾಗದಲ್ಲಿ ನಿಂತು ಪ್ರತ್ಯೇಕವಾಗಿ ಸಂಪಾತಪಾರಣವಾದ ಆಹುತಿತ್ರಯವನ್ನು ಕೊಟ್ಟು, ಅನಂತರ ಇಪ್ಪತ್ತೊಂದು ಸಂಪಾತರೂಪವಾದ ಎಂಟುನೂರು ಹೋಮಗಳನ್ನು ನಡೆಸಬೇಕು. ಅನಂತರ ಶಿಷ್ಯನ ಶಿರೋಭಾಗದಲ್ಲಿ ಶಿವಯೋನಿಯನ್ನು ಉಚ್ಚರಿಸಿ ಪುಷ್ಪವನ್ನು ಇಡಬೇಕು.

೭-೮. ಆಮೇಲೆ ಕ್ರಿಯಾಯೋನಿಯಿಂದ ಅದನ್ನು ತೆಗೆದುಹಾಕಬೇಕು. ಅನಂತರ ದರ್ಭೆಯಮೇಲೆ ನಿಂತು ಹಿಂದೆ ಹೇಳಿದಂತೆ ಮೂರು ಹೋಮ ಮಾಡಬೇಕು. ಆಮೇಲೆ ಮಂತ್ರವತ್ತಾಗಿ ಪುಂಸವನಾದಿ ಕರ್ಮಗಳನ್ನು ನಡೆಸಿ ತಂಡುಲದಿಂದ ಏಕವಿಂಶತಿ ಆಜ್ಯಾಹುತಿಯನ್ನು ನಡೆಸಬೇಕು.

ಜಾತಕರ್ಮ ತಥೈವ ಸ್ಯಾತ್ಸ್ತೋಮಂ ಮೂರ್ಧ್ನಿ ದಶಾತ್ಮನಾ ।
ತಥಾ ವ್ಯಾಹೃತಿಹೋಮಶ್ಚ ಸ್ನಾನಂ ಚಾಸ್ಯಮಲಾಪಹಂ ॥ ೯ ॥

ಹಿರಣ್ಯಗರ್ಭಸ್ತೋಕ್ತಾಯನಾಃ ಕ್ರಿಯಾಗೋನ್ಯಪಿತಂ ಪರಂ ।
ಹುತ್ವಾ ಪ್ರಶಮಯೇಚ್ಛೈವ ಮಧುನಾ ಚ ಸಮಾಯುತಂ ॥ ೧೦ ॥

ಯೇ ಚಾಪಿ ಶಿಷ್ಟಸಂಸ್ಕಾರಾಃ ಪ್ರಾಶನಾದ್ಯಾ ವ್ರತಾಂತಕಾಃ ।
ಕೃಷ್ಣಾಜಿನಾದಿಲಿಂಗಾನಿ ದದ್ಯಾದಸ್ಯ ದಶಾತ್ಮನಾ ॥ ೧೧ ॥

ಹೋಮಂ ಕಾರಣಯೋನ್ಯಾಂ ತು ಕುರ್ಯಾನ್ನಿತ್ಯಂ ಸಮಾಹಿತಃ ।
ಸಪ್ತಸಪ್ತ ತಥಾಹಾನಿ ಚರೇತ್ಸಪ್ತವ್ರತಾನಿ ವೈ ॥ ೧೨ ॥

ಸಂಪಾತನಯನಾಂ ಜಾದ್ಯಾತ್ತಥಾ ವೈ ಕಾರಣಸ್ಯ ತು ।
ಕರ್ಮ ವೈವಾಹಿಕಂ ಚೈವ ವರರೂಪಾಯ ಯಜ್ಞವಾನ್ ॥ ೧೩ ॥

---

೯-೧೦. ದಶಾತ್ಮಕವಾದ ಮಂತ್ರಪುರಶ್ಚರಣೆಯಿಂದಲೇ ಜಾತಕರ್ಮಾದಿ ಸಂಸ್ಕಾರವನ್ನೂ, ವ್ಯಾಹೃತಿಹೋಮವನ್ನೂ ಮಾಡಿ, ಅನಂತರ ಹಿರಣ್ಯಗರ್ಭಯೋನಿಯಿಂದ ಮಧುಪ್ರಾಶನವನ್ನೂ ಮಧುಹೋಮವನ್ನೂ ನಡೆಸಬೇಕು.

೧೧-೧೨. ಅನಂತರ ಅನ್ನಪ್ರಾಶನಾದಿ ಸಕಲ ಸಂಸ್ಕಾರಗಳನ್ನೂ ನಡೆಸಿ, ಉಪನಯನ ಸಂಸ್ಕಾರದಂತೆ ಕೃಷ್ಣಾಜಿನಾದಿ ಚಿಹ್ನೆಗಳನ್ನು ಕೊಟ್ಟು, ಸಪ್ತಸಪ್ತಿ ಮಂತ್ರಾತ್ಮಕವಾದ ಹೋಮವನ್ನು ನಡೆಸಿ, ಸಪ್ತವ್ರತಗಳನ್ನೂ ಏಳುದಿನಗಳ ಪರ್ಯಂತ ಮುಂದುವರಿಸಬೇಕು.

೧೩-೧೪. ಗೋದಾನಾದಿ ವ್ರತಚತುಷ್ಟಯಗಳನ್ನೂ ವೈವಾಹಿಕವಾದ ಸಂಸ್ಕಾರವನ್ನೂ, ಅನಂತರ ಯಾಗವನ್ನು ನಡೆಸಿ, ಸೋಮಪಾನಮಾಡಬೇಕು. ಇಲ್ಲಿ

ಯಾಗವಾಂಶ್ಚ ಹವಿರ್ಯಜ್ಞೈಸ್ಸೋಮಪಾನಮಥೋಚ್ಯತೇ ॥ ೧೪ ॥
ಸೋಮಮೌದುಂಬರೇ ನ್ಯಸ್ತಂ ನಮಸ್ಯೇತ್ತಂ ದಶಾತ್ಮನಾ ।
ದಶ ಸಂಪಾತಿಶಾಂ ಪೀತ್ವಾ ಕ್ರತುಭಿರ್ಯಜ್ಯತೇ ತದಾ ॥ ೧೫ ॥

ದಕ್ಷಿಣಾಂ ತದ್ವಿದೇ ದದ್ಯಾದ್ದೇವಾಯೈನಂ ನಿವೇದಯೇತ್ ।
ಗುರುಂ ಪ್ರದಕ್ಷಿಣೀಕೃತ್ಯ ಲಬ್ಧಾನುಜ್ಞೋ ಯಥಾವಿಧಿ ॥ ೧೬ ॥

ಏವಂ ತು ಸಂಸ್ಕೃತೋ ಯೋಗ್ಯಃ ಸಿದ್ಧೀನಾಂ ಸರ್ವತಸ್ತತಃ ।
ಮೃತಶ್ಚ ಮೋಕ್ಷಮಾಪ್ನೋತಿ ವಿಶೇಷ್ಚ ಪರಮಂ ಪದಂ ॥ ೧೭ ॥

ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇ ಬೀಜಪ್ರಸವೇ
ಷಟ್‌ಸಪ್ತತಿತಮೋಽಧ್ಯಾಯಃ.

---

ಸೋಮರಸವನ್ನು ಅತ್ತಿಯಹಾಲಿನಲ್ಲಿ ಸೇರಿಸಿ, ಅದಕ್ಕೆ ದಶವಿಧವಾಗಿ ನಮಸ್ಕರಿಸಿ ಹತ್ತುಸಾರಿ ಕುಡಿಯ ಬೇಕು. ಅದರಿಂದ ಅವನನ್ನು ಯಜಮಾನನೆನಿಸಬೇಕು.

೧೬-೧೭. ಅನಂತರ ಮಂತ್ರವೇತ್ತನಾದ ಆಚಾರ್ಯನಿಗೆ ದಕ್ಷಿಣಾದಿಗಳನ್ನು ಕೊಟ್ಟು ಗುರುವಿಗೆ ಪ್ರದಕ್ಷಿಣೆಮಾಡಿ, ಅವನ ಅಪ್ಪಣೆಯನ್ನು ಪಡೆದು, ತನ್ನ ನಿತ್ಯ ಕರ್ಮಗಳಿಗೆ ತೊಡಗಬೇಕು. ಈ ರೀತಿ ಸಂಸ್ಕೃತನಾದವನು ಸಕಲ ಪಾಪಗಳಿಂದಲೂ ಪರಿಶುದ್ಧನಾಗಿ, ಮರಣಾನಂತರ ಪರಮಪದವನ್ನು ಹೊಂದುವನೆಂಬುದರಲ್ಲಿ ಅನುಮಾನವಿಲ್ಲ.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಸೂರ್ಯಾಯನಮಃ ॥

# ಅಥ ಶ್ರೀ ಸಾಂಬಪುರಾಣೇ ಸಪ್ತಸಪ್ತತಿತಮೋಧ್ಯಾಯಃ

ಶಿವತುಲ್ಯತ್ವಮಸ್ಯ ಸ್ಯಾತ್ಪಾಶಚ್ಛೇದಸ್ತು ಯೇನ ವೈ ।
ತಮಹೋ ವರ್ಣಯಿಷ್ಯಾಮಿ ಸಂಸ್ಕಾರಂ ಕ್ರಮಶಃ ಪರಂ ॥ ೧ ॥

ಸಂಸ್ಕೃತ್ಯ ಪೂರ್ವವದ್ಧೀರೋ ದೃಷ್ಟ್ವಾ ದೈವಂ ಯಥಾವಿಧಿ ।
ಆಲಿಖೇನ್ಮಂಡಲಂ ಸಮ್ಯಗ್ಭೂತಾನಾಂ ವಿಧಿವತ್ತತಃ ॥ ೨ ॥

ತಸ್ಮಿನ್ನಿವೇಶ್ಯ ಭೂತಾನಾಂ ಸಂಪೂಜ್ಯೈನಂ ಯಥಾವಿಧಿ ।
ಭೂತಾಧಿಪೇನ ತತ್ತ್ವಜ್ಞೋ ಮಂತ್ರಪೂತಜಲೈಸ್ತು ತತ್ ॥ ೩ ॥

---

## ಎಪ್ಪತ್ತೇಳನೆಯ ಅಧ್ಯಾಯ

೧–೨. ಯಾವ ಸದ್ಗುರುವಿನ ಸಂಸ್ಕಾರದಿಂದ ಯಾವನಿಗೆ ಸಂಸಾರ ಪಾಶಚ್ಛೇದವಾಗುವುದೋ, ಅವನು ಸಾಕ್ಷಾತ್ಪರಶಿವನಿಗೆ ಸಮಾನನೆನಿಸುವನು. ಆ ಸಂಸ್ಕಾರವನ್ನು ಮುಂದೆ ವರ್ಣಿಸುವೆನು. ಈ ಸಂಸ್ಕಾರಕ್ಕೆ ಬರುವವನು ಹಿಂದೆ ಹೇಳಿದಂತೆ ಸೂರ್ಯದೀಕ್ಷೆಯಲ್ಲಿ ನಿರತನಾಗಿದ್ದು ಅನಂತರ ಭೂತಮಂಡಲವನ್ನು ಬರೆಯಬೇಕು. (ಭೂತಮಂಡಲಕ್ರಮ ಹಿಂದೆ ವಿವೃತವಾಗಿದೆ)

೩–೪. ಅದರ ಪಕ್ಕದಲ್ಲಿ ಶಿಷ್ಯನನ್ನು ಕುಳ್ಳಿರಿಸಿ, ಗುರುವು ವಿಧಿವತ್ತಾಗಿ ಅದನ್ನು ಪೂಜಿಸಿ, ಮಂತ್ರಪೂತವಾದ ಜಲದಿಂದ ಶಿಷ್ಯನನ್ನು ಪ್ರೋಕ್ಷಿಸಿ, ಮಂಗಳ

ದ್ರವ್ಯೈಸ್ತು ಮಂಗಲ್ಯೈಶ್ಚೈವಮಭಿಷಿಚ್ಯ ಸುಪೂಜಿತಃ ।
ಅಲಂಕೃತಂ ಗೃಹೀತ್ವಾಥ ದೇವಾಯೈನಂ ನಿವೇದಯೇತ್ ॥ ೪ ॥

ಪ್ರದಕ್ಷಿಣಮತಃ ಕೃತ್ವಾ ವಿಜ್ಞಾಪ್ಯೋ ವಿಧಿವತ್ಪ್ರಭುಃ ।
ಪ್ರಣಮ್ಯ ವಿಧಿವದ್ಧೀರಃ ಪ್ರಸೀದೇತಿ ಹ್ಯಮುಂ ವದೇತ್ ॥ ೫ ॥

ಪಪ್ರಚ್ಛ ಶಿತಾಮ್ಯಸ್ಯಾ (?) ದುಕ್ತ್ವಾಪಿ ಯಥಾಸುಖಂ ।
ಪಾಶೇಭ್ಯೋ ಮೋಕ್ಷಯೇಚ್ಚೈನಂ ಗುರುತ್ವಂ ವೈ ಪ್ರಸಾದಜಂ ॥ ೬ ॥

ಅಥಾಸ್ಯ ದಕ್ಷಿಣೇನಾಗ್ನೇಃ ಸೂರ್ಯಯೋನ್ಯಾಂ ವಿಧಾನತಃ ।
ದತ್ವಾ ದರ್ಭಾಸನಂ ತತ್ರ ಉಪವೇಶ್ಯ ಸುಯಂತ್ರಿತಂ ॥ ೭ ॥

ಯಥೋಕ್ತಂ ಪುರುಷಂ ದೇವಂ ಸನ್ನಿವೇಶ್ಯ ಪ್ರಪೂಜ್ಯ ಚ ।
ವಿಜ್ಞಾಪಯೇಚ್ಚ ತಸ್ಯಾರ್ಥಂ ಯಥಾನುಗ್ರಹವಾನ್ ಭವೇತ್ ॥ ೮ ॥

---

ದ್ರವ್ಯಗಳಿಂದ ಅಭಿಷೇಕಮಾಡಿ, ಭೂಷಣಾದಿಗಳಿಂದಲಂಕರಿಸಿ, ದೇವರ ಸಮೀಪಕ್ಕೆ ಕರೆದುಕೊಂಡು ಹೋಗಬೇಕು.

೫-೬. ಶಿಷ್ಯನು ದೇವದೇವನನ್ನು ಪ್ರದಕ್ಷಿಣನಮಸ್ಕಾರಾದಿಗಳಿಂದ ತೃಪ್ತಿಗೊಳಿಸಿ, ಆಚಾರ್ಯನು ತನ್ನನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಳ್ಳಬೇಕು. ಪುನಃ ದೇವದೇವನನ್ನು ಪೂಜಿಸಿ, ಗುರುಪ್ರಸಾದರೂಪವಾದ ಅನುಗ್ರಹದಿಂದ ತನಗೆ ಪಾಪವಿಚ್ಛೇದವಾಗುವಂತೆ ಪ್ರಾರ್ಥಿಸಿಕೊಳ್ಳಬೇಕು.

೭-೮. ಆಚಾರ್ಯನು ಅನಂತರ ಶಿಷ್ಯನನ್ನು ಮುಂದಕ್ಕೆ ಕರೆದುಕೊಂಡು ಹೋಗಿ, ಅಗ್ನಿಯ ದಕ್ಷಿಣಭಾಗದಲ್ಲಿ ಸೂರ್ಯಯೋನಿಯಿಂದ ಉಪಸ್ಥಿತನಾಗಿ ದರ್ಭಾಸನದಮೇಲೆ ಕುಳ್ಳಿರಿಸಿ, ಹಿಂದೆ ಹೇಳಿದ ಪುರುಷಾಕಾರದಿಂದ ದೇವದೇವನನ್ನು ಪೂಜಿಸಿ, ಶಿಷ್ಯನನ್ನು ಅನುಗ್ರಹಿಸಬೇಕೆಂದು ಆಚಾರ್ಯನು ದೇವದೇವನಾದ ಪುರುಷನನ್ನು ಪ್ರಾರ್ಥಿಸಿಕೊಳ್ಳಬೇಕು.

ಆಗ್ನೇಯ್ಯಾಂ ದಿಶಿ ಚ ಪ್ರಾಚ್ಯಾಂ ಪುರುಷಂ ಸಂನಿವೇಶ್ಯ ಚ ।
ಆಪದಂ ಸಂಸ್ಥಿತೈರ್ಮಂತ್ರೈರ್ಜುಹುಯಾತ್ತು ಶಿರಃ ಪುಮಾನ್ ॥ ೯ ॥

ಅಭಿಮಂತ್ರ್ಯ ಚ ತಂ ಶಿಷ್ಯಂ ಜುಹುಯಾಚ್ಚ ಶತಂ ಶತಂ ।
ಸ್ವೇನ ಸ್ವೇನ ತು ಮಂತ್ರೇಣ ಸ್ಪೃಷ್ಟ್ವಾ ಯೇನ ಯಥಾವಿಧಿ ॥ ೧೦ ॥

ಅಕ್ಷಯೇನ ತು ದೈವೇನ ಸರ್ವೇಷಾಮನುಮಂತ್ರಿಣಂ ।
ಜಾನುತೋ ಭೂತಯೋನಿಃ ಸ್ಯಾದ್ವನಾತ್ಕಾ ಧಾತು ನಃ ಸಮಂ ॥ ೧೧ ॥

ಲಿಂಗೇ ಪ್ರಸವಯೋನಿಶ್ಚ ಪ್ರತಿರ್ಬಸ್ತಿವಿನಿಃಸೃತಾ ।
ನಾಭೌ ಚ ಭಾವಯೋನಿಸ್ಸ್ಯಾದ್ಬೀಜಮಸ್ಯ ದಶಾತ್ಮಕಂ ॥ ೧೨ ॥

ಹೃದಯೇ ಪರಮಾ ಯೋನಿರ್ಜಾತಾ ಸಾ ಪರಮೇಷ್ಠಿನಃ ।
ಕಾರಣಾತ್ಮಾ ಕ್ರಿಯಾಯೋನಿ ರ್ಬ್ರಾಹ್ಮೀಚೈಷಾ ಚ ಬೀಜಯೇತ್ ॥ ೧೩ ॥

---

೯-೧೦. ಆಗ್ನೇಯದಲ್ಲಿ ತಾನು ಕುಳಿತು ಪೂರ್ವದಲ್ಲಿ ಪುರುಷಾಕಾರವನ್ನಿಟ್ಟು ಪೂಜಾಮಂತ್ರಗಳಿಂದ ಪೂಜಿಸಿ, ಅನಂತರ ಅದೇ ಮಂತ್ರಗಳಿಂದ ಹೋಮ ಮಾಡಬೇಕು. ಅದೇ ಮಂತ್ರಗಳಿಂದಲೇ ಶಿಷ್ಯನನ್ನು ಆಯಾ ಅಂಗಸ್ಪರ್ಶರೂಪವಾಗಿ ಅಭಿಮಂತ್ರಣಮಾಡಬೇಕು. (ಮಾರ್ಜನೆಮಾಡಬೇಕು.)

೧೧-೧೨. ಶಾಶ್ವತನೂ, ಆದ್ಯಂತರಹಿತನೂ, ದೇವದೇವನೂ ಆದ ಆ ಪರಮಾತ್ಮನ ಸಕಲ ಮಂತ್ರಗಳಿಗೂ ಅಂಗಯೋನಿಗಳು ಈ ರೀತಿ ವಿಭಾಗಿಸಲ್ಪಟ್ಟಿವೆ. ಜಾನುಪರ್ಯಂತವಾಗಿ ಭೂತಯೋನಿಯೂ, ಊರುಪರ್ಯಂತವಾಗಿ ಧಾತುಯೋನಿಯೂ ಅಂಗದಲ್ಲಿ ಪ್ರಸವಯೋನಿಯೂ, ನಾಭಿಪರ್ಯಂತವಾಗಿ ನಾಭಿಯೋನಿಯೂ, ಉಳಿದ ಎಲ್ಲಾ ಭಾಗಗಳಿಗೂ ಭಾವಯೋನಿಯೂ ನಿರೂಪಿತಗಳಾಗಿವೆ. ಇವೆಲ್ಲಕ್ಕೂ ದಶಾತ್ಮಕವಾದ ಮಂತ್ರವೇ ಬೀಜವೆನಿಸುವುದು.

೧೩-೧೪. ಹೃದಯದಲ್ಲಿ ಮಾತ್ರ ಪರಮಯೋನಿಯೂ ಬ್ರಹ್ಮನಾಮಕವಾದ ಕಾರಣ ಮತ್ತು ಕ್ರಿಯಾಯೋನಿಯೂ, ಉಕ್ತವಾಗಿದೆ. ಚಕ್ಷುಸ್ಸಿಗೂ ಊರ್ಧ್ವ

**ಸಂಹಾರಚಕ್ಷುರೂರ್ಧ್ವಗಂ ಸ್ಯಾದಷ್ಟಬೀಜಂ ಪ್ರಕೀರ್ತಿತಂ ।**
**ಸರ್ವಾಶ್ಚ ಜುಹುಯಾದ್ಧ್ಯಾಯನ್ ಸಾಧಕೇ ಚಾತ್ರ ವಿನ್ಯಸೇತ್ ॥ ೧೪ ॥**

**ಅಂಗುಷ್ಠೇನ ಸಪುಷ್ಪೇಣ ನ್ಯಾಸಃ ಸರ್ವತ್ರ ಶಸ್ಯತೇ ।**
**ಪ್ರತಿಮಾನಂ ಚ ಭಸ್ಮ ಸ್ಯಾದ್ದೇಯಂ ಪಾತ್ರಾಧಿವಾಸಿತಂ ॥ ೧೫ ॥**

**ವಿಶ್ವಸ್ಪೃಕ್ತರ್ಪಣಂ ಕುರ್ಯಾತ್ಸಾಧಕಸ್ಯ ಚ ಸಂಪುಟಂ ।**
**ನಿವಾರಸ್ತೇನ ವಿಘ್ನಾನಾಮನ್ಯತ್ರಾಪಿ ಪ್ರಯುಜ್ಯತೇ ॥ ೧೬ ॥**

**ದೇವಸ್ಯಾಥ ಸಕಾಶೇ ತು ಶ್ರಾವ್ಯಂ ತಸ್ಯಾನುಶಾಸನಂ ।**
**ಅನುಗ್ರಾಹ್ಯಾಸ್ತ್ವಯಾ ಶಿಷ್ಯಾ ಯಥಾ ಶಾಸ್ತ್ರಮನಿಂದಿತಾಃ ॥ ೧೭ ॥**

**ಸಂಯುಜ್ಯ ದೇವವಚ್ಚಾಪಿ ಗುರುಂ ತದ್ವತ್ಸಗೋಚರಂ ।**
**ಸರ್ವಂ ಪ್ರದಕ್ಷಿಣೀಕೃತ್ಯ ತತೋ ದೇವಂ ವಿಸರ್ಜಯೇತ್ ॥ ೧೮ ॥**

**ಇತಿ ಶ್ರೀ ಸಾಂಬಪುರಾಣೇ ಸಪ್ತಸಪ್ತತಿತಮೋಽಧ್ಯಾಯಃ.**

---

ಭಾಗದಲ್ಲಿ ಸಂಹಾರಯೋನಿಯನ್ನೂ ಅಷ್ಟಬೀಜಮಂತ್ರವನ್ನೂ ಪ್ರಯೋಗಿಸುವುದು ಒಳ್ಳೆಯದು. ಸಾಧಕನು ಇವೆಲ್ಲವನ್ನೂ ತಿಳಿದು ಅದೇ ಮಂತ್ರಬೀಜಗಳಿಂದ ಹೋಮವನ್ನೂ ಸಹ ಮಾಡಿಸಬೇಕು.

೧೫-೧೬. ಪ್ರತಿ ಅವಯವಗಳನ್ನೂ ಪುಷ್ಪಸಹಿತವಾದ ಅಂಗುಷ್ಠದಿಂದ ಸ್ಪರ್ಶಮಾಡಿ, ಹೋಮಭಸ್ಮದಿಂದ ಲೇಪಿಸಬೇಕು. ವಿಶ್ವಸ್ಪೃಕ್ತರ್ಪಣದಿಂದಲೂ, ಸಂಪುಟೀಕರಣದಿಂದಲೂ ಮಧ್ಯೆ ಬರುವ ಅಡ್ಡಿಗಳನ್ನು ಪರಿಹರಿಸಿಕೊಳ್ಳಬೇಕು.

೧೭-೧೮. ಅನಂತರ ದೇವರಸಮೀಪದಲ್ಲಿ ಶಿಷ್ಯನಿಂದ ಮಂತ್ರಾನುಶಾಸನಗಳನ್ನು ನಡೆಸಿ, ಗುರುವು ಶಿಷ್ಯನನ್ನು ಅನುಗ್ರಹಿಸಬೇಕು. ಶಿಷ್ಯನಾದರೋ ಗುರುವನ್ನು ಸಾಕ್ಷಾದ್ದೇವರಂತೆಯೇ ಭಾವಿಸಿಕೊಂಡು, ಸಕಲ ದೇವತೆಗಳಿಗೂ ಪ್ರದಕ್ಷಿಣಾದಿಗಳನ್ನು ನೆರವೇರಿಸಿ, ಅನಂತರ ವಿಸರ್ಜನೆ ಮಾಡಬೇಕು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಎಪ್ಪತ್ತೇಳನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಅಷ್ಟಸಪ್ತತಿತಮೋಽಧ್ಯಾಯಃ

---

ಸಂನ್ಯಾಸಸ್ಯ ತ್ವಹಂ ಮಾರ್ಗಂ ಸಂವಕ್ಷ್ಯೇ ತತ್ವತಃ ಪರಂ ।
ಸಮಯಾದ್ಯಂ ಚ ಪಾಶಾಂತಂ ಕೃತ್ವಾ ತು ಸ್ರಾವಣಾದ್ವ್ರತೇ ॥ ೧ ॥

ನವಪೂಜಾ ಪ್ರಯೋಕ್ತ್ವಾ ಹುತ್ವಾ ಹೋಮಂ ಯಥಾವಿಧಿ ।
ಹೃದಯೇ ಹೃದಯೇ ನ್ಯಸ್ಯ ಹೋಮ ಭಸ್ಮಾದಿನಿರ್ಮಿತಂ ॥ ೨ ॥

ಸ್ವಯೋನೌ ಪಾತಯೇತ್ಸ್ವೇವಂ ಬ್ರಹ್ಮಸೂತ್ರಂ ಸಕರ್ಮಕಂ ।
ಜುಹುಯಾದ್ವಿಶ್ವಸೃಗ್ವಾಗ್ನೌ ವಾಚಯೇದಗೃಹಾಗತಂ ॥ ೩ ॥

---

## ಎಪ್ಪತ್ತೆಂಟನೆಯ ಅಧ್ಯಾಯ

೧-೨. ಈ ಕರ್ಮದ ಅಂತ್ಯದಲ್ಲಿ ತಿಳಿಯಬೇಕಾದ ಸಂನ್ಯಾಸಮಾರ್ಗವನ್ನು ಸಮಯಾದಿಯಾಗಿ ಪಾಶಾಂತವಾದ ಕರ್ಮಾನುಷ್ಠಾನಾನಂತರದಲ್ಲಿ ಮಾಡುವಂತೆ ವಿವರಿಸುವೆನು. ದೇವಪೂಜಾನಂತರ ಹೋಮಮಾಡಿ, ಹೋಮಭಸ್ಮವನ್ನು ಹೃದಯ ಪ್ರದೇಶದಲ್ಲಿ ಲೇಪಿಸಿಕೊಳ್ಳಬೇಕು.

೩-೪. ಬ್ರಹ್ಮಯೋನಿಯಲ್ಲಿ ಅಂತರ್ಗತವಾಗಲಿ ಎಂದು ತನ್ನ ಬ್ರಹ್ಮಸೂತ್ರವನ್ನೂ, ವಿಶ್ವಸೃಗಗ್ನಿಯಲ್ಲಿ (ಸಂಸ್ಕೃತಾಗ್ನಿ) ಹೋಮಮಾಡಿ ಅನಂತರ ಮನೆಯನ್ನು ಪ್ರವೇಶಿಸದೆ ಅಗ್ನಿಪ್ರದಕ್ಷಿಣೆಮಾಡಿ ಅಖಿಲಜಗದ್ವ್ಯಾಪಕನಾದ ಬ್ರಹ್ಮ

ಅಗ್ನಿಂ ಪ್ರದಕ್ಷಿಣೀಕೃತ್ಯ ಭುವನಾನ್ಯಸ್ಯ ಚಾತ್ಮನಿ ।
ಪಿಬೇದ್ಭಸ್ಮೋದಕಂ ಪುಣ್ಯಂ ಬೀಜೇನೈವಾಕ್ಷರೇಣ ಸಃ ॥ ೪ ॥

ಸಂನ್ಯಸ್ತಮಿತಿ ಚ ಬ್ರೂಯಾದಾಚರೇಚ್ಚ ವ್ರತಾನಿ ಚ ।
ಪ್ರದಕ್ಷಿಣಮತಃ ಕೃತ್ವಾ ದೇವಮಗ್ನಿಂ ಗುರುಂ ತಥಾ ॥ ೫ ॥

ಸಶಿಖಂ ವಪನಂ ಕೃತ್ವಾ ತ್ಯಜೇತ್ಸರ್ವಮತಃ ಪರಂ ।
ಸುಖದುಃಖೇ ಸಮೋ ಕೃತ್ವಾ ದೇವಾಲ್ಲೋಕಾಚ್ಚ ತತ್ಪರಃ ॥ ೬ ॥

ಪೂತೋದಕೇನ ಕಾರ್ಯಂ ವೈ ಪಾಣಿಪಾದಂ ಚರೇಚ್ಚನೈಃ ।
ವರ್ಷಾಸು ಶೂನ್ಯಮಾಗಾರಂ ಮೂಲಂ ವೃಕ್ಷಸ್ಯ ನಾಶ್ರಯೇತ್ ॥ ೭ ॥

ಮೌನೀ ಸ್ಯಾತ್ತು ತ್ಯಜೇದ್ದೇಹಂ ಧ್ಯಾಯೇತ ಹೃದಯಾಧಿಪಂ ।
ದೇವಂ ದೃಷ್ಟ್ವಾ ಗುರುಂ ಚಾಪಿ ಮನಸಾ ಪೂಜಯೇಚ್ಚ ಸಃ ॥ ೮ ॥

---

ಸ್ವರೂಪವೇ ತಾನೆಂದು ಭಾವಿಸಿ, ಮೂಲ ಬೀಜಾಕ್ಷರಪುರಸ್ಸರವಾಗಿ ಭಸ್ಮೋದಕ ವನ್ನು ಪ್ರಾಶನಮಾಡಬೇಕು.

೫-೬. ಆಗಲೇ ಸರ್ವವನ್ನೂ ತ್ಯಾಗಮಾಡಿದೆನು ಎಂದು ಪ್ರತಿಜ್ಞೆಮಾಡಿ ದೇವರನ್ನೂ, ಅಗ್ನಿಯನ್ನೂ, ಗುರುವನ್ನೂ ವಂದಿಸಿ, ವಪನಾದಿಗಳಿಂದ ಶಿಖೆಯನ್ನು ತೆಗೆಸಿ, ಸುಖ ದುಃಖಗಳಿಗೆ ಭೇದವೆಣಿಸದೆ ಸರ್ವದಾ ದೇವಸ್ವರೂಪವಾದ ಜಗತ್ತನ್ನು ಅನುಸರಿಸಿ ಕೊಂಡಿರಬೇಕು.

೮–೯. ಅಲ್ಲಿಂದ ಮುಂದೆ ಸರ್ವದಾಪವಿತ್ರವಾದ ನೀರಿನಿಂದಲೇ ಕೈಕಾಲು ಗಳನ್ನು ತೊಳೆದುಕೊಳ್ಳಬೇಕು. ಸರ್ವದಾ ಒಂದೇ ಕಡೆ ಸ್ಥಿರವಾಗಿರಬಾರದು.

ಮಳೆಗಾಲದಲ್ಲಿ ಮಾತ್ರ ನಿರ್ಜನವಾದ ಮನೆಯಲ್ಲಿ ವಾಸಿಸಬಹುದು. ಮರದ ಬುಡದಲ್ಲಿ ವಾಸಮಾಡಕೂಡದು. ಹಾಗೆಯೇ ಸದಾ ಹೃದಯಾಧಿಪನಾದ ಸರ್ವೇಶ್ವರ ನನ್ನೇ ಚಿಂತಿಸುತ್ತಾ ಮೌನದಿಂದಿದ್ದು ಕೊನೆಗೆ ದೇಹತ್ಯಾಗಮಾಡಬೇಕು. ಆಗಾಗ ಮನಸ್ಸಿನಲ್ಲಿ ದೇವರನ್ನೂ ಗುರುವನ್ನೂ ಧ್ಯಾನಿಸುತ್ತಿರಬೇಕು. ಶಿವಮಂತ್ರವನ್ನು

**ಸ ಖಲ್ವಾವರ್ತಯಂಸ್ತ್ವೇವಂ ಶಿವಾಂ ಶುದ್ಧ್ಯತ್ಯಸಂಶಯಂ ।**
**ಪುನರಾವರ್ತಿನೋ ನ ಸ್ಯುಃ ಸ್ಸರ್ವತಂತ್ರಾಧಿಕಾರಿಣಃ ॥ ೯ ॥**
**ಅಥವಾ ಸಂಶಯಾಪನ್ನಂ ಸದ್ಯೋಮುಕ್ತಂ ಸಮಾಚರೇತ್ ।**

**ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇ**
**ಅಷ್ಟಸಪ್ತತಿತಮೋಽಧ್ಯಾಯಃ.**

---

ಆವರ್ತನಮಾಡುತ್ತಿರಬೇಕು. ಇದರಿಂದ ಮನುಷ್ಯನ ಮನಸ್ಸು ಶುದ್ಧಿಗೊಳ್ಳುವುದಲ್ಲದೆ ಪುನರ್ಜನ್ಮವನ್ನು ಪಡೆಯದಂತೆ ಶಾಶ್ವತವಾದ ಮುಕ್ತಿಯನ್ನು ಹೊಂದುವನೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ.

ಇಲ್ಲಿಗೆ ಶ್ರಿ ಸಾಂಬಪುರಾಣದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕೋನಾ ಶೀತಿತಮೋಧ್ಯಾಯಃ

---

ಯದಾ ನಿರ್ವೇದಮಾಪನ್ನೋ ಯಶ್ಚೇಚ್ಛಾಪದಮನ್ವಗಃ ।
ದಸ್ಯುಭಿರ್ನಿಹಿತೇ ರಾಷ್ಟ್ರೇ ಶತ್ರುಣಾ ವಾ ಬಲೀಯಸಾ ॥ ೧ ॥

ಪ್ರಾರ್ಥಿತೇಪಿ ನೃಪೇನಾಥ ಬಲಾನಾಂ ಸಂಭವಾದಪಿ ।
ಜೀರ್ಣೋ ವಿಗತಚೇಷ್ಟೋ ವಾ ಸಂನ್ಯಾಸಾದ್ವಿನಿವರ್ತಯೇತ್ ॥ ೨ ॥

ಅಥಾಗತ್ಯ ಶುಭಂ ಗೋಷ್ಠಂ ಸಂಹಾರಂ ಚ ತ್ರ್ಯಹಂ ಜಪೇತ್ ।
ತತಃ ಸಂಭಾಷ್ಯಯೋಗ್ಯ ಸ್ಸ್ಯನ್ನಮಸ್ಕಾರಾದಿ ಪೂಜನೈಃ ॥ ೩ ॥

---

## ಎಪ್ಪತ್ತೊಂಬತ್ತನೆಯ ಅಧ್ಯಾಯ

೧-೨. ಆದರೆ ಹಿಂದೆ ಹೇಳಿದಂತೆ ಸಂನ್ಯಾಸವನ್ನು ಪಡೆದವನು, ಕಳ್ಳರಿಂದ ತುಂಬಿದ ದೇಶದಲ್ಲಿ, ಶತ್ರುಗಳಿಂದ ಆಕ್ರಾಂತವಾದ ರಾಷ್ಟ್ರದಲ್ಲಿ, ಅಥವಾರಾಜನು· ಕಾರಣಾಂತರಕ್ಕಾಗಿ ಪ್ರಾರ್ಥಿಸಿದರೆ, ಸ್ವಯಂ ವೃದ್ಧನಾಗಿ ಅಶಕ್ತಿಪಡೆದಾಗ, ಇನ್ನೂ ಇತರ ಪ್ರಬಲಕಾರಣಗಳು ಸೇರಿದಾಗ, ಸಂನ್ಯಾಸವನ್ನು ತ್ಯಜಿಸಬಹುದು.

೩-೪. ಹಾಗೆ ಮಾಡುವಾಗ ಹಸುವಿನಕೊಟ್ಟಿಗೆಯಲ್ಲಿ ಮೂರುದಿನ ಸಂಹಾರ ಮಂತ್ರವನ್ನೂ ಜಪಿಸುತ್ತಿದ್ದು, ನಮಸ್ಕಾರಾಂತವಾದ ಪೂಜೆಗಳಿಂದ ದೇವರನ್ನು

ತತಃ ಸ್ನಾತಶ್ಶುಚಿರ್ಭೂತ್ವಾ ದೇವದೇವಂ ಪ್ರಣಮ್ಯ ಚ ।
ವಿಜ್ಞಾಪಯೇತ್ ಕ್ಷಮಸ್ವೇತಿ ರಕ್ಷಾಂ ಮಮ ನಿವರ್ತಯ ॥ ೪ ॥

ಬೀಜಯೋನ್ಯಾಂ ಸಮಾವಾಹ್ಯ ಪೃಥಿವೀಂ ಸಂನ್ಯಸೇದಧಃ ।
ನ್ಯಸೇಚ್ಚ ವರುಣಂ ಮೂರ್ಧ್ನಿ ಯಜೇದ್ದೇವಂ ದಶಾತ್ಮನಾ ॥ ೫ ॥

ಸಂಹಾರಶಕ್ತಿಮಾವಾಹ್ಯ ಚಾತ್ಮನ್ಯಾಸಂ ಪ್ರಯೋಜಯೇತ್ ।
ಸಕಲೀಕೃತ್ಯ ಭೂತೈಶ್ಚ ತಥೈತಾನ್ ಜುಹುಯಾತ್ತತಃ ॥ ೬ ॥

ಶೇಷಂ ತು ಶತಮಾಬಾಹ್ಯಿರದಿಕಂ ತು ಪಿಬೇತ್ತತಃ ।
ತತಃ ಪ್ರಕೃತಿಮಾಪನ್ನೋ ದೀಕ್ಷಾಶಕ್ತಿಮವಾಪ್ನುಯಾತ್ ॥ ೭ ॥

ಪಾರ್ಥಿವೈಃ ಸಕಲೀರಗ್ನೌ ಮಂತ್ರೈರ್ಹೋಮ್ಯಶತಂ ಸ್ಮೃತಂ ।
ವಾರುಣೇನ ತತೋ ಹುತ್ವಾ ಶೇಷಂ ಪಾನಂ ಯಥಾ ಪುರಾ ॥ ೮ ॥

---

ಅರ್ಚಿಸಿ, ಸ್ನಾನಾದಿಗಳಿಂದ ಶುದ್ಧವಾಗಿ, ತನ್ನನ್ನು ಕ್ಷಮಿಸಬೇಕೆಂದೂ, ರಕ್ಷಿಸಬೇಕೆಂದೂ ದೇವರಲ್ಲಿ ಪ್ರಾರ್ಥಿಸಿ, ಇತರರೊಡನೆ ಬೆರೆಯಬಹುದು.

೫-೬. ಬೀಜಯೋನಿಯ ಮಂತ್ರವನ್ನು ಭೂಮಿಯಲ್ಲಿ ಆವಾಹನೆ ಮಾಡಬೇಕು. ಮೂರ್ಧಭಾಗದಲ್ಲಿ ವರುಣದೇವತೆಯನ್ನು ದಶಾತ್ಮಕಮಂತ್ರದಿಂದ ಪೂಜಿಸಬೇಕು. ಸಂಹಾರಶಕ್ತಿಯನ್ನು ಆವಾಹಿಸಿ, ಆತ್ಮನ್ಯಾಸಾಚರಣೆಯಿಂದ ಸಕಲೀಭೂತವಾದ ದೇವರನ್ನು ಮತ್ತೆ ಪೂಜಿಸಬೇಕು. ಅನಂತರ ಅದೇ ಮಂತ್ರಗಳಿಂದ ಹೋಮವನ್ನೆಸಗಬೇಕು.

೭-೮. ಹೀಗೆ ಮಾಡುವುದರಿಂದ ಮಂತ್ರೋಚ್ಚಾರಣೆ ಮತ್ತು ಸೋಮರಸಪಾನ ಇವುಗಳಿಂದ ದೀಕ್ಷಾಶಕ್ತಿಯನ್ನು ಪಡೆದು ಮೊದಲಿನಂತೆಯೇ ದೀಕ್ಷಾಪ್ರದಾನ ಮಾಡುವ ಶಕ್ತಿಸಂಪನ್ನನಾಗುವನು. ಪೃಥವೀದೇವತಾಕವಾದ ಮತ್ತು ವರುಣ

ಬೀಜಯೋನ್ಯಾ ತತಃ ಸ್ತುತ್ವಾ ಪೂಜಾಂ ಕೃತ್ವಾ ಪ್ರಣಮ್ಯ ಚ ।
ಅನುಗ್ರಾಹ್ಯೋಽಸ್ಮಿ ದೇವೇಶ ಕಾಮಂ ಸರ್ವಸಮೃದ್ಧಯೇ ॥ ೯ ॥

ಪೂರ್ವಪಕ್ಷಂ ಕ್ಷಪಾ ಉಕ್ತ್ವಾ ನಿತ್ಯಂ ಸ್ಯಾತ್ಸಮಯಾ ಯಥಾ ।
ಅನೇನ ವಿಧಿನಾ ನ್ಯಾಸಾನ್ನಿವರ್ತನಮನನ್ಯಥಾ ॥ ೧೦ ॥

ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇ
ಏಕೋನಾಶೀತಿತಮೋಽಧ್ಯಾಯಃ.

---

ದೇವತಾಕವಾದ ಮಂತ್ರಗಳಿಂದ ಘೃತಹೋಮಮಾಡಿ ಹವಿಶ್ಶೇಷವನ್ನು ಎಂದಿನಂತೆ ಪ್ರಾಶನಮಾಡಬೇಕು.

೯-೧೦. ಮತ್ತೆ ಬೀಜಯೋನಿಯಿಂದ ಸ್ತುತಿಸಿ, ಪೂಜೆಮಾಡಿ, ನಮಸ್ಕರಿಸಿ, "ಎಲೈ ದೇವದೇವನೇ, ನನ್ನನ್ನು ಅನುಗ್ರಹಿಸಿ ಸರ್ವಸಮೃದ್ಧವಾಗಿ ನನ್ನ ಇಷ್ಟಾರ್ಥವನ್ನು ನೆರವೇರಿಸು" ಎಂದು ಪ್ರಾರ್ಥಿಸಿಕೊಂಡು ಆ ರಾತ್ರಿಯನ್ನು ಇದೇರೀತಿ ಭಕ್ತಿಯಿಂದ ಕಳೆದು ದೀಕ್ಷಾವಿಧಿಯನ್ನು ವಿಸರ್ಜಿಸಬೇಕು.

ಇಲ್ಲಿಗೆ ಸಾಂಬಪುರಾಣದಲ್ಲಿ ಎಪ್ಪತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥಶ್ರೀ ಸಾಂಬಪುರಾಣೇ ಅಶೀತಿತಮೋಽಧ್ಯಾಯಃ

---

ಅಥವಾ ಸಂಶಯಾಪನ್ನಂ ಸದ್ಯೋಮುಕ್ತಿಂ ಸಮಾಚರೇತ್ ।
ದೇವಂ ಸಂಪೂಜ್ಯ ಸಮ್ಯಕ್ಚ ದಕ್ಷಿಣಾಮೂರ್ತಿಮಾಶ್ರಿತಃ ॥ ೧ ॥

ಅಥ ತದ್ದರ್ಶನಾದ್ಧೀರಃ ಸ್ಥಿರಚಿತ್ತೋ ದೃಢವ್ರತಃ ।
ಸ್ವಹೃದಿ ಪುರುಷಂ ನ್ಯಸ್ಯ ಯಥಾಪೂರ್ವಂ ವಿಧಾನತಃ ॥ ೨ ॥

ಆಚಾಂತಃ ಪುನರಾಚಮ್ಯ ಯುಂಜನ್ಮಂತ್ರಾನ್ ಯಥಾಕ್ರಮಂ ।
ವಾಯವ್ಯೇಽಗ್ನಿಂ ನಿವೇಶ್ಯಾಥ ಹ್ಯಾತ್ಮಾನಂ ತತ್ರ ಯೋಜಯೇತ್ ॥ ೩ ॥

ತತಸ್ಸಂಹಾರದೇವೇನ ಸೃಷ್ಟಿಮಾರ್ಗೇರ್ನಿಯೋಜಯೇತ್ ।
ವಿಶೇಚ್ಚ ದೀಶಮಾಪನ್ನೋ ಯೋನಿಂ ಭೂತೇಶಸಂಜ್ಞಿತಾಂ ॥ ೪ ॥

---

## ಎಂಬತ್ತನೆಯ ಅಧ್ಯಾಯ

೧-೨. ಸಾಧಕನು ಸದ್ಯೋಮುಕ್ತಿಯನ್ನು ಪಡೆಯಬೇಕಾದರೆ ಮೊದಲು ಸ್ಥಿರಚಿತ್ತನೆನಿಸಿಕೊಂಡು ಮನಸ್ಸಿನಲ್ಲಿ ಸದಾ ದಕ್ಷಿಣಾಮೂರ್ತಿಸ್ವರೂಪವನ್ನು ಧ್ಯಾನ ಮಾಡಬೇಕು. ಅನಂತರ ದಕ್ಷಿಣಾಮೂರ್ತಿಯನ್ನು ವಿಧಿವತ್ತಾಗಿ ಪೂಜಿಸಿ, ಹಿಂದೆ ಹೇಳಿದಂತೆ ಪರಮಪುರುಷನನ್ನು ದೃಢಚಿತ್ತದಿಂದ ಹೃದಯದಲ್ಲಿ ಧ್ಯಾನಿಸಬೇಕು.

೩-೪. ಆಚಮನಾನಂತರ ಮಂತ್ರಪುರಶ್ಚರಣೆ ಮಾಡಿ ವಾಯುವ್ಯದಿಗಾಗದಲ್ಲಿ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಬೇಕು. ಅನಂತರ ಭೂತೇಶಸಂಜ್ಞಕವಾದ ಯೋನಿಮಂತ್ರವನ್ನುಚ್ಚರಿಸುತ್ತಾ ಈಶ್ವರಾಲಯವನ್ನು ಪ್ರವೇಶಿಸಬೇಕು.

**ಪಾಪಂ ದಹತಿ ಯೋನಿಸ್ಸ ಸಂಹಾರೇಣ ಪ್ರಚೋದಿತಃ ।**
**ತತ್ತ್ವಬೀಜಸ್ಯಕಾಶ್ಯಾನಾತ್ ಕ್ಷಿಪ್ರಂ ವಿಗತಕಲ್ಮಷಃ ॥ ೫ ॥**

**ದಗ್ಧ್ವಾ ಭೂತೇಶಯೋನಿಂ ಸ ಶಿವಯೋನಿಂ ಕ್ರಮಾದ್ವಿಶೇತ್ ।**
**ತತಸ್ತು ಚೈಕಸಂಯುಕ್ತೌ ವಾಯುನಾ ಚಾಚಲೀಕೃತೌ ॥ ೬ ॥**

**ಶಿವಾಗ್ನೀ ಚೇರತುಶ್ಚೈವ ಸರ್ವಭೂತಕ್ಷಯಂಕರೌ ।**
**ತತಸ್ತಸ್ಮಿನ್ ಸಮೀಭೂತೇ ಹೃದಿ ಪ್ರೋಕ್ತೇ ತತೋಽನಲೇ ॥ ೭ ॥**

**ದಹೇಚ್ಛರೀರಂ ಸೋಽಷ್ಟಾಣಿ ಮಂತ್ರಾಣಿ ಪರಮೇಷ್ಠಿನಃ ।**
**ಅಸಂಭಾರಸ್ತತೋ ಮಂತ್ರೀ ದಹ್ಯಮಾನೇನ ಚೇದ್ಧೃದಿ ॥ ೮ ॥**

**ನಾತ್ಮನಾ ವಿಶಯೇದಸ್ತ್ರಂ (?) ವಿಸರ್ಗಾಸ್ತ್ರಂ ಮಕಾರಜಂ ।**
**ದ್ವಾರಾಣಾಂ ಶೀರ್ಷಪಾಪಾನಾಂ ವಿಧಿನಾ ಚ ವ್ಯುಪಸ್ಥಿತಃ ॥ ೯ ॥**

---

೫–೬. ಆ ಭೂತೇಶಯೋನಿಯು ಮನುಷ್ಯನ ಸಕಲ ಪಾಪಗಳನ್ನೂ ಧ್ವಂಸ ಮಾಡಿಬಿಡುವುದು. ಅನಂತರ ತತ್ತ್ವಬೀಜ ಮಂತ್ರಾಚರಣೆಯಿಂದ ಭೂತೇಶ ಯೋನಿಯನ್ನು ತ್ಯಜಿಸಿ, ಶಿವಯೋನಿಯನ್ನು ಅವಲಂಬಿಸಬೇಕು. ವಾಯುಮಂತ್ರ ಪುರಶ್ಚರಣೆಯಿಂದ ಅದನ್ನು ಸ್ವೀಕರಣಮಾಡಿಕೊಳ್ಳಬೇಕು.

೭-೮. ಶಿವ ಮತ್ತು ಅಗ್ನಿ ಈಯೋನಿಗಳು ಸರ್ವಭೂತವನ್ನೂ ನಾಶಮಾಡ ತಕ್ಕವುಗಳು. ಆದರಿಂದ ದೇಹವನ್ನು ಸಮಸ್ಥಿತಿಗೆ ತಂದುಕೊಂಡು ಬ್ರಹ್ಮದೇವತಾ ತ್ಮಕವಾದ ಮಂತ್ರಗಳನ್ನುಚ್ಚರಿಸುತ್ತಾ ಅಗ್ನಿಪ್ರವೇಶ ಮಾಡಬೇಕು. ಮಂತ್ರಜ್ಞನು ತನ್ನ ಹೃದಯವು ಸುಡುತ್ತಿರುವಾಗ ಯಾವ ವಿಧವಾದ ಆಸೆಯನ್ನೂ ಇಟ್ಟು ಕೊಳ್ಳದೆ ಆತ್ಮಧ್ಯಾನಮಾಡುತ್ತಿರಬೇಕು.

೯-೧೦. ಆತ್ಮಮಂತ್ರದಿಂದ ಅಗ್ನಿಯನ್ನು ಪ್ರವೇಶಿಸಬೇಕು. ಅಸ್ತ್ರಮಂತ್ರ ಗಳು ಸಕಲ ಪಾಪಗಳನ್ನೂ ನಿವಾರಿಸುವುವು. ಅಥವಾ ದೇಹದಲ್ಲಿಯೇ ಸಕಲ ದ್ವಾರ

**ರುದ್ಧಮಾರ್ಗಸ್ತತೋ ವಹ್ನಿರ್ವಿದುಷಾ ಕ್ರತುಶತಾಲುಭಿಃ ।**
**ಭಿತ್ವಾ ಮೂರ್ಧ್ನಿ ಕಪಾಲಂ ತು ವಿಶತಾವ್ಯಯಮೀಶ್ವರಂ ।**
**ಯಂ ಪ್ರಾಪ್ಯ ನ ನಿವರ್ತೇತ ಯೋಗಿನಃ ಪರಮಂ ಶಿವಂ ॥ ೧೦ ॥**

**ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇ ಅಶೀತಿತಮೋಽಧ್ಯಾಯಃ.**

---

ಗಳನ್ನೂ ಯೋಗಮಾರ್ಗದಿಂದ ಬಂಧಿಸಿದರೆ, ಆಗ ಪ್ರಾಣವಾಯುವು ಕಪಾಲವನ್ನು ಅಂದರೆ ನಡುದಲೆಯನ್ನು ಭೇದಿಸಿಕೊಂಡು ಅವ್ಯಯವೂ, ಪುನರಾವೃತ್ತಿರಹಿತವೂ, ಆದ ಬ್ರಹ್ಮಸ್ವರೂಪವನ್ನು ಪಡೆದು ಆನಂದಮಯತೆಯನ್ನು ಹೊಂದುವುದು. ಇದನ್ನೇ ಸದ್ಯೋಮುಕ್ತಿಯೆನ್ನುವರು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಎಂಭತ್ತನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕಾಶೀತಿತಮೋಽಧ್ಯಾಯಃ

---

ಏತೇಷಾಂ ಪರಮಾನ್ಯೋಗಃ ಸಂವತ್ಸರತನುಂ ಸ್ಥಿತಃ ।
ಅಷ್ಟಾನಾಮಾನುಪೂರ್ವ್ಯೇಣ ಭಿನ್ನಾ ಭಿನ್ನಾರ್ಥವೇದನೇ ॥ ೧ ॥

ಪ್ರತಿಲೋಮವಿಧಿಃ ಪ್ರೋಕ್ತೋ ದೀಪಯೇತ್ಸ್ವರ್ಶಯೇತ್ಸುಖಂ ।
ಚತುರ್ವಿಂಶತ್ತಥಾ ವಹ್ನಿಂ ತ್ರಿಯೋಗೇನ ಚ ಸಾಧಕಃ ॥ ೨ ॥

ವ್ಯಂಜನಂ ಚ ವಿಸರ್ಗಸ್ಥಮಾದಾವಂತಲುಪಾಶ್ರಿತಂ ।
ಅಂತತೋ ಬಿಂದುಸಂಯುಕ್ತಮಾಕಾರೇಣ ತದೇವ ತು ॥ ೩ ॥

---

## ಎಂಭತ್ತೊಂದನೆಯ ಅಧ್ಯಾಯ

೧-೨. ಇಲ್ಲಿನವರೆಗೂ ಹೇಳಿದ ಯೋಗವು ಸಾಂವತ್ಸರವಿಧಿಯನ್ನು ಅನುಸರಿಸಿದುದಾಗಿರುವುದು. ಇದರ ಅನುಪೂರ್ವಿಯನ್ನೂ ಕ್ರಮವನ್ನೂ, ಕ್ರಮವಾದ ರೀತಿಯಲ್ಲಿ ವಿವರಿಸುವೆನು. ಇನ್ನು ಇದರ ಪ್ರತಿಲೋಮವೆಂದರೆ ಅಗ್ನಿತ್ರಯಗಳ ಯೋಗದಿಂದ ಇಪ್ಪತ್ತುನಾಲ್ಕು ವಿಧಿಗಳನ್ನಾಗಿ ಭಾವಿಸುವುದು.

೩-೪. ಅಂತ್ಯದಲ್ಲಿ ಬಿಂದುಸಹಿತವಾದ ಆಕಾರವೂ, ಮಧ್ಯದಲ್ಲಿ ಸಕಲ ವ್ಯಂಜನಗಳು ವಿಸರ್ಗಸಹಿತವಾಗಿಯೂ, ಇಪ್ಪತ್ತೆರಡು ಅಕ್ಷರಗಳು ಹನ್ನೊಂದುಸಾಲಿನಲ್ಲಿ ಬರುವಂತೆಯೂ ಬರೆಯಬೇಕು. ಇವುಗಳಿಗೆ ದೀಪನವಾಗಿ ಓಂಕಾರ, ವಷಟ್ಕಾರ

ದ್ವಾವಿಂಶತ್ಯಂತರಾ ಯುಕ್ತಾ ಕ್ರೂರೇಣೈಕಾದಶೇನ ಚ ।
ಓಂಕಾರಂ ಚ ವಷಟ್ಕಾರಂ ಯದಾ ನ್ಯೈತದದೀಷ್ಯತೇ ॥ ೪ ॥

ಅಂತಸ್ಸ್ಥಾಶ್ಚ ಶಲಾಕಾಂತೇ ಸಂಯೋಜ್ಯಾದೂಷ್ಮಣಾಪಿ ಚ ।
ಉತ್ತಮಸ್ಪರ್ಶಯುಕ್ತಾನಿ ಸುಷುಮ್ನಾಂತರ್ಗತೋ ಮತಃ ॥ ೫ ॥

ಕ್ಷುರಿಕಾ ಕರ್ತರೀ ಚೈಕಾ ಲೋಕಾಚ್ಚೈಕಸ್ಥಕಾಂತಗಾಃ ।
ಪ್ರಸವೇ ಯೋಜಯೇದೇತತ್ಪ್ರತಿಮಂತ್ರಂ ತ್ರಿಕಂ ತು ವೈ ॥ ೬ ॥

ತ್ರಿಸ್ರಷ್ಟ್ರಿ ಸ್ರಸ್ತಥಾ ಚೈವಮೇಕೈಕಸ್ಯ ಪೃಥಕ್ ಪೃಥಕ್ ।
ಊರ್ಧ್ವಂ ತಸ್ಯ ಚ ವಕ್ತ್ರಾದೇರ್ಯೋಗಃ ಸ್ಯಾತ್ಪ್ರತಿನಿರ್ಮಿತಃ ॥ ೭ ॥

ಮಂತ್ರಾಣಾಂ ಸಾಧನೈಃ ಸೂಕ್ಷ್ಮದ್ರವ್ಯಾಣಾಂ ರಕ್ಷತಃ ಪರಃ ।
ಪ್ರಾಣಾನಾಂ ಚಾಲನೇ ಚೈವ ನಿತ್ಯಂ ಯೋಜ್ಯಾದ್ಯನುಕ್ರಮಾತ್ ॥ ೮ ॥

---

ಇವುಗಳನ್ನು ರೇಖೆಯಕೊನೆಯಲ್ಲಿ ಅಂತಸ್ಥ ವರ್ಣಗಳನ್ನೂ ಊಷ್ಮವರ್ಣಗಳನ್ನೂ ವಿನ್ಯಾಸಮಾಡಬೇಕು. ಇವೆಲ್ಲವೂ ಸುಷುಮ್ನಾಂತರ್ಗತವೆಂದು ಭಾವಿಸಿ ಸುಷುಮ್ನಾ ನಾಡಿಯಲ್ಲಿ ನಿರೋಧಮಾಡಬೇಕು. ಇದೇ ಚತುರ್ವಿಂಶದಗ್ನಿ ಯೋಗ.

೬-೭. ಪ್ರತಿ ಮಂತ್ರದ ಆದಿ ಮತ್ತು ಕೊನೆಯ ಭಾಗಗಳಲ್ಲಿ ಕತ್ತಿ, ಕತ್ತರಿ ಈ ಆಕಾರಗಳನ್ನು ರಚಿಸಬೇಕು. ಮೂರುಮೂರು ಸಾಲುಗಳಿಗೆ ಆದ್ಯಂತಗಳನ್ನು ಕಲ್ಪಿಸಿಕೊಳ್ಳಬೇಕು. ಆದಿಯಕ್ಷರವನ್ನೇ ವಕ್ತ್ರವೆಂದು ಭಾವಿಸಬೇಕು.

೮-೯. ಸೂಕ್ಷ್ಮದ್ರವ್ಯಗಳ ರಕ್ಷಣೆ, ಪ್ರಾಣಚಾಲನೆ, ಮುಂತಾದ ಕರ್ಮಗಳಿಗಾಗಿ ಇದನ್ನು ನಿತ್ಯವೂ ರಚಿಸಬೇಕು. ಛುರಿಕಾಯೋಗವು ಆಸನದಲ್ಲಿಯೂ,

ಆಸನೇ ಕ್ಷುರಿಕಾಂ ದತ್ವಾ ತತೋ ಮಂತ್ರಂ ಪ್ರಯೋಜಯೇತ್ ।
ಶಲಾಕಾ ಪೂಜನೇ ಯೋಜ್ಯಾ ದತ್ವಾ ಚೈವಾನುಕರ್ತರೀ ॥ ೯ ॥

ಅಗ್ನೇರರ್ಚಾವಿಧಾನೇಷು ದೀಪನೇ ಚಾಭಿಷೇಚನೇ ।
ಜಪೇತ್ತಥಾ ವೈ ಧ್ಯಾನೇಷು ಮಂತ್ರೇ ಚ ಪರಮೋ ವಿಧಿಃ ॥ ೧೦ ॥

ಶಮೀಬಿಲ್ವಪಲಾಶಂ ಚ ತಥಾ ದೂರ್ವಾಸಿತಾಸ್ತಿಲಾಃ ।
ದರ್ಭಾ ಸುಮನಸಾಂ ಚೈವ ಗಣಾಸ್ಸ್ಯುಶ್ಶಾಂತಿಕರ್ಮಣಿ ॥ ೧೧ ॥

ಯೋಜ್ಯಾ ಕ್ಷೀರೇಣ ಚ ತಥಾಽಪ್ಯಾಪುಷ್ಪವೃಕ್ಷಯೋರ್ನಯಃ ।
ಅವೃಕ್ಷಃ ಕಿಂಶುಕೋ ವೃಕ್ಷೋ ನಿತ್ಯಮೇಷ ಧನಪ್ರದಃ ॥ ೧೨ ॥

ಕರವೀರಕನಕಶ್ಚೈವ ಕಲಕ್ಷೇತ್ರಂ ಚ ದಾಯಕಃ ।
ಪ್ರಿಯಂಗುಲೋಧ್ರಪುಷ್ಪಂ ಚ ಮೃತ್ಯೋಸ್ತೈಲವಿಷಾಸ್ಯತಾ ॥ ೧೩ ॥

---

ಶಲಾಕಾಯೋಗವು ಪೂಜೆಯಲ್ಲಿಯೂ, ಯೋಗವು ದಾನಾದಿಗಳಲ್ಲಿಯೂ ವಿಹಿತ ವೆನಿಸಿದೆ. (ಮುಂದೆ ಹೇಳುವ ಕ್ಷುರಿಕಾ, ಕರ್ತರೀ ಮಂತ್ರಗಳನ್ನು ಆಯಾ ಕಾಲ ಗಳಲ್ಲಿ ಉಚ್ಚರಿಸಬೇಕು.)

೧೦-೧೧. ಅಗ್ನ್ಯರ್ಚನೆಯಲ್ಲಿಯೂ, ದೀಪನ ಮತ್ತು ಅಭಿಷೇಚನಾದಿಕ್ರಿಯೆ ಗಳಲ್ಲಿಯೂ, ಪರಮ ಮಂತ್ರಜಪದಲ್ಲಿಯೂ ಶಲಾಕಾಯೋಗವನ್ನು ಅನುಷ್ಠಿಸಬೇಕು. ಬನ್ನೀ , ಬಿಲ್ವ, ಮುತ್ತುಗ, ಗರಿಕೆಯುಲ್ಲು, ಎಳ್ಳು, ದರ್ಭೆ, ಹೂವು, ಇವುಗಳನ್ನು ಶಾಂತಿಕರ್ಮಗಳಲ್ಲಿ ಉಪಯೋಗಿಸಬೇಕು.

೧೨-೧೩. ಹಾಲುಬರುವಂತಹ ವೃಕ್ಷಗಳಿಂದ ಉದ್ಭವಿಸಿದ ಸಮಿತ್ತು, ಪುಷ್ಪ, ಇವುಗಳನ್ನು ಉಪಯೋಗಿಸಬೇಕು. ಆದರೆ ಮುತ್ತುಗದ ಹೂವುಗಳನ್ನು ಬಳಸ ಬಾರದು. ಏಕೆಂದರೆ ಅದು ವೃಕ್ಷವೆನಿಸಿಲ್ಲ. ಹೊಂಬಣ್ಣದವೆನಿಸಿರುವ ಕಣಿಗಲು ಹೂವು, ಫಲಸಹಿತವಾದ ಭೂಮಿಯನ್ನು ಒದಗಿಸತಕ್ಕದ್ದು. ಪ್ರಿಯಂಗು (ನವಣೆ) ಲೋಧ್ರಪುಷ್ಪ, (ಹಿಪ್ಪೆಹೂವು) ಇವು ಮೃತ್ಯುವಿಗೆ ಪ್ರೀತಿಕರವಾದವುಗಳು.

ಶತಪುಷ್ಪಾಣಿ ಬೀಜಾನಿ ಲವಣಂ ಮಾಂಸಮೇವ ಚ ।
ಮಲ್ಲಿಕಾದಿಜಪುಷ್ಪೈಃ ಸರ್ವೈರ್ಯೋಜ್ಯಸ್ಸ್ಯಾದ್ಧೋಮಕರ್ಮಣಿ ॥ ೧೪ ॥

ಕಾಕೋಲೂಕಸ್ಯ ಪಕ್ಷಾಣಿ ಯೇಷಾಂ ದ್ವೇಷಂ ಚ ಸರ್ವದಾ ।
ದ್ವಂದ್ವಾನಾಂ ತು ತಥಾ ತೇಷಾಂ ಮೃಗಜೈರ್ದ್ವರ್ಣಾಂತರಂ ॥ ೧೫ ॥

ವಿಭೀತಕಃ ಖಾದಿರಶ್ಚ ಸಹಚರೋ ವಾಸಕಸ್ತಥಾ ।
ವಿದ್ವೇಷೇ ತು ತಥಾ ಕ್ರೂರೇ ಇಧ್ಮಂ ತೂಚ್ಚಾಟನೇಷು ಚ ॥ ೧೬ ॥

ಉಕ್ತಾ ಸ್ವಲ್ಪವಿಧಾನೇಷು ಪರತಂತ್ರೇಷು ಯೇ ಚ ವೈ ।
ಸರ್ವೇ ತೇನೈವ ಸಿದ್ಧ್ಯಂತಿ ವಿಧಿಯುಕ್ತೋದಿತೈಃ ಪರೈಃ ॥ ೧೭ ॥

ಅರಸಾ ಬಾಹ್ಯಬೀಜಾ ವಾ ಯೋಜ್ಯಾಶ್ಚ ಸರ್ವಕರ್ಮಣಿ ।
ದೃಷ್ಟ್ವಾ ತು ವಿಧಿನಾ ಮಂತ್ರಂ ವ್ಯೋಮಸ್ಥಂ ವಾ ಮಹೀಗತಂ ॥ ೧೮ ॥

---

೧೪-೧೫. ಕಮಲ, ವೃಕ್ಷಗಳ ಬೀಜಗಳು, ಉಪ್ಪು, ಮಾಂಸ, ಮಲ್ಲಿಗೆಹೂ ದಾಸವಾಳದ ಹೂವು, ಇವುಗಳನ್ನು ಹೋಮಕಾರ್ಯಕ್ಕೆ ಉಪಯೋಗಿಸಬೇಕು. ಕಾಗೆ, ಗೂಬೆಗಳ ಗರಿಗಳು, ಅಥವಾ ಬೇರೆ ಬೇರೆ ವರ್ಣದ ಮತ್ತು ಪರಸ್ಪರ ದ್ವೇಷದಿಂದಿರುವ ಮೃಗಗಳ ಪುಕ್ಕಗಳು ಇಲ್ಲಿ ಉಪಯುಕ್ತಗಳಾಗುವುವು.

೧೬-೧೭. ವಿಭೀತಕ (ತಾಂಡ್ರೀಮರ) ಕಗ್ಗಲಿ, ಸಹಚರ (ಮುಳ್ಳುಗೋರಂಟಿ) ವಾಸಕಕೆ (ಅಡ್ಡಸರದಗಿಡ) ಮುಂತಾದವೃಕ್ಷಗಳ ಸಮಿತ್ತನ್ನು, ದ್ವೇಷಸಾಧನೆಗಾಗಿ ಮಾಡುವ ಕರ್ಮಗಳಲ್ಲಿಯೂ, ಉಚ್ಚಾಟನಾದಿ ಕರ್ಮಗಳಲ್ಲಿಯೂ, ಉಪಯೋಗಿಸಬೇಕು. ಸ್ವಲ್ಪ ಫಲಕ್ಕಾಗಿಯಾದರೂ ಅಥವಾ ಪರಪ್ರಯೋಜಕವಾಗಿಯೂ ಮಾಡುವ ಸಕಲ ಕರ್ಮಗಳಲ್ಲಿಯೂ ಆಯಾ ವಿಧಿಯುಕ್ತವಾದ ಫಲಗಳನ್ನು ಮೇಲೆ ಹೇಳಿದ ಇಧ್ಮಗಳಿಂದಲೇ ಸಾಧಿಸಬಹುದು.

೧೮-೨೦. ರಸರಹಿತವಾಗಿ ಹೊರಗಡೆ ಬಿದ್ದಿರುವ ಬೀಜಗಳನ್ನು ಸಕಲ ಕರ್ಮಗಳಿಗೂ ಉಪಯೋಗಿಸಬಹುದು. ಅದು ನೆಲದ ಮೇಲೆ ಬಿದ್ದಿದ್ದರೂ ಅಥವಾ

ತತ್ಸರ್ವಂ ಸಾಧಯೇತ್ತೂರ್ಣಂ ಯದುಕ್ತಂ ಕಲ್ಪಕಲ್ಪಿಕೈಃ ।
ನ ಚ ಶಕ್ತಿಪರೀಚಾರೇ ಮಂತ್ರಾಂತೇ ಕ್ರಮಶಸ್ತತಃ ॥ ೧೯ ॥

ಮಂತ್ರಸಂಪುಟಯೋಗೇನ ಸಾಧಯೇಚ್ಛ ಶಲಾಕಯಾ ।
ಶಕ್ರಂ ತು ಕಮಲೇ ಯೋಗಾಸ್ಪರ್ಶೈಃ ಶಕ್ತಿನಿರಾವೃತಂ ॥ ೨೦ ॥

ಕ್ಷುರಿಕಾ ಕರ್ತರೀ ಯುಕ್ತಾ ದಕ್ಷಿಣಾನಿರ್ವಾಣಮಾವಹೇತ್ ।
ಅಗ್ನಿಪಂಚಕಯೋಗಾಂತೇ ಲಿಂಗೇ ವೈ ಸ್ತಂಡಿಲೇಥ ವಾ ॥ ೨೧ ॥

ಲಕ್ಷತ್ರಯಸ್ಯ ವೈ ಯೋಗಾತ್ ಸಾಧಯೇತ್ಪರಮೋಕ್ಷಿನಂ ।
ಶಿಲಾತಲೇ ತು ವೈ ಶ್ರೇಷ್ಠೇ ಕ್ರಿಯಾಕಾರಣಸಾಧಕಃ ॥ ೨೨ ॥

ಆದಿತ್ಯಸ್ಯ ನಿಮಿತ್ತಾತ್ಸ್ಯಾತ್ ಸಾಧನಂ ಮುನ್ಮಿಲೋಕ್ಷಿಕಂ ।
ಭೂತೇಶಂ ನಿಶಿ ವಾಘೋರೇ ವಾಯುಭಕ್ಷೋ ಜಲಾಶಿತಃ ॥ ೨೩ ॥

---

ಗಿಡದಮೇಲೆಯೇ ಇದ್ದರೂ ಆಗಬಹುದು. ಇವುಗಳೆಲ್ಲವನ್ನೂ, ಪ್ರತಿಕಲ್ಪಕ್ಕೂ ಸಂಪಾದಿಸಿಕೊಂಡು, ಮಂತ್ರಸಂಪುಟಯೋಗವನ್ನು ಶಲಾಕೆಯಿಂದಲೇ ಅಭಿಮಂತ್ರಿಸುತ್ತಾ ಇಂದ್ರದೇವತೆಯನ್ನು ಕಮಲದಲ್ಲಿ ಆವಾಹಿಸಿ ಶಕ್ತಿ ದೇವತಾಭಿಮಂತ್ರಣಗಳಿಂದ ಮುಂದುವರಿಸಬೇಕು.

೨೧-೨೨. ಕ್ರಿಯಾ ಕಾರಣಸಾಧಕನಾದವನು ಅಂದರೆ ಸಕಲ ಮಂತ್ರಸಿದ್ಧಿಗೂ ಬೇಕಾದ ಶಕ್ತಿಯನ್ನಾರ್ಜಿಸುವವನು. ಕ್ಷುರಿಕಾ, ಮತ್ತು ಕರ್ತರೀ ಸಂಬಂಧವಾಗಿರುವ ಅಗ್ನಿಪಂಚಕವನ್ನು ನಿರ್ಮಿಸಿಕೊಂಡು, ಶಿವಲಿಂಗವನ್ನಾಗಲೀ, ಸ್ಥಂಡಿಲವನ್ನಾಗಲೀ, ಶಿಲಾತಲವನ್ನಾಗಲೀ ಮಧ್ಯದಲ್ಲಿ ರಚಿಸಿಕೊಳ್ಳಬೇಕು. ಅಲ್ಲಿ ಲಕ್ಷತ್ರಯ ಪರಿಮಿತಿಯುಳ್ಳ ಪ್ರಣವಯೋಗವನ್ನು ಸಾಧಿಸಬೇಕು.

೨೩-೨೪. ಆದಿತ್ಯ ದೇವತಾಪ್ರಸಾದಸಾಧನೆಗಾಗಿ ಉಷಃಕಾಲವನ್ನು ಬಳಸಬೇಕು. ಅರ್ಧ ರಾತ್ರಿಯಲ್ಲಿ ಅನಿಲಾಹಾರದಿಂದಲೋ ಜಲಪಾನದಿಂದಲೋ, ಭೂತ

ಸಾಧಯೇತ್ಸಾಧನಾಯುಕ್ತೋ ದೇಹೇ ಮಂತ್ರೀ ಚ ವೈ ಕ್ಷಣಾತ್ ।
ಬೀಜೇಶವರ್ಣಾಸರ್ವೈವ ಶ್ಮಶಾನಭಕ್ಷ್ಯಭೋಜನೇ ॥ ೨೪ ॥

ಅಪಕ್ವಾಶೀ ಲಬ್ಧಪ್ರಭುರ್ದೇಹೋ ದೇಹಸ್ಯ ಸಾಧನೇ ।
ಅಶೀತಸಿಕತಾಜ್ಯೇಷ್ಠೇ ಜಪೇತ್ಸ್ಯಷ್ಟಿಂ ಘೃತಪ್ಲುತಃ ॥ ೨೫ ॥

ಜಪಾಂತೇ ದೀಪಯೇನ್ಮಂತ್ರೀ ಹ್ಯಷ್ಟಶಾಂತಿರ್ಯಥಾ ಶಿವಃ ।
ಚರಿತ್ವಾ ಬ್ರಹ್ಮಚರ್ಯಂಚ ಭಸ್ಮಶಾಯೀ ಯವಾಶನಃ ॥ ೨೬ ॥

ಭಸ್ಮನಾ ಸಿದ್ಧಿಮಾಪ್ನೋತಿ ಭಸ್ಮನಿಷ್ಠಸ್ಸುಸಾಧಕಃ ।
ಭಾಸ್ಕರಸ್ಯ ವ್ರತಂ ಹ್ಯೇತದಂತೇಹ್ಯುಕ್ತಂ ಕ್ರಮಾಗತಂ ॥ ೨೭ ॥

---

ಪತಿಯಾದ ಪರಶಿವನನ್ನು ಧ್ಯೇಯುವನ್ನಾಗಿ ಮಾಡಿಕೊಂಡು ಜಪಮಾಡಬೇಕು. ಈ ಕಾರ್ಯಗಳೆಲ್ಲವನ್ನೂ ಶ್ಮಶಾನದಲ್ಲಿಯೇ ನಡೆಸುತ್ತಾ ಭಕ್ಷ್ಯಭೋಜ್ಯಾದಿಗಳನ್ನು ಶ್ಮಶಾನದಲ್ಲಿಯೇ ನಡೆಸಿಕೊಳ್ಳಬೇಕು.

೨೫-೨೬. ಅನಂತರ ಬೇಯಿಸದಿರುವ ಪದಾರ್ಥಗಳನ್ನು ತಿನ್ನುತ್ತಾ ಬಿಸಿಯಾಗಿರುವ ಮರಳಿನಲ್ಲಿಕುಳಿತು, ತುಪ್ಪವನ್ನು ಬಳಿದುಕೊಂಡು, ಜಪಮಾಡಬೇಕು. ಅನಂತರ ಜಪಾಂತ್ಯದಲ್ಲಿ ಅಷ್ಟಶಾಂತಿಮಂತ್ರವನ್ನು ಜಪಿಸುತ್ತಾ, ದೀಪನಮಂತ್ರ ಜಪಮಾಡಬೇಕು. ಹಾಗೆಯೇ ಬ್ರಹ್ಮಚರ್ಯೆಯಿಂದ ವಾಸಿಸುತ್ತಾ ಯವಧಾನ್ಯವನ್ನು ತಿನ್ನುತ್ತಾ ಭಸ್ಮಶಾಯಿಯಾಗಿರಬೇಕು.

೨೭-೨೮. ಸಾಧಕನಾದವನು, ಭಸ್ಮದಿಂದ ಸಿದ್ಧಿಯನ್ನು ಪಡೆಯಬಹುದು. ಭಸ್ಮದಲ್ಲಿ ಆಸಕ್ತನಾಗಿಯೇ ಸಕಲ ಸಿದ್ಧಿಗಳನ್ನು ಪಡೆದಾನು. ಹಾಗೆಯೇ ಸೂರ್ಯ ವ್ರತವನ್ನು ಸಮಾಪ್ತಿಗೊಳಿಸಬೇಕು. ಅನಂತರ ಕ್ರಮಸಂಕ್ರಾಂತಿಯಿಂದ ವಿದ್ಯೇಶ

ಕ್ರಮಾತ್ಸಂಕ್ರಮಣಂ ಚೈವ ಕ್ರಮಾದ್ವಿದ್ಯೇಶತಾಂ ವ್ರಜೇತ್ ।
ಸಂಕ್ರಮೇದ್ದೇಹಮಾಕ್ಷಿಪ್ಯ ದೃಷ್ಟ್ವೈವಂ ಕ್ರಮಯೋತ್ಪರಾನ್ ॥ ೨೮ ॥

ಇಚ್ಛಯಾ ವಿಚರೇನ್ಮಂತ್ರೀ ವ್ರತಾಂತೇ ಬೀಜವರ್ತ್ಮನಿ ।
ಯದುಕ್ತಾ ಮಂತ್ರಕೋಷ್ಠೇ ತು ತಸ್ಮಿನ್ ಶಾಸ್ತ್ರೇಹ್ಯನೇಕಶಃ ॥ ೨೯ ॥

ಕಂದಮೂಲಫಲಂ ಪತ್ರಮಚ್ಛಿನ್ನಂ ಛಿನ್ನಮೇವ ಚ ।
ಅಶಕ್ತೋ ವಿಧಿರುಕ್ತೋಽಯಮಷ್ಟೌ ಗ್ರಾಸಾನುಪಾನಯೇತ್ ॥ ೩೦ ॥

ಭೈಕ್ಷಂ ವಾ ವಿಧಿಸಂಪನ್ನಂ ಮಂತ್ರ್ಯೈಃ ಸಂಪಾನವರ್ಜಿತಂ ।
ಪಾವಕಂ ವಿಧಿವತ್ಸಿದ್ಧಂ ಕುರ್ಯಾನ್ಮಂತ್ರಸ್ಯ ಸಾಧನೇ ॥ ೩೧ ॥

ಪೂಜಾ ಮಂತ್ರಸ್ಯ ವೈ ಮಂತ್ರೀ ಸಂವತ್ಸರತನುಸ್ಥಿತೈಃ ।
ವ್ಯೋಮಸ್ಥಂ ವಾ ತಥಾಗ್ನಿಸ್ಥಂ ಕುರ್ಯಾತ್ಪೂರ್ವಂ ಯಮೇನ ವೈ ॥ ೩೨ ॥

---

ಸ್ವಭಾವವನ್ನು ಪಡೆಯಬಹುದು. ದೇಹಿಯಾಗಿ ಅಂದರೆ ವ್ರತಾನಂತರ ಕೆಲವು ಪ್ರದೇಶಗಳಲ್ಲಿ ಸಂಚರಿಸಬೇಕು.

೨೯-೩೦. ಮಂತ್ರಕೋಷ್ಠಗಳೆಂದು ಹೇಳಲ್ಪಡುವ ಸ್ಥಳವಿಶೇಷಗಳಲ್ಲಿ ಬೀಜ ಮಂತ್ರಗಳನ್ನು ಪುರಶ್ಚರಣೆ ಮಾಡುತ್ತಾ, ಕಂದಮೂಲ ಫಲಗಳನ್ನು ಅಥವಾ ಹೊಸ ಮತ್ತು ಹಳೆಯ ಎಲೆಗಳನ್ನು ಭಕ್ಷಿಸುತ್ತಾ ಅಷ್ಟಗ್ರಾಸಗಳನ್ನು ಭುಜಿಸಬೇಕು.

೩೧-೩೨. ಭಿಕ್ಷಾನ್ನದಿಂದಾಗಲಿ, ಪಾನವರ್ಜಿತವಾದ ಇತರ ಆಹಾರದಿಂದಾಗಲೀ, ಜೀವಿಸಬಹುದು. ವಿಧಿವತ್ತಾಗಿ ಅಗ್ನಿಪೂಜೆಯನ್ನು ಮಾಡಿ, ಸಂವತ್ಸರ ತನುವನ್ನು ಹಿಂದೆ ಹೇಳಿದಂತೆ ನಡೆಸಬೇಕು. ಯಮತಂತ್ರವನ್ನು ವ್ಯೋಮಸ್ಥವಾಗಿಯೋ ಅಥವಾ ಅಗ್ನಿಸ್ಥವಾಗಿಯೋ ಇದ್ದು ನಡೆಸಬೇಕು.

ಅನುಲೋಮಾದ್ಧೃದಯಂ ಸ್ಯಾತ್ಕ್ಷುರಿಕಾಕರ್ಮಭೇದಿನೀ ।
ಕರ್ತರೀಕವಚಂ ಘೋರಂ ಶಲಾಕಾತ್ರಯಮೇವ ಚ ॥ ೩೩ ॥

ಅರ್ಗಲಸ್ತು ಶಿರಃ ಸೌಮ್ಯಃ ಸ್ವಕಾ ಯೋನಿಃ ಶಿಖಾಪರಾಃ ।
ಪ್ರತಿಮಾಸ್ಥಾಃ ಪರಾ ಏತಾ ಹ್ಯಷ್ಟೌ ತಾಃ ಶಕ್ತಿಯೋನಯಃ ॥ ೩೪ ॥

ಪೂರ್ವಪಶ್ಚಿಮಯೋಶ್ಚೈವ ದಕ್ಷಿಣೋತ್ತರಯೋಸ್ತಥಾ ।
ವಿದಿಕ್ಷು ಚಾನುಪೂರ್ವೇಣ ಸ್ವರಾನ್ ಸಂಪೂಜಯೇತ್ಕ್ರಮಾತ್ ೩೫ ॥

ಪ್ರತ್ಯಹಂ ಯಜನಂ ಕುರ್ಯಾದ್ರಾತ್ರೌ ವಾ ಪಿ ಹಿ ಸಾಧಕಃ ।
ದ್ರವ್ಯಾಭಾವೇ ಜಪೇನಾಪಿ ಸಾಧಯೇನ್ಮಂತ್ರತತ್ಪರಃ ॥ ೩೬ ॥

ಚತುಷ್ಕಂ ಸಾಧಯೇನ್ನಿತ್ಯಂ ಏಕೈಕಸ್ಯ ಪೃಥಕ್ಪೃಥಕ್ ।
ಕ್ಷುರಿಕಾದಿಶಲಾಕಾಂತಾಮರ್ಗಲಾಂ ಚೈವ ಸಾಧಕಃ ॥ ೩೭ ॥

---

೩೩-೩೪. ಕ್ಷುರಿಕಾ ಕರ್ಮವನ್ನು ಸೂಚಿಸುವ ಹೃದಯ ವಿನ್ಯಾಸಗಳನ್ನು ನಡೆಸಬೇಕು. ಅದರಲ್ಲಿ ಕರ್ತರೀ, ಕವಚ, ಘೋರ, ಮುಂತಾದ ಮೂರು ಶಲಾಕೆಗಳನ್ನು ಸ್ಥಾಪಿಸಬೇಕು. ಅದರಲ್ಲಿ ಅರ್ಗಲ, ಶಿರ, ಸೌಮ್ಯ, ಸ್ವಕಾ, ಯೋನಿ, ಶಿಖಾ, ಪದಾ, ಪ್ರತಿಮಾ ಈ ಸಂಜ್ಞೆಯುಳ್ಳ ಶಕ್ತಿಗಳು ಎಂಟು.

೩೫-೩೬. ಪೂರ್ವ ಪಶ್ಚಿಮವಾದ ಮತ್ತು ದಕ್ಷಿಣೋತ್ತರವಾದ ರೇಖೆಗಳಲ್ಲಿಯೂ, ಆಗ್ನ್ಯಾದಿ ದಿಕ್ಕುಗಳಲ್ಲಿಯೂ, ಸ್ವರಗಳನ್ನು ವಿನ್ಯಾಸ ಮಾಡಬೇಕು. ಹಾಗೆಯೇ ಪ್ರತಿನಿತ್ಯವೂ ಯಜನಾದಿಕರ್ಮಗಳನ್ನು ನಡೆಸುತ್ತಿರಬೇಕು. ಒಂದುವೇಳೆ ದ್ರವ್ಯವಿಲ್ಲದಿದ್ದರೆ ಕೇವಲ ಜಪದಿಂದಲಾದರೂ ಸಾಧಿಸಬಹುದು.

೩೭. ಕ್ಷುರಿಕಾದಿ ಶಲಾಕಾಂತವಾದ ಶಲಾಕಾತ್ರಯವನ್ನೂ ಅಷ್ಟಶಕ್ತ್ಯಾತ್ಮಕವಾದ ಅರ್ಗಲಾದಿ ಶಕ್ತ್ಯಾರಾಧನೆಯನ್ನೂ ಸಾಧಿಸಬೇಕು.

**ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇ**
**ಏಕಾಶೀತಿತಮೋಽಧ್ಯಾಯಃ.**

---

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಜ್ಞಾನೋತ್ತರಖಂಡದಲ್ಲಿ
ಎಂಬತ್ತೊಂದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ದ್ವ್ಯಶೀತಿತಮೋಧ್ಯಾಯಃ

---

ಅಥಾತಃ ಪರಮಂ ಗುಹ್ಯಂ ಮಂತ್ರಸಾರಸಮುದ್ಭವಂ ।
ಯೈರ್ವ್ಯಾಪ್ತಮಖಿಲಂ ಸರ್ವಂ ಮಂತ್ರಂ ವೈ ಸಚರಾಚರಂ

ಸಮಾನ್ಯಾ ಸರ್ವಸ್ಯೈವಾಸ್ತೇ ಚಾರಾಣಾಂ ।
ಕಃ ಫಲವ್ಯಾಧಂ ಸಮಯಂ ತು ಮಧ್ಯೇ ।
ಮಧ್ಯೇ ನಿವಿಧ್ಯೇಮ ಕಿಂಕ್ರಾ ಸಮನೀನಾಮ ।
ಪರಮಪರಮಕ್ಷೂರಿಕಾಸ್ಕೆಫಟ್ ನಾ ಅಯಥಾನಂ ।
ಅಯಂತಾನಾ ಅಪವಾಸಿನೋಪಿ ಕಿಂಷು ।
ಮಹಾಮುಖೋನಾಮ ಕರ್ತರೀ ।

ಯಃ ಫಟ್ ಸಂಪಾಪೀಡಾ ಯೋಗತಶ್ಚ ಗಾಯ ।
ವಾನ್ಸ್ರಚಮಾಶ್ವಿಗಾಂಗೀ ಗುಂಪಂಚ ಕ್ರಮೇಶೋ ನಾಮ ಶಲಾಕಾ ।

---

## ಎಂಭತ್ತೆರಡನೆಯ ಅಧ್ಯಾಯ

ಈಗ ಮಂತ್ರಸಾರದಲ್ಲಿ ಪ್ರಸಿದ್ಧವಾಗಿ ಅತ್ಯಂತ ಗೂಢವಾಗಿರುವ ಭಾಗವನ್ನು ವಿವರಿಸುವೆನು. ಈ ಮಂತ್ರವು ಸರ್ವಜಗತ್ತನ್ನೂ ವ್ಯಾಪಿಸಿರುವುದು. ಇದರಿಂದ ಸಕಲ ಸಿದ್ಧಿಗಳನ್ನೂ ಪಡೆಯಬಹುದು. ಕರ್ತರೀ ನಾಮಕವಾದ ಮಂತ್ರವು ಮೇಲೆ ಹೇಳಿದಂತೆ ಉಕ್ತವಾಗಿದೆ.

ಪರಮೇಷ್ಠಿನಸ್ಯೈತಾಧ್ಯಾಯನ್ ಪ್ರೇತಜಿಹ್ವಾಮೂಲೀಯೂಪರಂ, ದಕ್ಷಿಣಾ,
ತಕೋ ಹರಾನಾಮ ಯೋಗಶಲಾಕಾರ್ಕಸ್ಯ ಚರಣ್ಯೈತಾಃ ।
ಘಟಿಂತು ಮೂಲಜಾಹ್ಯೇಷಾಯುಹ್ವಾಂಗುದದೇಶ ।
ವಾಯುವ್ಯಾದಿಂದ್ರರೋಚನಾನಾಮಕ್ಷೂರಿಕಾ ।
ಸರ್ವಾಸಾಂ ಮಂಗಳಾಹ್ಯೇಷಾ ನಿರೋಧಿನೀ ನಾಡೀನಾಂ ।

ಚತುಷ್ಕಲಾನಿ ರಂಜನಸ್ಯ ಕ್ಷೂರಿಕಾ ಸರ್ವ ।
ಮಂತ್ರಹೃದಯಾ ಸರ್ವಾನ್ ಸಂಕ್ರಾಮಯತಿ ।
ಸರ್ವವ್ರತೈಶ್ಚ ಸ್ಯಾತ್ಪ್ರಯೋನಾಮಂತ್ರಾಣಾಂ ।
ಕರ್ಮಾಣಿ ಕರೋತಿ ।

ಲಕ್ಷಕವಿಂಶಕೇ ಕ್ಷೂರಿಕಾ ಮಂತ್ರಾಃ ಸಮಾಪ್ತಾಃ.

॥ ಬ್ರಹ್ಮೋವಾಚ ॥

ಆಲಯಃ ಸರ್ವಭೂತಾನಾಂ ಲಪನ್ನಾಲ್ಲಿಂಗಮುಚ್ಯತೇ ।
ಹೃದಿ ಭಾವಮಿದಂ ಲಿಂಗಂ ಸರ್ವಜನ್ಮವತಾಂ ಸ್ಥಿತಂ ॥ ೧ ॥

ಸದಾರ್ಚಯಂತಿ ವಿದ್ವಾಂಸೋ ಭಾವಪುಷ್ಪೈರ್ಹೃದಿಸ್ಥಿತೈಃ ।
ಭಾವಜ್ಞೈಃ ಸುಮನೋಭಿಶ್ಚ ತಮರ್ಚೇನ್ನ್ಯಾನ್ಯಜೈ ಬುಧಃ ॥ ೨ ॥

---

ಮೇಲೆ ಹೇಳಿದ ಕ್ಷುರಿಕಾ ಮಂತ್ರಗಳನ್ನು ಪ್ರಯೋಗಕಾಲದಲ್ಲಿ ಪಠಿಸಬೇಕು.

೧-೨. ಸರ್ವಭೂತಗಳಿಗೂ ಲಯಕಾಲದಲ್ಲಿ ಆಶ್ರಯಸ್ಥಾನವೆನಿಸಿ ಸೃಷ್ಟಿಕಾಲದಲ್ಲಿ ಉತ್ಪತ್ತಿಸ್ಥಾನವೆನಿಸಿದ ಶಿವಲಿಂಗವನ್ನು ಹೃದಯದಲ್ಲಿ ಸದ್ಭಾವನೆಯಿಂದ ಧ್ಯಾನಮಾಡಬೇಕು. ಜ್ಞಾನಿಯಾದವನು ಹೃದಯಾಂತರ್ಗತವಾದ ಸದ್ಭಾವವೆಂಬ ಪುಷ್ಪಗಳಿಂದ ಪರಶಿವನನ್ನು ಅರ್ಚಿಸಬೇಕು. ಅಂದರೆ ಶಿವಲಿಂಗಾರ್ಚನೆಗೆ ಸದ್ಭಾವನೆಯೇ ಒಂದು ಪುಷ್ಪದಂತೆ ಆಗುವುದು.

ಬ್ರಹ್ಮಾಕ್ಷರಪದೈರ್ದಿವ್ಯೈ ರ್ಜರಾಮರಣಕಾರಕೈಃ ।
ಪ್ರಫುಲ್ಲಪದ್ಮಸಂಸ್ಥಾನೇ ಸುಹೃದ್ಯೇ ತಿಷ್ಠತೋ ಮುಖೇ ॥ ३ ॥

ಹೃದಯಂ ತು ವಿಜಾನೀಯಾದ್ವಿಶ್ವಸ್ಯಾಯತನಂ ಮಹತ್ ।
ತಸ್ಯ ತದ್ವಚನಂ ಶ್ರುತ್ವಾ ಪ್ರತ್ಯುವಾಚ ಮಹೇಶ್ವರಃ ॥ ४ ॥

ಶೃಣು ಯತ್ನೇನ ವಚನಂ ಪುಷ್ಪಾಣಿ ಕಥಯಾಮಿ ತೇ ।
ಅಹಿಂಸಾ ಪ್ರಥಮಂ ಪುಷ್ಪಂ ತಥಾ ಚೇಂದ್ರಿಯನಿಗ್ರಹಃ ॥ ५ ॥

ಧೃತಿಪುಷ್ಪಂ ಕ್ಷಮಾಪುಷ್ಪಂ ಶೌಚಪುಷ್ಪಂ ಚ ಪಂಚಮಂ ।
ಅಕ್ರೋಧಃ ಷಷ್ಠಪುಷ್ಪಂ ತು ಹ್ರೀಪುಷ್ಪಂ ಚೈವ ಸಪ್ತಮಂ ॥ ६ ॥

ಸತ್ಯಂ ಚೈವಾಷ್ಟಮಂ ಪುಷ್ಪಮೇಭಿಃ ಪ್ರೀಯೇತ ವೈ ಶಿವಃ ।
ಏತಾನ್ಯಷ್ಟೌ ಚ ಪುಷ್ಪಾಣಿ ಚಾಕ್ಷಯಾಣ್ಯವ್ಯಯಾನಿ ಚ ॥ ७ ॥

---

३–४. ಮುಪ್ಪು, ಮರಣ, ಇವುಗಳಿಗೆ ಕಾರಕಗಳಾದ ಬ್ರಹ್ಮಾಕ್ಷರಗಳಿಂದಲೂ ಬ್ರಹ್ಮವಾಚಕಪದದಿಂದಲೂ, ಹೃದಯಕಮಲಾಂತರ್ಗತನಾಗಿಯೂ, ವಿಶ್ವಕ್ಕೆ ಮೂಲ ಸ್ಥಾನನಾಗಿಯೂ, ಇರುವ ಹೃದಯ ರೂಪಿಯಾದ ಪರಶಿವನನ್ನು ಧ್ಯಾನಮಾಡ ಬೇಕೆಂದು ಹೇಳುತ್ತಿರುವ ಪರಬ್ರಹ್ಮನ ವಾಣಿಯನ್ನು ಕೇಳಿ ಪರಮೇಶ್ವರನೇ ಈ ರೀತಿಯಾಗಿ ಒಂದುಸಾರಿ ಹೇಳಿದನು.

५-७. ಬ್ರಹ್ಮನೇ ವಿಶ್ವಾಸದಿಂದ ಕೇಳುವವನಾಗು. ನನಗೆ ಅಷ್ಟಪುಷ್ಪಗಳಲ್ಲಿ ಹೆಚ್ಚಿನ ಪ್ರೀತಿಯಿರುವುದು. ಆ ಅಷ್ಟಪುಷ್ಪಗಳು ಯಾವುವೆಂದರೆ, ಅಹಿಂಸಾ, ಇಂದ್ರಿಯನಿಗ್ರಹ, ಧೈರ್ಯ, ಕ್ಷಮಾ, ಶೌಚ, ಅಕ್ರೋಧ, ಹ್ರೀ (ನಾಚಿಕೆ) ಸತ್ಯ, ಎಂಬುವುಗಳು. ಇವುಗಳಿಂದ ನನ್ನನ್ನು ಅರ್ಚಿಸಿದರೆ ನಾನು ತೃಪ್ತನೆನಿಸುವೆನು. ಇಷ್ಟು ಗುಣಗಳಿಂದ ಕೂಡಿ ನನ್ನನ್ನು ಆರಾಧಿಸುವವನೇ ಧನ್ಯ.

ಏತಾನಿ ಭಾವಶೋಯೇನ ಪ್ರಕಲ್ಪಿತುಂ ನಿವೇದಯೇತ್ ।
ಏಭಿರ್ಯಸ್ತು ಸದಾ ಪುಷ್ಪೈರರ್ಚಯೇಚ್ಛಿವಮವ್ಯಯಂ ॥ ೮ ॥

ಉದ್ಘಾಟ್ಯ ತು ತಮೋದ್ವಾರಂ ಶಿವಂ ಪಶ್ಯೇನ್ನಿರಂಜನಂ ।
ಕೃತ್ವಾ ಯಮೈಸ್ತು ಲಿಂಗಂ ವೈ ಪ್ರತ್ಯಾಹಾರೈಸ್ತು ವೈದಿಕಂ ॥ ೯ ॥

ಧ್ಯಾನಧಾರಣಪುಷ್ಪೈಸ್ತು ಚಾರ್ಚಯೇಚ್ಛಿವಮವ್ಯಯಂ ।
ಶರೀರೇ ದೀಪಯೇದಗ್ನಿಂ ನ್ಯಾಸಂ ಕೃತ್ವಾ ತೃಣೇಂಧನಂ ॥ ೧೦ ॥

ಯುಂಜಯೇತ್ತದ್ಗತಾನ್ ದೋಷಾನ್ ಮನಃ ಕೃತ್ವಾ ಸುನಿಶ್ಚಿತಂ ।
ವಿಸ್ತೀರ್ಣಾದ್ಧಾರಣಾಚ್ಚೈವ ನಾಸಾಗ್ರೇ ಚಿಂತಯೇಚ್ಛಿವಂ ॥ ೧೧ ॥

---

೮-೯. ಇವುಗಳನ್ನು ಚಿತ್ತಶುದ್ಧಿಯಿಂದ ಸಂಪಾದಿಸಿ ನಾಶರಹಿತವಾದ ಶಂಕರನನ್ನು ಮನಸಾ ಧ್ಯಾನಿಸಬೇಕು. ಅಜ್ಞಾನವೆಂಬ ಕತ್ತಲೆಯ ಬಾಗಿಲನ್ನು ತೆರೆದು ಸ್ವಪ್ರಕಾಶಸ್ವರೂಪನಾದ ಪರಶಿವನನ್ನು ದರ್ಶನಮಾಡಬೇಕು. ಯೋಗಮಾರ್ಗದಲ್ಲಿ ಉಕ್ತವಾಗಿರುವ ಅಷ್ಟಾಂಗಗಳಲ್ಲಿ ಯಮವೆಂಬ ಯೋಗದಿಂದ ಶಿವಲಿಂಗವನ್ನೂ, ಪ್ರತ್ಯಾಹಾರದಿಂದ ಅದರಲ್ಲಿ ವೈದಿಕತ್ವವನ್ನೂ ಮನಸಾ ಭಾವಿಸಬೇಕು.

೧೦-೧೨. ಯೋಗಮಾರ್ಗದಲ್ಲಿ ಉಕ್ತವಾಗಿರುವ ಎಂಟು ಅಂಶಗಳಲ್ಲಿ ಯಮವೆಂದರೆ ಹಿಂಸೆ, ಅಸತ್ಯ, ಸ್ತೇಯ, ದುರಾಚಾರ ಪರಿಗ್ರಹಗಳೆಂಬ ಐದು ಕಾರ್ಯಗಳನ್ನು ಬಿಡತಕ್ಕದ್ದು. ಪ್ರತ್ಯಾಹಾರವೆಂದರೆ ಚಕ್ಷುರಾದೀಂದ್ರಿಯಗಳನ್ನು ಅವುಗಳ ವಿಷಯಗಳಿಂದ ಹಿಂದಿರುಗಿಸಿ ಅಂತಃಕರಣಕ್ಕೆ ಅನುಕೂಲವಾಗಿರಿಸುವುದು. ಧ್ಯಾನವೆಂದರೆ ಧ್ಯೇಯವಸ್ತುವಿನಲ್ಲಿ ಚಿತ್ತವನ್ನು ಸ್ಥಿರಗೊಳಿಸುವುದು. ಧಾರಣೆಯೆಂದರೆ ಶುಭ್ರವಾದ ನಾಭಿಚಕ್ರ, ಹೃದಯ, ಜಿಹ್ವಾಗ್ರ, ಶಿರಸ್ಸು, ಮುಂತಾದ ಶರೀರದ ಅವಯವಗಳಲ್ಲಿ ಚಿತ್ತವನ್ನು ಸ್ಥಿರವಾಗಿ ನಿಲ್ಲಿಸಿಕೊಳ್ಳುವ ಅಭ್ಯಾಸಮಾಡುವುದು. ಇಂತಹ ಧ್ಯಾನ ಧಾರಣೆಗಳೆಂಬ ಪುಷ್ಪಗಳಿಂದ ನಾಶರಹಿತನಾದ ಶಿವನನ್ನು ಅರ್ಚಿಸಬೇಕು. ತನ್ನ ಶರೀರವನ್ನೇ ತೃಣೇಂಧನದಂತೆ (ಹುಲ್ಲುಕಡ್ಡಿ) ಭಾವಿಸಿಕೊಂಡು ದೀಪಸ್ಥಾನದಲ್ಲಿ

ಚಿಂತಯೇಚ್ಚ ಸದಾ ಹ್ಯೇವಂ ಕೃತ್ವಾ ಪೂಜಾಂ ತು ದೇಹಜಾಂ ।
ಕ್ಷಣಾದ್ಧ್ರಸ್ವತ್ವಮಾಯಾಂತಿ ಪ್ರಕೀರ್ಣಾನೀಂದ್ರಿಯಾಣಿ ಚ ॥ ೧೨ ॥

ಶುದ್ಧೋ ದೋಷಸ್ತಥಾ ಮಂತ್ರೀ ಧ್ಯಾಯನ್ಮಂತ್ರೀ ನ ಲಿಪ್ಯತೇ ।
ಜ್ಞಾನಶುದ್ಧಸ್ತಥಾ ಮಂತ್ರೀ ವಿಚರೇದ್ವಿಷಯೈರಪಿ ॥ ೧೩ ॥

ಭಾವಗ್ರಾಹ್ಯಂ ಮನಃ ಕೃತ್ವಾ ಬುದ್ಧ್ವಾ ಭೋಕ್ತಾರಮೀಶ್ವರಂ ।
ಸದಾ ಸಮತ್ವಮಾಯಾತಿ ಸಾಮಾನ್ಯಃ ಸರ್ವಗೋಚರಃ ॥ ೧೪ ॥

ಇತಿ ಶ್ರೀ ಸಾಂಬಪುರಾಣೇ ದ್ವ್ಯಶೀತಿತಮೋಽಧ್ಯಾಯಃ.

---

ಬೆಳಗಿಸಬೇಕು. ತನ್ನ ಚಿತ್ತವನ್ನು ನಾಸಾಗ್ರದಲ್ಲಿ ಧಾರಣೆಯಿಂದ ಸಕಲೇಂದ್ರಿಯ ವ್ಯಾಪಾರಗಳನ್ನೂ ತಡೆದು, ಸದಾ ಶಂಕರನನ್ನೇ ಅನುಸಂಧಾನಮಾಡುತ್ತಿರಬೇಕು.

೧೩-೧೪. ದೋಷಾದಿಗಳನ್ನು ತೊರೆದು ಪರಿಶುದ್ಧನೆನಿಸಿಕೊಂಡಿರುವ ಮಂತ್ರವಾದಿಗೆ ಯಾವ ಇಂದ್ರಿಯದೋಷಗಳೂ ತಟ್ಟಲಾರವು. ಜ್ಞಾನಿಯಾದ ಮಂತ್ರವಾದಿಯು ವಿಷಯಸುಖಗಳಲ್ಲಿ ಸಂಚರಿಸಲಾರನು. ಮನಸ್ಸನ್ನು ಹೃದಯ ದಲ್ಲಿ ನೆನೆಸುತ್ತಾ ಸರ್ವಸಮತಾಭಾವದಿಂದ ನಡೆಯುವ ಮಂತ್ರಜ್ಞನೇ ಸರ್ವ ಶ್ರೇಷ್ಠನೆನಿಸುವನು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಎಂಭತ್ತೆರಡನೆಯ
ಅಧ್ಯಾಯವು ಮುಗಿದುದು.

॥ ಶ್ರೀ ॥

॥ ಶ್ರೀ ಸೂರ್ಯಾಯನಮಃ ॥

# ಅಥ ಶ್ರೀ ಸಾಂಬಪುರಾಣೇ ತ್ರ್ಯಶೀತಿತಮೋಧ್ಯಾಯ

ತ್ರಿವಿಧಂ ತ್ರಿವಿಧಾಕಾರಂ ತ್ರಿವಿಧಂ ಪಂಚ ಸಂಸ್ಥಿತಂ ।
ತ್ರಿವಿಧೇನ ತು ಯೋಗೇನ ಲಭ್ಯತೇ ತತ್ತ್ವನಿಶ್ಚಲಂ ॥ ೧ ॥

ಯಸ್ಯ ಯೋಗಃ ಸ್ಮೃತಃ ಶಾಸ್ತ್ರೇ ಪರೇ ತು ಪರಮೋದ್ಭವೇ ।
ಲಿಂಗಂ ತಸ್ಯ ಸದಾ ಯೋಗ್ಯ ಜ್ಞಾನಯೋಗಾಚ್ಚ ಕರ್ಮತಃ ॥ ೨ ॥

---

## ಎಂಭತ್ತುಮೂರನೆಯ ಅಧ್ಯಾಯ

೧-೨. ಯೋಗವು ಭಕ್ತಿಯೋಗ, ಕ್ರಿಯಾಯೋಗ, ಜ್ಞಾನಯೋಗವೆಂದು ಮೂರು ವಿಧವಾಗಿರುವುದು. ಆದರಲ್ಲಿ ಕ್ರಿಯಾಯೋಗ ಅಥವಾ ಕರ್ಮ ಯೋಗವೆಂಬುದು ಶಾರೀರ, ವಾಚಿಕ, ಮಾನಸಿಕವೆಂದು ಮೂರುವಿಧ. ಶಾರೀರ ವೆಂದರೆ ಆರೋಗ್ಯವನ್ನು ಸಾಧಿಸಿಕೊಳ್ಳುವುದು. ವಾಚಿಕವೆಂದರೆ ವೇಧಾಧ್ಯಯನ, ಅಧ್ಯಾಪನಗಳನ್ನು ನಡೆಸುವುದು. ಮಾನಸಿಕವೆಂದರೆ ಶಮದಮಾದಿ ಗುಣಗಳಿಂದ ಈಶ್ವರಭಕ್ತಿಯನ್ನು ವೃದ್ಧಿಪಡಿಸಿಕೊಳ್ಳುವುದು. ಇವುಗಳಿಂದ ಜ್ಞಾನೇಂದ್ರಿಯಪಂಚಕ ಕರ್ಮೇಂದ್ರಿಯಪಂಚಕ, ಪಂಚತನ್ಮಾತ್ರಗಳು, ಪ್ರಕೃತಿ, ಮಹತ್, ಅಹಂಕಾರ, ಮನಸ್ಸು, ಪಂಚಭೂತಗಳು ಎಂಬ ಚತುರ್ವಿಂಶತಿ ತತ್ತ್ವಗಳನ್ನು ತಿಳಿದುಕೊಳ್ಳುವುದೇ ಯೋಗತತ್ತ್ವಜ್ಞಾನ. ಇಂತಹ ತತ್ವಮಾರ್ಗದಿಂದಲೇ ಮಾನವನು ಜ್ಞಾನ ಮತ್ತು ಕರ್ಮಯೋಗಗಳ ಮೂಲಕ ಶಿವಲಿಂಗಸ್ವರೂಪವನ್ನೇ ಸರಿಯಾಗಿ ಅರಿತು ಪರಮಜ್ಞಾನಿಯೆನಿಸುವನು.

ಅಹಿಂಸಾ ಚ ಕ್ಷಮಾ ಚೈವ ಧೃತಿರಿಂದ್ರಿಯಸಂಗ್ರಹಃ ।
ಶೌಚಮಕ್ರೋಧನಂ ಸತ್ಯಂ ಕರ್ಮಶಾಸ್ತ್ರವಿದಾಂ ವರಂ ॥ ೩ ॥

ಶಾಸ್ತ್ರಜ್ಞಾನದಥ ಯೋಗಾಚ್ಚ ಗುರುದಾರೇಷು ಕಿಲ್ಬಿಷಾತ್ ।
ಮುಕ್ತಿಸ್ತತ್ರಾವಿಕಲ್ಪೇನ ತ್ರಿವಿಧಾ ಪರಿಕೀರ್ತಿತಾ ॥ ೪ ॥

ಆಸನೇ ಚ ತಥಾ ಪಾನೇ ನಿಶ್ವಾಸೋಚ್ಛ್ವಾಸದೃಷ್ಟಿಷು ।
ತ್ರಿಷು ವಾಪ್ಯುಪಚಾರೇಷು ಜ್ಞಾನೇನ ಸಮತಾ ಯದಾ ॥ ೫ ॥

ಕಾರಣಾನಿ ನಿಗೃಹ್ಣೀಯಾತ್ ಘಟಮಾನಾನಿ ಯೋಗಿನಃ ।
ಪ್ರಸೂತೇ ತು ತಥಾ ಯೋಗಃ ಕ್ರೀಡಂತಿ ವಿಷಯೋರಗೈಃ ॥ ೬ ॥

ನಿರುಧ್ಯ ದಗ್ಧಾವಾಪಸ್ಯ ಗುರುಪೂಜಾ ಚ ಸರ್ವದಾ ।
ವಿನಾ ವಿಜ್ಞಾನಯೋಗಾಭ್ಯಾಂ ಮೃತಸ್ಯ ಸ ವಿಪರ್ಯಯಃ ॥ ೭ ॥

---

೩-೪. ಅಹಿಂಸೆ, ತಾಳ್ಮೆ, ಧೈರ್ಯ, ಇಂದ್ರಿಯಗಳನ್ನು ಜಯಿಸುವುದು, ಶುಚಿತ್ವ, ಕೋಪರಾಹಿತ್ಯ, ಸತ್ಯ, ಇವುಗಳನ್ನು ಕರ್ಮಯೋಗಿಯು ಮುಖ್ಯವಾಗಿ ಅಭ್ಯಾಸ ಮಾಡಿಕೊಳ್ಳಬೇಕು. ಶಾಸ್ತ್ರಜ್ಞಾನದಿಂದಲೂ ಯೋಗಜ್ಞಾನದಿಂದಲೂ ಗುರುದಾರಾ ಪರಿಗ್ರಹಾದಿ ಮಹಾ ದೋಷಗಳನ್ನೆಲ್ಲಾ ಕಳೆದುಕೊಳ್ಳುವವನಾಗಬೇಕು.

೫–೬. ಯೋಗಿಗಳು ಕುಳಿತುಕೊಳ್ಳುವಾಗ, ಪಾನಮಾಡುವಾಗ, ನಿಶ್ವಾಸ, ಉಚ್ಛ್ವಾಸ, ನೋಟ ಮೊದಲಾದ ಸಕಲ ಕ್ರಿಯೆಗಳಲ್ಲಿಯೂ ಒಂದೇ ವಿಧವಾದ ಜ್ಞಾನವನ್ನು ಪಡೆದಿರಬೇಕು. ಅಷ್ಟಾಂಗಗಳನ್ನೂ ಸಾಧಿಸಿದ ಯೋಗಿಗಳು ವಿಷಯ ಸುಖಗಳೆಂಬ ಹಾವುಗಳನ್ನು ಆಟವಾಡಿಸುವರು. ಅಂದರೆ ಅವುಗಳ ಅಧೀನಕ್ಕೆ ತಾವು ಸಿಕ್ಕುವುದಿಲ್ಲ.

೭–೮. ಗುರುಪೂಜಾದಿಗಳಿಂದ ಸಕಲ ಪಾಪಗಳನ್ನೂ ನಿವಾರಿಸಿಕೊಂಡು ವಿಜ್ಞಾನ ಮತ್ತು ಯೋಗಸಾಧನೆಯಿಂದ ಮೃತನಾದವನಿಗೆ ಪುನರ್ಜನ್ಮವಿರುವುದಿಲ್ಲ.

ಜ್ಞಾನಂ ಪ್ರಶಸ್ಯತೇ ಯೋಗಾತ್ ಹೀನಂ ಕರ್ಮ ತು ಲೌಕಿಕಂ ।
ಕರ್ಮಯೋಗಂ ತು ವಿಜ್ಞಾನಾತ್ತ್ರನ್ವೃತ್ತಃ ಸರ್ವದಾ ದಹೇತ್ ॥ ೮ ॥

ಜ್ಞಾನೇನ ಕೇವಲೇನೈವ ಸಾಧಕಃ ಸರ್ವತಶ್ಚರೇತ್ ।
(?) ಆತ್ಮನಾದಿಂ ಸ ಭೇದಜ್ಞಃ ಸುಖಂಭಿನ್ನಃ ಸಮಾಚರೇತ್ ॥ ೯ ॥

ಪ್ರಕೃತಿಂ ಪುರುಷಂ ಚೈವ ಜ್ಞಾತ್ವಾ ಜ್ಞಾನೀ ನ ತಪ್ಯತೇ ।
ತೇಷಾಮುಪರಿತಃ ಸೂಕ್ಷ್ಮಸ್ಸರ್ವವ್ಯಾಪೀ ಶಿವೋಽವ್ಯಯಃ ॥ ೧೦ ॥

ವಿದಿತ್ವಾ ಜ್ಞಾನಬುದ್ಧ್ಯಂತಂ ಜಾಯತೇ ವೇದವಿತ್ತಮಃ ।
ತತಃ ಸ್ವಕರಣೈಃ ಕಾರ್ಯಂ ನ ಯೋಗೇ ನ ಚ ಕರ್ಮಣಾ ॥ ೧೧ ॥

---

ಇಲ್ಲಿ ಯೋಗಾಭ್ಯಾಸಕ್ಕಿಂತಲೂ ಜ್ಞಾನವು ಪ್ರಶಸ್ತವಾದುದು. ಜ್ಞಾನಿಗೆ ಲೌಕಿಕವಾದ ಕರ್ಮಮಾರ್ಗದ ಅನುಸರಣೆಯು ಅವಶ್ಯಕ. ಕರ್ಮಯೋಗದಿಂದ ಹುಟ್ಟಿದ ಜ್ಞಾನವು ಸಕಲ ಪಾಪಗಳನ್ನೂ ದಹಿಸಿ, ಶಾಶ್ವತವಾದ ಮುಕ್ತಿಯನ್ನು ದೊರಕಿಸಿಕೊಡುವುದು.

೯-೧೦. ಜ್ಞಾನಿಯು ತನ್ನ ಶುದ್ಧಜ್ಞಾನದಿಂದಲೇ ಆತ್ಮಸ್ವರೂಪವನ್ನು ಪಡೆಯುವನು. ಸುಖದುಃಖಾದಿಗಳೆಂಬ ಉಪಾಧಿಗಳಿಂದ ದೂರನಾಗಿ, ಪ್ರಕೃತಿ ಪುರುಷಾತೀತನೆನಿಸಿ, ಸರ್ವವ್ಯಾಪಿಯಾಗಿ, ಸೂಕ್ಷ್ಮರೂಪಿಯಾದ, ಪರಶಿವನ, ಸಾಯುಜ್ಯವನ್ನು ಹೊಂದಲು, ಜ್ಞಾನಿಯೇ ಸಮರ್ಥವಾಗುವನು.

೧೧-೧೨. ಬುದ್ಧಿ, ಮನಸ್ಸು, ಅಹಂಕಾರ, ಇವು ಮೂರು ಅಂತಃಕರಣಗಳು. ಅದರಲ್ಲಿ ಬುದ್ಧಿಯ ಪರಿಣಾಮವೇ ಜ್ಞಾನ ಎಂಬ ಸಾಂಖ್ಯತತ್ತ್ವನಿಶ್ಚಯದಿಂದಲೂ, ಇನ್ನೂ ಇತರ ಜ್ಞಾನಸಾಧಕಕ್ರಿಯಾಚರಣೆಯಿಂದಲೂ, ಜ್ಞಾನಿಯಾದವನಿಗೆ ಯೋಗ ಮತ್ತು ಕರ್ಮಗಳು ಕಾರ್ಯಕಾರಿಯಾಗಲಾರವು. ಜ್ಞಾನಿಯು ಕೇವಲ ಜ್ಞಾನಮಾತ್ರದಿಂದಲೇ ಆತ್ಮಸ್ವರೂಪವನ್ನೂ, ಈ ಚರಾಚರಾತ್ಮಕವಾದ ಜಗತ್ತನ್ನೂ

ಆತ್ಮನೋ ಜ್ಞಾನಮಾತ್ರೇಣ ವೀಕ್ಷ್ಯತೇ ತು ಚರಾಚರಂ ।
ಪ್ರಕೃತೌ ಪುರುಷೋ ಲೀನಃ ಪಾಶೈಸ್ತು ಪ್ರಕೃತಿರ್ವೃತಾ ॥ ೧೨ ॥

ಪರಾಪರಸ್ಯ ಜ್ಞಾತಾ ವೈ ನರಃ ಕರ್ಮ ಪರಿತ್ಯಜೇತ್ ।
ಪ್ರಕೃತೇಃ ಪುರುಷಾಚ್ಚೈವ ಪ್ರಜ್ಞಾನೋ ಪರಗೋ ಭವೇತ್ ॥ ೧೩ ॥

ಏವಮಾಂಸಸ್ತೇನ ಮುಚ್ಯಂತೇ ಪರಾವರವಿಚಾರಿಣಃ ।
ವಿಪರ್ಯಯೇ ಪುನಸ್ತೇಷಾಂ ಪೂರ್ವಸ್ಯಾಂ ಪ್ರಕೃತೌಸ್ಥಿತಾಃ ॥ ೧೪ ॥

ಏಕೋ ಯದಿ ಭವೇಜ್ಜೀವೋ ಬಂಧಃ ಕಸ್ಯ ಭವೇತ್ಪುನಃ ।
ಕೈವಲ್ಯಂ ಚ ಕಥಂ ಪುಂಸಾಂ ಬಂಧಃ ಪ್ರಾಧಾನಿಕೋ ಯದಿ ॥ ೧೫ ॥

---

ಅಭೇದದೃಷ್ಟಿಯಿಂದ ನೋಡುವನು. ಮತ್ತು ಪ್ರಕಾಶವಸ್ತುವಾದ ಪುರುಷನು ಜಡ ವಸ್ತುವಾದ ಪ್ರಕೃತಿಯಲ್ಲಿ ಲೀನವಾಗಿ ಪಾಶಾದಿಗಳಿಂದ ವಿರಹಿತನಾಗಿ ಮುಕ್ತನಾಗುವನು.

೧೩-೧೪. ಪರಾಪರಸ್ವರೂಪನಾದ ಆತ್ಮನನ್ನು ಸರಿಯಾಗಿ ಅರಿತವನು ಇತರ ಕರ್ಮಗಳನ್ನು ತ್ಯಜಿಸುವನು. ಪ್ರಕೃತಿ, ಪುರುಷ, ಇವುಗಳಿಗಿಂತ ಜ್ಞಾನವೆಂಬುದು ದೊಡ್ಡದು. ಆ ಜ್ಞಾನಸಹಾಯದಿಂದ ಪರಾವರವಿಚಾರಮಾಡಿದವರು ಸಂಸಾರ ಬಂಧನಗಳಿಂದ ಮುಕ್ತರಾಗುವರು. ಹಾಗಿಲ್ಲದಿದ್ದರೆ ಎಂದಿನಂತೆಯೇ ಸಂಸಾರಿಯಾಗಿಯೇ ಸಂಸಾರ ಬಂಧನಗಳಲ್ಲಿಯೇ ಸಿಲುಕಬೇಕಾಗುವುದು.

೧೫-೧೬. ಜಗತ್ತಿನಲ್ಲಿ ಆತ್ಮವಸ್ತುವೇ ಇಲ್ಲದೆ ಜೀವವೊಂದೇ ಇರುವುದಾದರೆ ಬಂಧಮೋಕ್ಷಗಳು ಒಬ್ಬನಿಗೇ ದೊರಕುವುದು ಹೇಗೆ? ಒಂದು ವೇಳೆ ಬಂಧವು ನಿತ್ಯವಾಗಿ ಜೀವನದಲ್ಲಿರುವುದಾದರೆ ಮನುಷ್ಯರು ಮೋಕ್ಷಕ್ಕಾಗಿ ಪ್ರಯತ್ನಿಸುವುದು ಏತಕ್ಕೆ? ಇತ್ಯಾದಿ ಅನೇಕ ಪೂರ್ವಪಕ್ಷಗಳು ಇತರ ದರ್ಶನಗಳಲ್ಲಿ ಉದ್ಭವಿಸುವುವು.

ಅಥ ಚೇನ್ನಿತ್ಯತಾ ಬಂಧಃ ಪುಂಸಸ್ತತ್ರ ನಿರರ್ಥಕಃ ।
ತಸ್ಮಾತ್ ಜ್ಞಾನಧರೋ ಯೋಗೀ ಸರ್ವದಾ ಸುಖಮಶ್ನುತೇ ॥ ೧ ॥

ತಾರಕೇ ಜ್ಞಾನಸಂಸ್ಕಾರೇ ನ ಪ್ರಭುರ್ಬಧ್ಯತೇ ಕ್ವಚಿತ್ ।
ಇಚ್ಛಯಾ ಚರತೇ ಜ್ಞಾನೀ ಯೋಗೀ ಕಾಲಾಂತರೇಣ ತು ॥ ೧೭ ॥

ದಗ್ಧೇ ಚೈವ ತು ಪಾಶೇಸ್ಮಿನ್ ಗುರುಣಾ ಶಾಸ್ತ್ರವಾತ್ಮನಾ ।
ಅಭಿವ್ಯಕ್ತಂ ರಳಂ ದಿವ್ಯಂ ಭೂಪಪ್ರಾಪ್ತಂ ಗುರುಸಂಭವೇತ್ ॥ ೧೮ ॥

ಏವಂ ಸಂಜ್ಞಾನಸಂಯೋಗಾಚ್ಛಾದ್ಧಾಪಾಶಾದ್ವಿಮುಚ್ಯತೇ ।
ನ ಹಿಂಸೇದಾತ್ಮನಾತ್ಮಾನಂ ನ ಹಿಂಸೇದಿಂದ್ರಿಯಾಣಿ ಚ ॥ ೧೯ ॥

---

ಇದೆಲ್ಲವನ್ನೂ ಜ್ಞಾನಿಯಾದವನು ತಿಳಿಯುವನು. ಅಂತಹವನಿಗೆ ಮೋಕ್ಷಸುಖವು ಲಭಿಸುವುದೆಂದು ತಿಳಿದು ಜ್ಞಾನಾರ್ಜನೆಗೆ ಮನುಷ್ಯನು ತೊಡಗಬೇಕು.

೧೭-೧೮. ಸಕಲ ದುಃಖನಿವಾರಕವಾದ ಜ್ಞಾನಕ್ಕೆ ಮೀರಿದ ಮತ್ತೊಂದು ವಸ್ತುವಾಗಲೀ, ಜ್ಞಾನಕ್ಕೆ ಸ್ವಾಮಿಯಾಗಲಿ ಇಲ್ಲ. ಜ್ಞಾನಿಯು ತನ್ನ ಇಚ್ಛಾಮಾತ್ರದಿಂದಲೇ ಸಕಲ ಪಾಶವಿಮುಕ್ತನಾಗುವನು. ಯೋಗಿಯೂಸಹ ತನ್ನ ಅಭ್ಯಾಸ ಬಲದಿಂದಲೇ ಕಾಲಾಂತರದಲ್ಲಿ ಬಂಧಮುಕ್ತನಾಗುವನು. ಇದಕ್ಕೆ ಶಾಸ್ತ್ರಸಂಪನ್ನನೂ ಅನುಭವಿಯೂ ಆದ ಜ್ಞಾನಿಯೊಬ್ಬನು ಗುರುವಾಗಿ ನಿಲ್ಲಬೇಕು. ಅವನಿಂದ ಅಭಿವ್ಯಕ್ತನಾದ ಜ್ಞಾನವೇ ಒಂದು ಪರಮಾತ್ಮ ಸ್ವರೂಪ.

೧೯-೨೦. ಹೀಗೆ ನಾನಾವಿಧವಾದ ದರ್ಶನಗಳಲ್ಲಿ ಉಕ್ತವಾಗಿರುವ ಜ್ಞಾನ ಸ್ವರೂಪವನ್ನರಿತವನು ಜ್ಞಾನಿಯೆನಿಸಿಕೊಳ್ಳುವನು. ಈತನೇ ಸಂಸಾರಪಾಶದಿಂದ ಬಿಡುಗಡೆ ಹೊಂದಲು ಸಮರ್ಥನಾಗುವನು. ಒಟ್ಟಿನಲ್ಲಿ ಶಾರೀರಕವಾದ ಯೋಗ ಕ್ರಿಯೆಯನ್ನನುಸರಿಸಿ, ಆತ್ಮಸ್ವರೂಪವಾದ ಜೀವನನ್ನಾಗಲೀ, ಇಂದ್ರಿಯಾದಿಗಳನ್ನಾಗಲಿ, ಹಿಂಸಿಸಬಾರದು. ಅವುಗಳ ಸಹಾಯದಿಂದಲೇ ಜ್ಞಾನಿಯಾಗಲು ಪ್ರಯ

ಯಥಾ ಭಾಗಂ ತು ವೈ ಯುಂಜ್ಯಾದನ್ಯಥಾ ತು ವಿಪರ್ಯಯಃ ।
ದಿಶೋ ಯಸ್ಯ ತು ಶ್ರೋತ್ರೇ ಜೀವಃ ಶ್ರೋತ್ರೇ ವ್ಯವಸ್ಥಿತಃ ॥ ೨೦ ॥

ಸಂಪಶ್ಯೇದಾತ್ಮನಾ ಶುದ್ಧಃ ಪರಮಾತ್ಮಾನಮಾತ್ಮನಾ ।
ತ್ಯಕ್ತವಾಯುರಿತಿ ಪ್ರೋಕ್ತಃ ಸ್ಪರ್ಶಸ್ತತ್ರಾತ್ಮಸಂಭವಃ ॥ ೨೧ ॥

ವಾಯುಶ್ಚ ಸ್ಪರ್ಶನಂ ಯುಕ್ತೋ ಸ್ಪರ್ಶನಂ ತ್ವರಿತಂ ಜನಃ ।
ಚಕ್ಷುಷಾ ಗೃಹ್ಯತೇ ರೂಪಂ ಚಕ್ಷೂರೂಪಸಮುದ್ಭವಂ ।
ಜಾಯತೇ ಶಕ್ತಿತಸ್ತೇನ ಪರಸ್ತೇ ತೇನ ಲಿಪ್ಯತೇ ॥ ೨೨ ॥

ರಸಜ್ಞಾ ರಸನಾ ಜಿಹ್ವಾ ರಸಸ್ತು ವರುಣಾತ್ಮಕಃ ।
ಆಶಾಶ್ಚ ಪರತಸ್ತತ್ರ ವರುಣಶ್ಚಾತ್ರ ಸಂಭವಃ ॥ ೨೩ ॥

---

ತ್ತಿಸಬೇಕು. ಪರಮೇಶ್ವರನಿಗೆ ಕಿವಿಗಳಾಗಿರುವ ದಿಕ್ಕುಗಳೇ ಜೀವನಿಗೂ ಕಿವಿಗಳಾಗಿರುವುವು.

೨೧. ಆತ್ಮಜ್ಞಾನವನ್ನು ಸಂಪಾದಿಸಿ ಜೀವಬ್ರಹ್ಮರಿಗೆ ಅಭೇದವನ್ನು ಕಲ್ಪಿಸಿಕೊಳ್ಳುತ್ತಾ, ಪ್ರಾಣವಾಯು ಪರಿತ್ಯಕ್ತವಾದ ದೇಹಕ್ಕೆ ಸ್ಪರ್ಶಾದಿಗಳಿಲ್ಲದಿರುವುದರಿಂದ ಆ ಸ್ಪರ್ಶಾದಿಗಳು ಆತ್ಮಗತವಾದವುಗಳೆಂದು ಭಾವಿಸಬೇಕು. ಪರಬ್ರಹ್ಮವಸ್ತುವಿಗೆ ಸ್ಪರ್ಶವಾಗಿರುವ ವಾಯುವೇ ಜೀವನಿಗೂ ಸ್ಪರ್ಶವಿಷಯವಾಗಿರುವುದು.

೨೨-೨೩. ಚಕ್ಷುರಿಂದ್ರಿಯವು ರೂಪವನ್ನು ಗ್ರಹಿಸುತ್ತದೆ. ರೂಪಸಮುದ್ಭವಾದದ್ದೇ ಚಕ್ಷುರಿಂದ್ರಿಯ. ಆದರಿಂದಲೇ ಚಕ್ಷುರಿಂದ್ರಿಯದ ಕಾರ್ಯವು ನಡೆಯುವುದು. ನಾಲಿಗೆಯೆಂಬುದು ಪದಾರ್ಥಗಳ ರಸಾದಿಗಳನ್ನು ಗ್ರಹಿಸುವುದು. ಅದು ವರುಣದೇವತಾತ್ಮಕವಾದದ್ದು. ಸಮಸ್ತ ದಿಕ್ಕುಗಳೂ, ವರುಣನೂ, ರಸನೇಂದ್ರಿಯದಿಂದ ಜನಿಸಿದವರು.

ಪಾರ್ಥಿವಸ್ತು ತಥಾ ಘ್ರಾಣೇ ಗಂಧಸ್ತು ಪೃಥಿವೀಗುಣಃ ।
ಯುಕ್ತಸ್ತು ಪುರುಷೋಽಹ್ಯತ್ರ ನ ಪರಃ ಪೃಥಿವೀಗತಃ ॥ ೨೪ ॥

ಅಗ್ನಿಸ್ಸರ್ವಮಿತಿ ಪ್ರೋಕ್ತಃ ಸರ್ವಸ್ಮಿನ್ನಾತ್ಮನಿ ಸ್ಥಿತಃ ।
ವಾಯುರಪ್ಯತ್ರ ವಿಜ್ಞೇಯೋ ನ ಪರೋ ಲಿಪ್ಯತೇ ತದಾ ॥ ೨೫ ॥

ಇಂದ್ರಿಯಸ್ಯೇಂದ್ರಗೋಪ್ತೃತ್ವಾದ್ಧಸ್ತೌ ಚೇಂದ್ರೇಣ ಸಂಯುತೌ ।
ಪುರುಷಃ ಪಾಣಿಸಂಯುಕ್ತೋ ನ ಪರಸ್ತೇನ ಲಿಪ್ಯತೇ ॥ ೨೬ ॥

ಭೋಕ್ತಾ ವಿಷ್ಣುಶ್ಚ ಪಾಪಾನಾಮಪಾನಂ ಸ್ಥಾನಮುಚ್ಯತೇ ।
ಪುರುಷಃ ಪಾದಸಂಯುಕ್ತಸ್ತ್ರಿಧಾ ವೈ ವಿಶ್ವತೋಮುಖಃ ॥ ೨೭ ॥

ವಾಯುರ್ವೈ ವರ್ಚಸೋ ಮಾರ್ಗಸ್ಸಮಿತ್ರೋ ಮಿತ್ರಯೋಗತಃ ।
ಪುರುಷಶ್ಚಾತ್ರ ಸಂಯುಕ್ತೋ ನ ಪರಃ ಪುರುಷೋಽನ್ಯಥಾ ॥ ೨೮ ॥

---

೨೪-೨೫. ಘ್ರಾಣೇಂದ್ರಿಯವು ಪೃಥಿವೀ ದೇವತಾತ್ಮಕವಾದದ್ದು. ಅದಕ್ಕೆ ಪೃಥಿವೀ ಗುಣವಾದ ಗಂಧವೇ ವಿಷಯ. ಪೃಥಿವಿಯನ್ನು ಬಿಟ್ಟರೆ ಮನುಷ್ಯನಿಗೆ ಮತ್ತೊಂದು ಆಶ್ರಯವು ದೊರೆಯಲಾರದು. ಅಗ್ನಿ ಮತ್ತು ವಾಯು ಇವು ಸರ್ವ ವ್ಯಾಪಿಯೆಂದು ಹೇಳುವಂತೆಯೇ, ಎಲ್ಲಾ ಭೂತಗಳ ಹೃದಯಾಂತರಾಳದಲ್ಲಿ ಅವು ಅಡಗಿರುವುದೆಂದು ತಿಳಿಯಬೇಕು.

೨೬-೨೭. ಸಕಲೇಂದ್ರಿಯಗಳಿಗೂ ರಕ್ಷಕನಾದವನು ಇಂದ್ರನು. ನಮ್ಮ ಹಸ್ತಗಳು ಇಂದ್ರನಿಗೆ ಸಂಬಂಧಿಸಿದವುಗಳು. ವಿಷ್ಣುವೇ ಸಕಲ ಪುಣ್ಯಪಾಪಫಲಗಳ ಭೋಕ್ತೃವು. ಪಾದ ಅಪಾನಸ್ಥಾನಗಳ ಅಧಿಪತಿಯೇ ಮಹಾವಿಷ್ಣುವೆನಿಸಿ ವಿಶ್ವತೋ ಮುಖನಾದ ವಿಷ್ಣುವು ಮೂರುರೀತಿಯಲ್ಲಿ ಕಂಡುಬರುತ್ತಿರುವನು.

೨೮-೩೦. ಸಕಲ ವರ್ಚಸ್ಸಿಗೂ ಮೂಲಭೂತನಾದ ವಾಯುವು ಮಿತ್ರ ದೇವನೊಡಗೂಡಿ, ಪುರುಷನೆನಿಸಿಕೊಂಡಿರುವನು. ಪುರುಷನು ಬೇರೆಯಲ್ಲ. ಈ

ಅನಿಂದಂ ನಂದಯತ್ಯಸ್ಯ ವಿಶ್ವಾತ್ಮಾಸೌ ಪ್ರಜಾಪತಿಃ ।
ಉದ್ದೇಶಾನ್ಮನಸಃ ಶ್ರೋತ್ರಂ ಪರೋಽಪಪ್ರಸ್ಥಿತೋ ವ್ರಜೇತ್ ॥ ೨೯ ॥

ಮನಸಶ್ಚಾತ್ರ ವಿಜ್ಞೇಯಂ ಯತ್ರ ಚೈವಾತ್ಮನಃ ಸ್ಥಿತಿಃ ।
ನ ಪರೋಽನೇನ ಸಂಯುಕ್ತಶ್ಚಾಂದ್ರಂ ರಾಗೀವ ತನ್ಮನಃ ॥ ೩೦ ॥

ಅಹಂ ಕರ್ತೇತ್ಯಹಂಕಾರಃ ಸರೌದ್ರಃ ಪುರುಷಾಲಯಃ ।
ಅಹಂಕಾರೇಣ ಸಂಯುಕ್ತೋ ಸೋಽಪರೋ ನಾತ್ರ ಯುಜ್ಯತೇ ॥ ೩೧ ॥

ಪರಂ ಸರ್ವಾತ್ಮಕಂ ಬ್ರಹ್ಮ ಜ್ಞಾನಬ್ರಹ್ಮೇತಿ ಬಾಧ್ಯತೇ ।
ತೇನ ಬುಧ್ಯತ್ಯಥೋ ಬುದ್ಧಿರಜ್ಞಾನೇನ ವಿಪರ್ಯಯಃ ॥ ೩೨ ॥

ತ್ರೈವಿಧ್ಯಮಂತಃಕರಣೇ ಯೋಽಭಿಜಾನಾತಿ ತತ್ತ್ವವಿತ್ ।

---

ಪುರುಷನು ಆನಂದಮಯನು. ವಿಶ್ವಾತ್ಮನು. ಸಕಲ ಪ್ರಜೆಗಳಿಗೂ ಮೂಲಭೂತನಾದವನು. ಈತನ ಉದ್ದೇಶದಿಂದಲೇ ಮನಸ್ಸು, ಶ್ರೋತ್ರಾದಿಸಕಲೇಂದ್ರಿಯಗಳಲ್ಲಿ ವ್ಯಾಪಿಸಿ, ಪ್ರಪಂಚವನ್ನೆಲ್ಲಾ ತಿಳಿಯಬಯಸುವುದು. ಪುರುಷ ಸಂಬಂಧವಿಲ್ಲದೆ ಮನಸ್ಸಿಲ್ಲ. ಮನಸ್ಸಿಗೆ ಆಹ್ಲಾದವಾಗಿ ತೋರಿಬರುವವನೂ ಪುರುಷನೇ.

೩೧-೩೨. ಅಹಂಕರ್ತಾ, ಅಹಂಭೋಕ್ತಾ, ಎಂಬ ಭಾವನೆಯು ಪುರುಷನಿಷ್ಠವಾಧರೂ, ಅದು ರುದ್ರದೇವತಾಕವಾದದ್ದು. ಅಹಂಪದವಾಚ್ಯನಾದವನು ಪುರುಷನಲ್ಲದೆ ಮತ್ತಾರೂ ಆಗಲಾರರು. ಬ್ರಹ್ಮವು ಸರ್ವಾತ್ಮಕವಾದದ್ದು. ಜ್ಞಾನರೂಪವಾದದ್ದು. ಬುಧ್ಯತೀತಿ, ಬುದ್ಧಿಃ, ಎಂಬ ವ್ಯುತ್ಪತ್ತಿಯಿಂದ ಸಕಲ ವಿಷಯಗಳನ್ನೂ ಗ್ರಹಿಸುವ ಒಂದು ಅಂತಃಕರಣಭೇದವೇ ಒಂದು ಬುದ್ಧಿ. ಇದು ಅಜ್ಞಾನದಿಂದ ಭಿನ್ನವಾದದ್ದು.

೩೩-೩೪. ಅಂತಃಕರಣವು ಬುದ್ಧಿ, ಅಹಂಕಾರ, ಮನಸ್ಸು ಎಂದು ಮೂರು ವಿಧವಾಗಿರುವುದು. ಅದರಲ್ಲಿ ಬುದ್ಧಿಯು ಸ್ವಚ್ಛವಾದ ದ್ರವದ್ಯವ್ಯವಾದುದರಿಂದ

ದಶ ಚ ತ್ರೀಣಿ ಚೈತಾನಿ ಯೋ ವಿದ್ಯಾದ್ಧಿ ಸ ಯೋಗವಿತ್ ॥ ೩೩ ॥

ಏಷಾಂ ತತ್ತ್ವೇನ ವೈ ಚಾತ್ಮ ನಾಭಾವ್ಯೋ ಭಾವ ಚಿಂತಕೈಃ ।
ಅಭಾವ್ಯಂ ಭಾವಯೇದ್ಭಾವಂ ಭಾವೋ ಭಾವ್ಯಂ ನ ಭಾವಕೈಃ ॥ ೩೪ ॥

ಭಾವಸ್ಯ ಭಾವನಾಜ್ಞಾನಾತ್ಪ್ರಜಾನಾಂ ಚೇದ್ವಿಪರ್ಯಯಃ ।
ತ್ರಿಂಶಕಾತ್ಪ್ರಭೃತಿ ಜ್ಞಾನಂ ಜ್ಞಾನಂ ಸ್ಯಾದ್ಯೋಗವಿತ್ಕ್ರಮಾತ್ ॥ ೩೫ ॥

ಕರ್ಮಕೃಚ್ಚ ವಿದಿತ್ವೈತತ್ ಜ್ಞಾತ್ವೈತದ್ವೈ ಪ್ರಮುಚ್ಯತೇ ।

---

ಅಹಂಕಾರ ಮನಸ್ಸು ಇವುಗಳ ಮೂಲಕ ಘಟಪಟಾದಿ ವಸ್ತುಗಳನ್ನು ಸೇರಿ ಆಯಾ ವಸ್ತುಗಳ ಆಕಾರವನ್ನು ಕಳೆದು ಪರಿಣಾಮಹೊಂದುವುದು. ಈ ಬುದ್ಧಿಯ ಪರಿಣಾಮವೇ ಜ್ಞಾನ. ಇದರಲ್ಲಿ ಪ್ರತಿಫಲಿಸುವುದೇ ಪುರುಷನಿಗೆ ಉಪಲಬ್ಧಿ. ಅನುಭವದಿಂದ ಈ ಅಂತಃಕರಣದ ವಿಭಾಗಗಳನ್ನೂ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳನ್ನೂ ಸರಿಯಾಗಿ ಅರಿತವನೇ ಯೋಗಿಯು. ನಿಜವಾದ ಯೋಗಿಯು ಸದ್ಭಾವನೆಯಿಂದ ಭಾವ್ಯ ವಸ್ತುವನ್ನು, ಹೃದಯದಲ್ಲಿ ಇತರ ವಸ್ತುಗಳಲ್ಲಿ ಚಿತ್ತನಿರೋಧವನ್ನು ಕಲ್ಪಿಸುವುದರ ಮೂಲಕ ಸ್ಥಿರಪಡಿಸಿಕೊಂಡು, ಧ್ಯೇಯವಲ್ಲದ ವಸ್ತುವನ್ನು ದೂರೀಕರಿಸಿ, ಸಮಾಧ್ಯವಸ್ಥೆಯಲ್ಲಿ ಸರ್ವದಾ ಪರಾಪರವಸ್ತುವನ್ನು ಅನುಸಂಧಾನ ಮಾಡುವನು.

೩೫-೩೬. ಆದರೆ ಭಾವ್ಯವಸ್ತುವಿನ ಸ್ವರೂಪವನ್ನರಿಯದೆ ಅಭ್ಯಾಸಮಾಡಿದರೆ, ಯೋಗವು ವಿರುದ್ಧಫಲಕೊಡುವುದು. ಆದಕ್ಕಾಗಿಯೇ ಮೊದಲು ಯೋಗಿಯು ಶಾಸ್ತ್ರಜನ್ಯಜ್ಞಾನವನ್ನು ಆರ್ಜಿಸಿ, ಅನಂತರ ಕರ್ಮಾಚರಣಾದಿಗಳಿಂದ ಚಿತ್ತಶುದ್ಧಿಯನ್ನು ಪಡೆದು, ಯೋಗದ ಫಲವನ್ನು ಹೊಂದಲು ಪ್ರಯತ್ನಿಸಬೇಕು ಅಲ್ಲದೆ

ವಿಸ್ತರೇಣ ತತೋ ಜ್ಞೇಯಂ ಜ್ಞಾನಿನಾಂ ದೀಕ್ಷಿತೇನ ಚ ॥ ೩೬ ॥

ಯೋಗಸಾಧನಯೋರ್ನಿತ್ಯಮವಿಭ್ರಂಶಃ ಪ್ರಕೀರ್ತಿತಃ ।
ಬಹುಪಾಶವೃತೋಽಪ್ಯೇಷ ಜೀವಃ ಕರ್ಮವಶಾನುಗಃ ॥ ೩೭ ॥

ತದ್ಯೋಗಾತ್ಸಚರತ್ಯತ್ರ ತದ್ಯೋಗಾತ್ಕೇವಲಂ ಮಹತ್ ।
ಸಂಭವಂ ಪ್ರಸವಂ ಚೈವ ಚಾಲಯಂ ಚ ಪೃಥಕ್ಪೃಥಕ್ ॥ ೩೮ ॥

ಕರಣಾನ್ಯಾಕೃತಿಶ್ಚಿತ್ತಂ ತ್ರಿಕಂ ಚ ದಶಕಂ ಚ ತತ್ ।
ತದೇವ ಭಾವಯೇಚ್ಚಿನ್ನೋ ಹ್ಯಚ್ಛೇದ್ಯಂ ಛೇದ್ಯವಿತ್ತಮಃ ॥ ೩೯ ॥

ಸರ್ವಭಾವೈರಭಾವ್ಯಂ ತದ್ಭಾವಯೇಚ್ಛಿವಮವ್ಯಯಂ ।

---

ಈ ಯೋಗದರ್ಶನದ ಹೆಚ್ಚಿನ ವಿಷಯುಗಳನ್ನೆಲ್ಲಾ, ಸರಿಯಾದ ಗುರುವಿನಿಂದ ಅರಿತು ಅನಂತರ ಆದನ್ನು ಅನುಷ್ಠಾನಕ್ಕೆ ತಂದುಕೊಳ್ಳಬೇಕು.

೩೭-೩೮. ಯೋಗಜನ್ಯಫಲ, ಸಾಧನಜನ್ಯ (ಜನ್ಮಾಂತರಾರ್ಜಿತ ಫಲ) ಫಲಗಳೂ ಒಂದಕ್ಕೊಂದು ಸಂಬಂಧಿಸಿಯೇ ಇರುವುವು. ಪೂರ್ವಕರ್ಮಾನುಸಾರ ವಾಗಿ ಪಾಶಾದಿಗಳಿಂದ ಬಂಧಿಸಲ್ಪಟ್ಟ ಜೀವನು ಯೋಗಾಭ್ಯಾಸದಿಂದ ಸರ್ವಸಂಚಾರಿ ಯಾಗಿಯೂ ಮಹಾತ್ಮನೆನಿಸಿದವನೂ ಆಗುವನು. ಮನುಷ್ಯನ ಉತ್ಪತ್ತಿ, ಪ್ರಸವ, ಜೀವನ ಇತ್ಯಾದಿಗಳೆಲ್ಲಕ್ಕೂ ಈ ಯೋಗಸಾಧನೆಗಳು ಮಿಳಿತವಾಗಿ ಉತ್ತಮಸ್ಥಿತಿಗೆ ಕಾರಣಗಳೆನಿಸುವುವು.

೩೯-೪೦. ಚಿತ್ತವೂ ಅಂತಃಕರಣಾಂತಃಪಾತಿಯೇ. ಅದೇ ದಶೇಂದ್ರಿಯ ವಿಷಯರೂಪವಾಗಿಯೂ, ಮನಸ್ಸು, ಅಹಂಕಾರ, ಬುಧ್ಯಾತ್ಮನಾ, ಪರಿಣತವಾಗಿರು ವುದು. ಅಂತಹ ಚಿತ್ತನಿರೋಧವೇ ಅಚ್ಛೇದ್ಯನಾದ ಪರಬ್ರಹ್ಮವಸ್ತು ಸಾಕ್ಷಾತ್ಕಾರಕ್ಕೆ ಕಾರಣವು ಎಂಬುದನ್ನರಿತು, ಅವ್ಯಯನೂ ಗುಣಗಣಪರಿಪೂರ್ಣನೂ ನಿರ್ಗುಣ

**ಜ್ಞಾನೇನ ಕೇವಲೇನಾಸ್ಯ ಯೋಗೇನಾಪಿ ಚ ಭಾವಯೇತ್ ।**
**ಕರ್ಮಣಿ ಪ್ರಾಕೃತೇ ಚಾಪಿ ಕ್ವಚಿದ್ಧ್ಯಾಯಂಸ್ತು ಶಾಸ್ತ್ರತಃ ॥ ೪೦ ॥**

**ಇತಿ ಶ್ರೀ ಸಾಂಬಪುರಾಣೇ ಜ್ಞಾನೋತ್ತರೇ ತ್ರ್ಯಶೀತಿತಮೋಧ್ಯಾಯಃ.**

---

ಸ್ವರೂಪಿಯೂ, ಆದ ಪರಶಿವನನ್ನು ಸರಿಯಾಗಿ ಧ್ಯಾನಿಸಿ, ಪ್ರಾಕೃತವಾದ ಕರ್ಮ ಜಾಲದಿಂದ ಮುಕ್ತನಾಗಬೇಕು. ಇದಕ್ಕೆ ಶಾಸ್ತ್ರಜ್ಞಾನವೂ ಅತ್ಯಾವಶ್ಯಕವೆನಿಸುವುದು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಎಂಭತ್ತುಮೂರನೆಯ
ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಚತುರಶೀತಿತಮೋಽಧ್ಯಾಯಃ

---

॥ ಶ್ರೀ ಸಾಂಬ ಉವಾಚ ॥

ಭಗವನ್ ಪ್ರಾಣಿನಸ್ಸರ್ವೇ ಕುಷ್ಠರೋಗಾದ್ಯುಪದ್ರವೈಃ ।
ಸದಾ ಸಂಪೀಡ್ಯಮಾನಾಸ್ತೇ ತಿಷ್ಠಂತಿ ಮುನಿಸತ್ತಮ ॥ ೧ ॥

ಯೇನ ಕರ್ಮವಿಪಾಕೇನ ಸಂಭವಂತಿ ಮಹಾಮತೇ ।
ತತ್ಸರ್ವಂ ಶ್ರೋತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರಂ ॥ ೨ ॥

॥ ನಾರದ ಉವಾಚ ॥

ವ್ರತೋಪವಾಸೈರ್ಯೈರ್ಭಾನುರ್ನಾನ್ಯಜನ್ಮನಿ ತೋಷಿತಃ ।
ತೇ ನರಾ ಯದುಶಾರ್ದೂಲ ಕುಷ್ಠರೋಗಾದಿಭಾಗಿನಃ ॥ ೩ ॥

---

## ಎಂಭತ್ತನಾಲ್ಕನೆಯ ಅಧ್ಯಾಯ

೧-೨. ಮಹಾ ಭಕ್ತಾಗ್ರೇಸರನಾದ ಸಾಂಬನು ನಾರದಮಹರ್ಷಿಯನ್ನು ಕುರಿತು “ ಮಹಾತ್ಮನಾದ ಋಷಿಶ್ರೇಷ್ಠನೇ, ಪ್ರಪಂಚದಲ್ಲಿ ಕುಷ್ಠರೋಗವೇ ಮೊದಲಾದ ಮಹಾ ರೋಗಗಳಿಂದ ಪ್ರಾಣಿಗಳು ಅತಿಶಯವಾದ ದುಃಖಗಳನ್ನು ಅನುಭವಿಸುತ್ತಿರುವರಲ್ಲಾ ! ಅಂತಹ ಉಪದ್ರವಗಳು ಯಾವ ಕರ್ಮ ಪರಿಪಾಕದಿಂದ ಉದ್ಭವಿಸುವುವು ? ದಯೆಯಿಟ್ಟು ಹೇಳು ” ಎಂದು ಕೇಳಿಕೊಳ್ಳಲು ಅದಕ್ಕೆ ನಾರದಮಹರ್ಷಿಯು ಹೀಗೆಂದನು.

೩-೪. ಎಲೈ ಯದುಶ್ರೇಷ್ಠನಾದ ಸಾಂಬಮಹಾರಾಜನೆ, ಯಾರು ವ್ರತೋಪವಾಸಾದಿಗಳಿಂದ ತಮ್ಮ ಜೀವಿತಕಾಲದಲ್ಲಿ ಸೂರ್ಯಪರಮಾತ್ಮನನ್ನು ಭಕ್ತಿಯಿಂದಾ

॥ ಸಾಂಬ ಉವಾಚ ॥

ತೇಷಾಂ ರೋಗೋಪಶಮನಂ ಜಾಯತೇ ಚ ಕಥಂ ಮುನೇ ।
ತತ್ಸರ್ವಂ ಶ್ರೋತುಮಿಚ್ಛಾಮಿ ಸತ್ಯಂ ಸತ್ಯಂ ವದಸ್ವ ಮೇ ॥ ೪ ॥

॥ ನಾರದ ಉವಾಚ ॥

ಶೃಣು ಸಾಂಬ ಮಹಾಬಾಹೋ ಕುರ್ವಂತು ರವಿಪೂಜನಂ ।
ಯತ್ಕೃತ್ವಾ ಸರ್ವರೋಗೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೫ ॥

॥ ಸಾಂಬ ಉವಾಚ ॥

ಏತತ್ಸರ್ವಂ ತ್ವಯಾಖ್ಯಾತಂ ಬಹ್ವರ್ಥಂ ಶ್ರುತಿವಿಸ್ತರಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೬ ॥

---

ರಾಧಿಸುವುದಿಲ್ಲವೋ, ಅಂತಹವರು ನೀನು ಮೇಲೆಹೇಳಿದಂತಹ ದುಷ್ಟವ್ಯಾಧಿಗಳಿಗೆ ಬಲಿಯಾಗುವರು ಎಂದು ಹೇಳಲು ಮತ್ತೆ ಸಾಂಬನು "ಮಹಾ ಮುನಿಯೇ, ಅಂತಹ ರೋಗಗಳ ನಿವಾರಣೆಗಾಗಿ ಮಾಡಬೇಕಾದ ಶಾಂತಿಕರ್ಮವೇನಿದ್ದರೂ ನನ್ನ ಮೇಲಿನ ಮಮತೆಯಿಂದ ವಿವರಿಸಿ ಹೇಳುವವನಾಗು" ಎಂದು ಮತ್ತೆ ಪ್ರಾರ್ಥಿಸಿ ಕೊಂಡನು.

೫-೬. ಆಗ ನಾರದನು "ಎಲೈ ಸಾಂಬನೇ, ಎಂತಹ ರೋಗಿಯೇ ಆಗಲಿ, ಸೂರ್ಯಾರಾಧನೆಯನ್ನು ಭಕ್ತಿಯಿಂದಾಚರಿಸಿದರೆ, ನಿಜವಾಗಿಯೂ ಆವ್ಯಾಧಿಗಳಿಂದ ಮುಕ್ತನಾಗಿ ಸಂಪೂರ್ಣಾರೋಗ್ಯವನ್ನು ಪಡೆಯುವನು. ಇದನ್ನು ನಂಬು" ಎಂದು ದೃಢವಾಗಿ ನುಡಿಯಲು ಮತ್ತೆ ಸಾಂಬರಾಜನು 'ಮಹರ್ಷಿಯೇ, ಸೂರ್ಯಾರಾಧನೆಯ ಕ್ರಮವನ್ನೆಲ್ಲಾ ನೀನು ನನ್ನ ಮೇಲಿನ ಅಭಿಮಾನದಿಂದ ವಿಸ್ತಾರವಾಗಿ ಹೇಳಿರುವೆ. ಅದರ ಶ್ರವಣದಿಂದಲೇ ಸಕಲ ಪಾಪಗಳೂ ನಿವಾರಣೆಯಾಗುವುವು.

ಸೂರ್ಯಮುದ್ದಿಶ್ಯ ಕಿಂ ದೇಯಂ ಪಾಠಕಾಯ ಮಹಾತ್ಮನೇ।
ಯೇನ ತುಷ್ಯೇತ್ತು ಭಗವಾನ್ ಭಾಸ್ಕರಃ ಪಾಪತಸ್ಕರಃ ॥ ೭ ॥

॥ ನಾರದ ಉವಾಚ ॥

ಶೃಣು ಸಾಂಬ ಮಹಾಬಾಹೋ ಕಥಯಾಮಿ ತವಾನಘ ।
ತಮೇವ ಸೂರ್ಯಂ ವಿಜ್ಞಾಯ ಪೂಜಯಿತ್ವಾ ಯಥಾವಿಧಿ ॥ ೮ ॥

ಗಂಧಪುಷ್ಪಾಕ್ಷತೈಶ್ಚೈವ ಧೂಪದೀಪೈಸ್ತಥೋತ್ತಮೈಃ ।
ಸ್ವರ್ಣಾಲಂಕಾರವಸ್ತ್ರೈಶ್ಚ ಶಿರೋರತ್ನವಿಭೂಷಿತೈಃ ॥ ೯ ॥

ಪ್ರಪೂಜ್ಯ ಸೂರ್ಯರೂಪಂ ತಂ ದೇಯಾ ಚ ಕಪಿಲಾ ಶುಭಾ ।
ಗೋಧೂಮಯವಧಾನ್ಯಾನಿ ಮಾಷಮುದ್ಗಾಂಸ್ತಿಲಾಂ ಸ್ತಥಾ ॥ ೧೦ ॥

---

೭. ಮಹರ್ಷಿಯೇ, ಈ ಪುರಾಣವನ್ನು ಓದಿ ಹೇಳಿದವರಿಗೆ ಸೂರ್ಯಪ್ರೀತ್ಯರ್ಥವಾಗಿ ಏನನ್ನು ದಾನಮಾಡಬೇಕು ? ಯಾವ ದಾನದಿಂದ ಭಾಸ್ಕರನು ದಾನಿಯ ಸಕಲ ಪಾಪಗಳನ್ನೂ ಹೋಗಲಾಡಿಸಿ ತಾನು ತೃಪ್ತಿಪಡುವನು ? ಎಂದುಪ್ರಶ್ನಿಸಲು

೮-೧೦. ಆಗ ನಾರದನು " ಎಲೈ ಸಾಂಬನೇ, ಯಾರು ಈ ಪುರಾಣವನ್ನು ಭಕ್ತಿಪುರಸ್ಸರವಾಗಿ ಓದಿ ಜನರಿಗೆ ಉಪದೇಶಿಸುವರೋ, ಅವರನ್ನೇ ಸೂರ್ಯನೆಂದು ಭಾವಿಸಿ, ಗಂಧಪುಷ್ಪಾಕ್ಷತಾದಿಗಳಿಂದಲೂ, ಧೂಪದೀಪಾದಿಗಳಿಂದಲೂ ಆತನನ್ನು ಅರ್ಚಿಸಬೇಕು. ಮತ್ತು ಆ ಪಾಠಕನಿಗೆ ಸ್ವರ್ಣಾಭರಣಗಳನ್ನೂ, ದಿವ್ಯವಸ್ತ್ರಗಳನ್ನೂ, ಶಿರೋಮಣ್ಯಾದಿ ರತ್ನಾಭರಣಗಳನ್ನೂ ಕೊಟ್ಟು ಸೂರ್ಯಪ್ರೀತ್ಯರ್ಥವಾಗಿ ಕಪಿಲವರ್ಣದ ಗೋದಾನಮಾಡಬೇಕು. ಅಲ್ಲದೆ ಶ್ರೀಸೂರ್ಯನಾರಾಯಣರೂಪಿಯಾದ ಆ ಪಾಠಕನಿಗೆ, ಗೋಧಿ, ಯವ, (ಅಕ್ಕಿ) ಉದ್ದು, ಹೆಸರು, ಎಳ್ಳು, ಮುಂತಾದ ಧಾನ್ಯಗಳನ್ನು ಸಮರ್ಪಿಸಬೇಕು.

ಗಜಾಶ್ವಮಹಿಷೀರ್ದದ್ಯಾದ್ರತ್ನಾನಿ ವಿವಿಧಾನಿ ಚ ।
ಹಿರಣ್ಯಂ ರಜತಂ ಚೈವ ಕಾಂಸ್ಯತಾಮ್ರಸ್ಯ ಭಾಜನಂ ॥ ೧೧ ॥

ದಾಸದಾಸ್ಯೌ ತಥಾ ದದ್ಯಾದ್ಭೂಮಿಂ ಸಸ್ಯವತೀಂ ತಥಾ ।
ಪಟ್ಟವಸ್ತ್ರಾಣ್ಯನೇಕಾನಿ ದದ್ಯಾದ್ವೈ ಶುದ್ಧಮಾನಸಃ ॥ ೧೨ ॥

ನಿಕ್ಷುಭಾ ಚ ತಥಾ ರಾಜ್ಞೀ ದ್ವೇ ಭಾರ್ಯೇ ಚ ವಿವಸ್ವತಃ ।
ಉದ್ದಿಶ್ಯ ತಾನಿ ದೇಯಾನಿ ವಸ್ತ್ರಾಲಂಕರಣಾನಿ ಚ ॥ ೧೩ ॥

ಏವಂ ಯಃ ಕುರುತೇ ಭಕ್ತ್ಯಾ ಸಮರ್ತ್ಯೋಽತ್ರ ಮಹೀತಲೇ ।
ಪುತ್ರಪೌತ್ರಾದಿಸಂಯುಕ್ತೋ ಹರ್ಷನಿರ್ಭರಮಾನಸಃ ॥ ೧೪ ॥

---

೧೧-೧೨. ಮತ್ತು ಶ್ರೀ ಸೂರ್ಯ ದೇವತಾಪ್ರೀತ್ಯರ್ಥವಾಗಿಯೇ ಆತನಿಗೆ ಆನೆ, ಕುದುರೆ, ಎಮ್ಮೆ, ರತ್ನಗಳು, ಸುವರ್ಣ, ರಜತ, ಇನ್ನೂ ಕಂಚು ಮತ್ತು ತಾಮ್ರದಪಾತ್ರೆಗಳು ಇವುಗಳನ್ನೂ, ದಾಸದಾಸಿಯರು, ಸಸ್ಯಪೂರ್ಣವಾದ ಭೂದಾನ ನಾನಾವಿಧವಾದ ಪಟ್ಟವಸ್ತ್ರಗಳು ಇವೆಲ್ಲವನ್ನೂ, ಶುದ್ಧಮನಸ್ಸಿನಿಂದ ದಾನರೂಪ ವಾಗಿ ಕೊಡಬೇಕು.

೧೩-೧೪. ಸೂರ್ಯಪತ್ನಿಯರಾದ ನಿಕ್ಷುಭಾ ಮತ್ತು ರಾಜ್ಞಿ ದೇವತೆಯರ ಪ್ರೀತ್ಯರ್ಥವಾಗಿ ಸಮಸ್ತ ವಸ್ತ್ರಾಲಂಕಾರಗಳನ್ನೂ ದಾನಮಾಡಬೇಕು. ಈ ರೀತಿ ಭಕ್ತಿಯಿಂದ ಸೂರ್ಯವ್ರತಾದಿಗಳನ್ನು ನಡೆಸಿದವರು, ಪುತ್ರಪೌತ್ರಾದಿ ನಿಖಿಲಸಂಪತ್ತು ಗಳಿಂದಕೂಡಿ, ಸಂತುಷ್ಟಾಂತರಂಗವುಳ್ಳವರಾಗಿ ಐಹಿಕ ಸುಖಗಳನ್ನೆಲ್ಲಾ ಅನು ಭವಿಸಿ, ಕೊನೆಗೆ ಸೂರ್ಯಲೋಕವನ್ನು ಹೊಂದುವರೆಂಬುದರಲ್ಲಿ ಸಂಶಯವಿಲ್ಲ. ಈ ಪುರಾಣವನ್ನು ಭಕ್ತಿಯಿಂದ ಕೇಳಿದವರಿಗೆ ಹದಿನೆಂಟು ಪುರಾಣಗಳ ಶ್ರವಣಫಲವೂ ಲಭಿಸುವುದೆಂದು ಪ್ರಮಾಣಪೂರ್ವಕವಾಗಿ ಹೇಳುವರು. ಎಂದು ನಾರದಮಹರ್ಷಿ

ಭುಕ್ತ್ವಾ ತು ಸಕಲಾನ್ ಭೋಗಾನ್ ಸೂರ್ಯಲೋಕೇ ಮಹೀಯತೇ ।
ಅಷ್ಟಾದಶಪುರಾಣಾನಾಂ ಶ್ರವಣೇ ಯತ್ಫಲಂ ಲಭೇತ್ ।
ತತ್ಫಲಂ ಸಮವಾಪ್ನೋತಿ ಸತ್ಯಂ ಸತ್ಯಂ ವದಾಮ್ಯಹಂ ॥ ೧೫ ॥

ಇತಿ ಶ್ರೀ ಸಾಂಬಪುರಾಣೇ ವಸಿಷ್ಠ ಬೃಹದ್ಬಲ ಸಂವಾದೇ
ಚತುರಶೀತಿತಮೋಽಧ್ಯಾಯಃ.

ಶ್ರೀ ಸಾಂಬ ಸದಾಶಿವಾರ್ಪಣಮಸ್ತು.

ಶುಭಂ ಭವತು.

ಸಮಾಪ್ತೋಽಯಂ ಗ್ರಂಥಃ.

---

ಗಳು ಸಾಂಬರಾಜನಿಗೆ ಹೇಳಿದರೆಂದು ವಸಿಷ್ಠಮಹರ್ಷಿಗಳು ಬೃಹದ್ಬಲರಾಜನಿಗೆ ವಿಶ್ವಾಸದಿಂದ ಸಾಂಬೋಪಾಖ್ಯಾನವನ್ನು ವಿವರಿಸಿದರೆಂಬಲ್ಲಿಗೆ,

ಶ್ರೀ ಸಾಂಬಪುರಾಣದಲ್ಲಿ ವಸಿಷ್ಠ ಬೃಹದ್ಬಲ ಸಂವಾದರೂಪವಾದ
ಸೂರ್ಯವ್ರತಮಹಿಮೆಯನ್ನು ವಿವರಿಸುವ ಎಂಭತ್ತುನಾಲ್ಕನೆಯ
ಅಧ್ಯಾಯವು ಮುಗಿದುದು.

ಇಲ್ಲಿಗೆ ಶ್ರೀ ಸಾಂಬಪುರಾಣದ ಕನ್ನಡ ಭಾಷಾನುವಾದವು
ಮುಗಿದುದು.

ಶುಭಂ ಭೂಯಾತ್

---